ಶ್ರೀಶೇಷಾಚಲ ಪ್ರೆಸ್ಸ



ಶ್ರೀ ಶೇಷಾಚಲ ಪ್ರೆಸ್ಸ ಮತ್ತು ಗ್ರಂಥಮಾಲೆ,
ಪೋ. ಆನಂದವನ, ಜಿ. ಧಾರವಾಡ.
श्री शेषाचल प्रेस व ग्रंथमाला.
पो. आनंदवन, जि. धारवाड
SHRI SHESHACHAL PRESS & GRANTHAMALA,
Post. ANANDVAN, Dist. Dharwar.

# ಶೌರ್ಯ ಸಂಜೀವನ

ಅಥವಾ

# ಚಾಲುಕ್ಯ ಸಮ್ರಾಟ್.

[ಐತಿಹಾಸಿಕ ಕಾದಂಬರಿ]

ಲೇಖಕ:

ಕೈ. ನಾ. ರಾ. ತ್ರ್ಯ. ಕರ್ಪೂರ.

ಪ್ರಕಾಶಕ:

ಭಿ. ಪ. ಕಾಳೆ,

ಪ್ರೊ. ಶ್ರೀ ಶೇಷಾಚಲ ಗ್ರಂಥಮಾಲೆ,

ಆನಂದವನ.

(೨ನೇ ಆವೃತ್ತಿ)

1933

ಬೆಲೆ ೧೪ ಆಣೆ

# ನಮ್ಮಲ್ಲಿ ಸಿಗುವ ಐತಿಹಾಸಿಕ ಕಾದಂಬರಿಗಳು.



# ಪ್ರಸ್ತಾವನೆ.



ಕನ್ನಡಿಗರ ಆನಂದಕ್ಕೆ ಪಾತ್ರವಾದ ಈ ಸರಸ ಕಾದಂಬರಿಯು ವಾಚಕರ ಪುಣ್ಯದಿಂದ ಪೂರ್ಣವಾಯಿತೆಂದು ಬರೆಯಲು ತುಂಬಾ ಸಂತೋಷವೆನಿಸುತ್ತದೆ. ಮನುಷ್ಯನಲ್ಲಿ ಉಜ್ವಲ ಗುಣಗಳಿದ್ದ ಮಾನದಿಂದ ಅವನ ಗೌರವವು ಹೆಚ್ಚುತ್ತಿದೆಯೆಂಬದನ್ನು ಈ ಕಾದಂಬರಿಯು ಸರಸವಾಗಿ ವ್ಯಕ್ತಗೊಳಿಸುತ್ತದೆ. ಭೂವಡ ಸಮ್ರಾಟನು ಅಸಾಮಾನ್ಯ ಶಕ್ತಿಶಾಲಿಯಾಗಿರುವದಕ್ಕೆ ಅವನಲ್ಲಿರತಕ್ಕ ನೀತಿ-ಧರ್ಮ-ಪ್ರೇಮಗಳು ಹೇಗೆ ಕಾರಣವಾದವೆಂಬದನ್ನು ವಾಚಕರು ಇದರಲ್ಲಿ ಕಂಡುಕೊಳ್ಳಬಹುದು.

ಚಾಲುಕ್ಯ ಸಾಮ್ರಾಜ್ಯವು ಕರ್ನಾಟಕದಲ್ಲಿ ಬಹು ದಿವಸಗಳ ವರೆಗೆ ವೈಭವದಿಂದ ಮೆರೆಯಿತು. ಈ ವಂಶದ ಸಮ್ರಾಟರ ಕಾಲದಲ್ಲಿಯೇ ಕರ್ನಾಟಕವು ಬಹು ಖ್ಯಾತಿಯನ್ನು ಹೊಂದಿ, ಪರರಾಷ್ಟ್ರಗಳ ಮೇಲೆ ತಮ್ಮ ಪ್ರಭುತ್ವವನ್ನು ನಡೆಯಿಸಿತು! ಆಗಿನ ಕಾಲದ ಕರ್ನಾಟಕದ ಭಾಗ್ಯೋದಯವನ್ನು ಬಣ್ಣಿಸುವರಾರು? ಮಿಗಿಲಾದ ಶೂರಪುರುಷರು ಕರ್ನಾಟಕ ಭೂಮಾತೆಯ ಪುಣ್ಯೋದರದಲ್ಲಿ ಹುಟ್ಟಿರುವರೆಂಬದಕ್ಕೆ ಪ್ರಸ್ತುತದ ಕಾದಂಬರಿಯ ನಾಯಕನಾದ ಭೂವಡ ಸಮ್ರಾಟನೇ ಉದಾಹರಣ ಸ್ವರೂಪನಾಗಿರುವನು. ಇರಲಿ. ಧರ್ಮ-ನೀತಿಗಳಿದ್ದಲ್ಲಿ ಜಯವು ಸಿಗುತ್ತದೆಂಬ ಸಿದ್ಧಾಂತಕ್ಕನುಸಾರವಾಗಿ ಭೂವಡ ಸಮ್ರಾಟನು ಮೇಲಾದ ಧರ್ಮ-ನೀತಿಗಳ ಬೆಂಬಲದಿಂದಲೇ ಗುರ್ಜರ ಪ್ರಾಂತವನ್ನು ಪಾದಾಕ್ರಾಂತವಾಗ ಮಾಡಿದ್ದರಿಂದ, ಈ ಕಾದಂಬರಿಗೆ ಶೌರ್ಯಸಂಜೀವನವೆಂಬ ಹೆಸರನ್ನಿಟ್ಟಿದೆ. ಇದರ ವಾಚನದಿಂದ ಕನ್ನಡಿಗರಲ್ಲಿ ಸ್ವಾಭಿಮಾನವು ಜಾಗ್ರತವಾದರೆ ಲೇಖಕನು ಕೃತಾರ್ಥನಾಗುವನು.

ಲೇಖಕ.

# ವಿಷಯಾನುಕ್ರಮಣಿಕೆ.







# ಶೌರ್ಯಸಂಜೀವನ

ಅಥವಾ

# ಚಾಲುಕ್ಯ ಸಮ್ರಾಟ್.

## ೧ ಈ ಪುಣ್ಯಪುರುಷನು ಯಾವನಿರಬಹುದು?

ಅರವಲೀ ಪರ್ವತದ ನಿಬಿಡವಾದ ಅರಣ್ಯವು; ಗಗನಚುಂಬಿತ ವೃಕ್ಷಗಳ ನೆರಳಿನಿಂದ ಆ ಪ್ರದೇಶದ ಸಮಸ್ತ ಭೂಭಾಗವು ಮುಚ್ಚಿಹೋಗಿದೆ. ಎತ್ತರವಾದ ಶಿಖರಶ್ರೇಣಿಗಳು ಮಾತ್ರ ಎಣಿಕೆ ಹಾಕುವಷ್ಟು ಸ್ಪಷ್ಟವಾಗಿ ಗೋಚರಿಸುತ್ತಲಿವೆ. ಸೂರ್ಯಪ್ರಕಾಶವೇ ಇಲ್ಲದ್ದರಿಂದ ಹಿಂಸ್ರಪಶುಗಳು ಹಗಲ ಹೊತ್ತಿನಲ್ಲಿಯೇ ಸಂಚರಿಸುತ್ತಲಿವೆ. ಇಂಥ ಭೀಕರವಾದ ಆ ಅರಣ್ಯದಲ್ಲಿ ಒಂದು ಶಿಖರದ ಬುಡದಲ್ಲಿ ಒಂದು ವಿಶಾಲವಾದ ಗುಹೆಯಿರುವದು. ಆ ಗುಹೆಯು ಇಂಥ ನಿರ್ಜನವಾದ ಘೋರಾರಣ್ಯದಲ್ಲಿದ್ದರೂ ಅದರಲ್ಲಿ ಒಂದು ಬಗೆಯ ಪ್ರಶಾಂತತೆಯು ಕಂಡು ಬರುತ್ತಿರುವದು. ಅದರ ಈ ಪ್ರಶಾಂತತೆಯಿಂದ ಅದೊಂದು ಸಜ್ಜನರ ಸ್ಥಾನವಾಗಿರಬಹುದೆಂಬ ಕಲ್ಪನೆಯು ಪ್ರೇಕ್ಷಕರ ಮನಸ್ಸಿನಲ್ಲಿ ತಟ್ಟನೆ ಹುಟ್ಟುತ್ತಿರುವದು.

ನಿಜವಾಗಿಯೂ ಆ ಗುಹೆಯು ನಿರಂಜನ ಯೋಗಿಗಳ ಆಶ್ರಮವಾಗಿತ್ತು. ಅವರ ತಪಃಪ್ರಭಾವದಿಂದ ಅಲ್ಲಿ ಯಾವಾಗಲೂ ನಿರ್ಭಯತೆಯು ವ್ಯಕ್ತವಾಗುತ್ತಿತ್ತು. ಜಟಾ-ಗಡ್ಡಗಳನ್ನು ತಳೆದ ಆ ಯೋಗಿಗಳು ಯಾವಾಗಲೂ ಧ್ಯಾನಾಸಕ್ತರಾಗಿರುತ್ತಿದ್ದದರಿಂದ, ಮೂರ್ತಿವಂತ ಶಾಂತಿಯೇ ಮಾನುಷರೂಪಗೊಂಡಂತೆ ತೋರುತ್ತಿದ್ದಿತು. ಅವರ ಶಾಂತಿಮಯ ಕಾಂತಿಯಿಂದ ಆ ಆಶ್ರಮದ ಎಡಬಲದ ಹಿಂಸ್ರಪಶುಗಳು ತಮ್ಮ ಸ್ವಾಭಾವಿಕ ಕ್ರೌರ್ಯವನ್ನು ಮರೆತು ಬಿಟ್ಟು, ಸಾಧುಪ್ರಾಣಿಗಳಾಗಿ ವ್ಯವಹರಿಸುತ್ತಿದ್ದವು; ಆದ್ದರಿಂದ ಆ ಯೋಗಿಗಳ ಆಶ್ರಮವು ಅಮಾನುಷಸ್ಥಾನವೆಂದು ಆ ಕಾಲದಲ್ಲಿ ಪ್ರಸಿದ್ಧಿ ಪಡೆದಿತ್ತು.

ಇಂದು ಆ ದಿವ್ಯಾಶ್ರಮದಲ್ಲಿ ಓರ್ವ ತರುಣಿಯು ಪದ್ಮಾಸನಸ್ಥಳಾಗಿ ಕುಳಿತುಕೊಂಡಿದ್ದಳು. ಆಕೆಯ ಸಮ್ಮುಖದಲ್ಲಿ ನಕ್ಷತ್ರದಂತೆ ಕಾಂತಿಯನ್ನು ಬೀರುವ ಒಂದು ಸ್ಫಟಿಕಲಿಂಗವು ರತ್ನಪೀಠದ ಮೇಲೆ ಪರಿಶೋಭಿಸುತಲಿತ್ತು. ನಳನಳಿಸುವ ಬಿಲ್ವ ಹಾಗು ಶುಭ್ರಾಕ್ಷತೆಗಳು ಆ ಲಿಂಗದ ಮೇಲೆ ಒಪ್ಪುತ್ತಿದ್ದವು. ಆದ್ದರಿಂದ ಆ ಸುಂದರಿಯು ಅದೇ ಪೂಜೆಯನ್ನು ಮುಗಿಸಿ ಧ್ಯಾನಸ್ಥಳಾಗಿರುವ

ಳೆಂದು ತರ್ಕಿಸಬಹುದಾಗಿತ್ತು. ಮುಂದೆ ಕೆಲ ಹೊತ್ತಿನ ಮೇಲೆ ಆ ಸ್ತ್ರೀಯು ಧ್ಯಾನವಿಸರ್ಜನೆ ಮಾಡಿ, ಅಂಜಲಿಯಲ್ಲಿ ಬಿಲ್ವ ಶುಭ್ರಾಕ್ಷತೆಗಳನ್ನು ತಕ್ಕೊಂಡು, ಕೈ ಮೇಲಕ್ಕೆತ್ತಿ ಅವನ್ನು ಶಿವಲಿಂಗಕ್ಕೆ ಸಮರ್ಪಿಸಿ ನಮಸ್ಕರಿಸಿದಳು. ಬಳಿಕ ಅವಳು ಆ ಲಿಂಗವನ್ನು ಕರಂಡಕದಲ್ಲಿ ಹಾಕಿ, ಬಾಯಿ ಮುಚ್ಚಿ ಒಂದು ಜಗುಲಿಯ ಮೇಲಿಟ್ಟು ಕುಳಿತುಕೊಳ್ಳಲು, "ಮಗೂ, ರೂಪಸುಂದರೀ" ಎಂದು ಯಾರೋ ಒದರಿದ ಹಾಗಾಯಿತು. ಕೂಡಲೆ ಅವಳು ಒಳಗೆ ಹೋಗಿ ಯೋಗಿಗಳನ್ನು ನಮಸ್ಕರಿಸಿ:—"ಸ್ವಾಮಿ, ನನ್ನನ್ನು ಕರೆದಿರೇನು?" ಎಂದು ವಿನಯದಿಂದ ಕೇಳಿದಳು. ಅದಕ್ಕೆ ಯೋಗಿಗಳು:—"ಹೌದು ಕರೆದೆನು. ಈ ದಿನ ನೀನು ಆಶ್ರಮ ಬಿಟ್ಟು ಬಿಲ್ವ ತರಲಿಕ್ಕೆ ಸಹ ಹೊರಬೀಳಬೇಡ; ನಾನು ಜಪಾಸಕ್ತನಾಗುವೆನು" ಎಂದು ನುಡಿದು, ಮೌನವನ್ನು ಧರಿಸಿದರು. ರೂಪಸುಂದರಿಯು 'ಅಪ್ಪಣೆ' ಎಂದು ನುಡಿದು, ಅವರನ್ನು ಮತ್ತೊಮ್ಮೆ ನಮಸ್ಕರಿಸಿ, ತನ್ನ ಜಗುಲಿಗೆ ಬಂದು ಮನದಲ್ಲಿ ಏನನ್ನೋ ವಿಚಾರ ಮಾಡುತ್ತ ಕುಳಿತುಕೊಂಡಳು.

ಈ ಮಾತಿಗೆ ಕೆಲವು ತಾಸು ಕ್ರಮಿಸಲು, ಆ ಆಶ್ರಮದ ಬಾಗಿಲ ಬಳಿಯಲ್ಲಿ ನಾಲ್ವರು ಭಿಲ್ಲರು ಒಂದು ಡೋಲಿಯನ್ನು ಹೊತ್ತುಕೊಂಡು ಬಂದರು. ಆ ಡೋಲಿಯ ಮುಂದೆ ಮಧ್ಯಮ ವಯಸ್ಸಿನ ಮತ್ತೊಬ್ಬ ಮನುಷ್ಯನಿದ್ದನು. ಅವನು ಭಿಲ್ಲರಿಗೆ ಡೋಲಿಯನ್ನು ಕೆಳಗಿಡ ಹೇಳಿ, ತಾನು ಆಶ್ರಮವನ್ನು ಪ್ರವೇಶಿಸಿದನು. ಅಕಸ್ಮಾತ್ತಾಗಿ ಬಂದ ಆ ಮನುಷ್ಯನನ್ನು ನೋಡಿ, ರೂಪಸುಂದರಿಯು ಸಂತೋಷಬಟ್ಟು:—"ಅಜಯಾ, ಹೊತ್ತಿಲ್ಲದ ಹೊತ್ತಿನಲ್ಲಿ ಈಗೇಕೆ ಬಂದೆ? ರಾಜಧಾನಿಯಲ್ಲಿ ಎಲ್ಲವೂ ಕ್ಷೇಮವಷ್ಟೇ?" ಎಂದು ಕೇಳಿದಳು. ರೂಪಸುಂದರಿಯ ಈ ಪ್ರಶ್ನೆಗೆ ಅಜಯನು ಬಾಯಿಂದ ಉತ್ತರವನ್ನೇನೂ ಕೊಡದೆ ಒಂದು ಪತ್ರವನ್ನು ಮಾತ್ರ ಆಕೆಯ ಮುಂದಿಟ್ಟನು. ರೂಪಸುಂದರಿಯು ಪತ್ರವನ್ನು ತಕ್ಕೊಂಡು ಓದತೊಡಗಿದಳು: "ಪ್ರಿಯ ಕುಮಾರೀ, ರೂಪಸುಂದರೀ, ವೃದ್ಧಾಪ್ಯದಲ್ಲಿ ನಿನ್ನಂಥ ಸತ್‌ಪುತ್ರಿಯ ಮುಖಕಮಲವನ್ನು ನೋಡುವದು ಕೂಡಾ ನಮ್ಮ ಪ್ರಾರಬ್ಧದಲ್ಲಿಲ್ಲ. ನಿನ್ನ ಹಿತಕ್ಕಾಗಿಯೇ ನಾವು ನಿನ್ನ ವಿಯೋಗವನ್ನು ಸಹಿಸಿಕೊಂಡಿರಬೇಕೆಂದು ಮನಸ್ಸು ಕಲ್ಲು ಮಾಡಿದರೆ, ಅದಕ್ಕೂ ನಮ್ಮ ದುರ್ದೈವವು ವಿಘ್ನವನ್ನು ತರುತ್ತಿರುವದು. ಈಗ ನನ್ನ ದೇಹಾಲಸ್ಯವು ಹೆಚ್ಚುತ್ತಲಿರುವದು. ಅಂತ್ಯದಲ್ಲಿ ಒಮ್ಮೆಯಾದರೂ ನಿನ್ನ ಮುಖವನ್ನು ನೋಡಿ ಪ್ರಾಣ ಬಿಡಬೇಕೆಂದು ಬಯಸುವೆನು."

ನಿನ್ನ ಪ್ರಿಯಪಿತಾ,

ವೃದ್ಧ ಲಕ್ಷ್ಮಣದಾಸ.

ಈ ಮೇರೆಗೆ ಬರೆದಿರುವ ಪತ್ರವನ್ನೋದಿ ರೂಪಸುಂದರಿಯ ಹೃದಯಾನಂದವು ಕುಗ್ಗಿತು. ಅವಳ ಮನೋಹರವಾದ ಮುಖವು ಬಾಡಿತು. ಶಾಂತವಾದ ಅವಳ ಮನಸ್ಸು ಚಂಚಲವಾಯಿತು. ಪ್ರಿಯತಂದೆಯನ್ನು ಕಾಣುವೆನೋ-ಇಲ್ಲವೋ ಎಂಬ ಚಿಂತೆಯು ಅವಳನ್ನು ಆವರಿಸಿತು. ಅವಳು ಒಳಗೆ ಹೋಗಿ ನೋಡುತ್ತಾಳೆ; ಯೋಗಿಗಳು ಧ್ಯಾನತತ್ಪರರಾಗಿ ಕುಳಿತುಕೊಂಡಿದ್ದರು ಅವರು ಏಳುವ ವರೆಗೆ ನಿಂತರೆ, ತನ್ನ ಪ್ರಯಾಣಕ್ಕೆ ಅವರು ಸಮ್ಮತಿಸುವರೋ-ಇಲ್ಲವೋ ಎಂಬ ಸಂಶಯವು ಬರಹತ್ತಿದ್ದರಿಂದ, ಅವಳು ಬೇಗನೆ ಹೊರಡುವದನ್ನು ನಿಶ್ಚಯಿಸಿದಳು. ಕೂಡಲೆ ಆಕೆಯು ಯೋಗಿಗಳನ್ನು ನಮಸ್ಕರಿಸಿ, ಡೋಲಿಯಲ್ಲಿ ಕುಳಿತುಕೊಂಡಳು. ಆ ಬಳಿಕ ಭಿಲ್ಲರು ಡೋಲಿಯನ್ನು ಹೊತ್ತುಕೊಂಡು, ಪರ್ವತ-ಕಂದರಗಳನ್ನು ಒಂದೊಂದೇ ದಾಟುತ್ತ ನಡೆದರು. ಅಜಯನು ಶಸ್ತ್ರಪಾಣಿಯಾಗಿ ಹಿಂದಿನಿಂದ ಸಾಗಿದನು.

ಸಂಜೆಯ ನಾಲ್ಕು ಗಂಟೆಯ ಸಮಯಕ್ಕೆ ಡೋಲಿಯು ಒಂದು ದೊಡ್ಡದಾದ ಕಂದರಕ್ಕೆ ಬಂದಿತು. ಹೊತ್ತು ಮುಳುಗುವ ವರೆಗೆ ಅದು ಹೀಗೆಯೇ ದಾರಿಯನ್ನು ಕ್ರಮಿಸಿದ್ದರೆ, ತನ್ನ ಇಚ್ಛಿತ ಸ್ಥಳವನ್ನು ಹೊಂದಬಹುದಾಗಿತ್ತು; ಆದರೆ ಅಷ್ಟರಲ್ಲಿ ಆ ಕಂದರದೊಳಗಿಂದ ನಾಲ್ಕೆಂಟು ಜನ ಆಯುಧಪಾಣಿಗಳು ಆ ಡೋಲಿಯ ಮುಂದೆ ಬಂದು ನಿಂತುಕೊಂಡರು. ಅವರ ಹಿಂದಿನಿಂದ ಸರದಾರೀ ಠೀವಿಯ ಪೋಷಾಕನ್ನು ಧರಿಸಿದ ಬೇರೊಬ್ಬ ಪುರುಷನು 'ಹೊಡೆಯಿರಿ-ಬಡೆಯಿರಿ ನೆಲಕ್ಕೆ ಕೆಡವಿರಿ' ಎಂದು ನುಡಿಯುತ್ತ ಓಡುತ್ತ ಬಂದನು. ಆ ಪುರುಷನು ಆ ಆಯುಧಧಾರಿಗಳ ನಾಯಕನಿರಬಹುದೆಂದು ತೋರಿತು. ಕ್ಷಣದಲ್ಲಿ ಭಿಲ್ಲರಿಗೂ, ಆ ಆಗಂತುಕ ಜನರಿಗೂ ಕೈಗೆ ಕೈ ಹತ್ತಿತು; ಆದರೆ ನಿಃಶಸ್ತ್ರರಾದ ಭಿಲ್ಲರು ಶಸ್ತ್ರಪಾಣಿಗಳ ಮುಂದೆ ಬಹಳ ಹೊತ್ತು ನಿಲ್ಲಲಿಲ್ಲ. ಒಬ್ಬೊಬ್ಬರೇ ಧಾರಾತೀರ್ಥದಲ್ಲಿ ಪತನ ಹೊಂದಿದರು. ಅಜಯನು ಗಾಯ ಹೊಂದಿ ನೆಲಕ್ಕೆ ಬಿದ್ದನು!

ಈ ಮೇರೆಗೆ ಡೋಲಿಯ ರಕ್ಷಕರು ನೆಲಕ್ಕುರುಳಲು, ಆ ತುಂಟರ ನಾಯಕನು ಡೋಲಿಯ ಬಳಿಗೆ ಹೋಗಿ ಪರದೆಯನ್ನು ಸರಿಸಿ ಹಣಿಕಿ ನೋಡಿದನು. ಇಷ್ಟೊತ್ತಿನ ವರೆಗೆ ನಡೆದ ದ್ವಂದ್ವಯುದ್ಧವನ್ನು ನೋಡಿ, ರೂಪಸುಂದರಿಯು ತನ್ನ ಗತಿಯೇನಾಗುವದೋ! ಎಂದು ಹೌಹಾರಿ ಬಿದ್ದುಬಿಟ್ಟಿದ್ದಳು. ಆಗ ಆಕೆಗೆ ಸ್ಮೃತಿಯು ಇರಲಿಲ್ಲ. ಕೂಡಲೆ ಆ ನಾಯಕನು ತನ್ನ ಜನರಿಗೆ ಡೋಲಿಯನ್ನು ಹೊರಲಿಕ್ಕೆ ಸನ್ನೆ ಮಾಡಿದನು. ಅವರು ಡೋಲಿಯನ್ನು ಹೊತ್ತುಕೊಂಡು ಭರದಿಂದ ನಡೆದರು. ನಾಯಕನೂ ತನ್ನ ಡೋಲಿಯನ್ನು ತರಿಸಿ

ಕೊಂಡು ಅದರಲ್ಲಿ ಕುಳಿತು, ರೂಪಸುಂದರಿಯ ಡೋಲಿಯ ಜೊತೆಗೆ ನಡೆದನು. ಎರಡೂ ಡೋಲಿಗಳು ಸಾಲುಗೊಂಡು ಗುಡ್ಡದ ದಾರಿಯ ಹಿಡಿದು ಆಕಾಶದಲ್ಲಿ ಉಡ್ಡಾಣ ಮಾಡುವ ಹಕ್ಕಿಗಳಂತೆ, ವಾಹಕರ ಸಹಾಯದಿಂದ ಒಂದೇ ದಿಕ್ಕಿನ ದಾರಿಯನ್ನು ಕ್ರಮಿಸತೊಡಗಿದವು; ಆದರೆ ಆ ಡೋಲಿಗಳಲ್ಲಿದ್ದ ವ್ಯಕ್ತಿಗಳ ಮನಸ್ಸಿನ ಉತ್ಕ್ರಮಣವು ಮಾತ್ರ ತೀರ ವಿರುದ್ಧ ದಿಕ್ಕನ್ನು ಅನುಸರಿಸುತ್ತಿತ್ತು. ಮುಂಭಾಗದ ಡೋಲಿಯಲ್ಲಿದ್ದ ರೂಪಸುಂದರಿಯು ವಜ್ರಾಘಾತವಾದಂತೆ ಹೃದಯವಿದಾರಣದಿಂದ ದೇಹದ ಸ್ಮೃತಿಯಿಲ್ಲದೆ ಭಯದ ಗುಂಗಿನಲ್ಲಿ ಚಲನ-ವಲನ ಕ್ರಿಯಾಶೂನ್ಯಳಾಗಿರಲು, ಹಿಂಭಾಗದ ಡೋಲಿಯಲ್ಲಿದ್ದ ನಾಯಕನು ತನ್ನ ಮನಸ್ಸಿನಲ್ಲಿ ಸ್ವರ್ಗಸೌಖ್ಯವನ್ನನುಭವಿಸುತ್ತಿದ್ದನು. ಪ್ರತ್ಯಕ್ಷ ಸೌಖ್ಯದ ಹತ್ತುಪಟ್ಟು ಸೌಖ್ಯವು ಆ ಕಾಲ್ಪನಿಕ ಸೃಷ್ಟಿಯಲ್ಲಿ ಅವನಿಗೆ ದೊರೆಯಲಾರಂಭಿಸಿತು. ಅದರಿಂದ ಅವನೂ ರೂಪಸುಂದರಿಯಂತೆ ಬಾಹ್ಯವ್ಯಾಪಾರಗಳನ್ನು ಮರೆತು ಬಿಟ್ಟನು. ಭೇದವಿಷ್ಟೇ; ರೂಪಸುಂದರಿಯು ದುಃಖದಿಂದ ದೇಹಭಾನ ಮರೆತಿದ್ದರೆ, ಈತನು ಆನಂದದಿಂದ ದೇಹಭಾನ ಮರೆತನು! ಆ ಸಮಯದಲ್ಲಿ ಅವನು ಕಾಲ್ಪನಿಕ ಸೌಖ್ಯದಲ್ಲಿ ರಮಿಸಿದುದು ಹೇಗಂದರೆ:—"ಸುದೈವದಿಂದ ರೂಪಸುಂದರಿಯು ನನ್ನ ಹಸ್ತಗತಳಾದಳು. ಇಂದಿನ ವರೆಗೆ ಆಕೆಯ ಸಲುವಾಗಿ ಪಟ್ಟ ನನ್ನ ಪ್ರಯತ್ನಗಳೆಲ್ಲ ಇಂದಿಗೆ ಸಫಲವಾದವು. ಇನ್ನು ನಾನು ಇವಳೊಡನೆ ಯಥೇಷ್ಟ ಕಾಮಕೇಳಿಯನ್ನಾಡುವೆನು. ಯಾಕೆ ರೂಪಸುಂದರೀ, ನನ್ನೊಡನೆ ರಮಿಸುವೆಯೋ-ಇಲ್ಲವೋ? ನನ್ನನ್ನು ಪ್ರೀತಿಸಿದ ಹೊರತು ನಿನಗೆ ಗತ್ಯಂತರವೇ ಇಲ್ಲವಲ್ಲ. ಯಾಕಂದರೆ, ಇನ್ನು ಮೇಲೆ ನನ್ನ ಬಳಿಯಿಂದ ನಿನ್ನನ್ನು ಬಿಡಿಸಿಕೊಂಡು ಹೋಗುವದು ಪ್ರತ್ಯಕ್ಷ ಕಾಲನಿಂದಲೂ ಆಗದು! ಇಷ್ಟು ದಿವಸಗಳ ವರೆಗಿದ್ದ ನಿನ್ನ ಬಿಂಕವು ಇನ್ನು ಮುಂದೆ ನಡೆಯಲಾರದು. ಪ್ರಿಯೆ, ರೂಪಸುಂದರೀ, ನಿನ್ನ ಕೋಮಲ ಗಲ್ಲಗಳ ಪ್ರಥಮ ಚುಂಬನವನ್ನು ತಕ್ಕೊಳ್ಳುವ ವಸ್ತಾದಿಯು ನಾನೇ ಅಲ್ಲವೇ? ನೀನು ನನ್ನ ಪಟ್ಟದ ರಾಣಿಯಾದರೆ ನಿನಗೇನು ಕೊರತೆಯಾಗುವದು? ನಿಮ್ಮಪ್ಪನು ದಡ್ಡನು; ಸುಮ್ಮನೆ ನನ್ನನ್ನು ಹೀಯಾಳಿಸಿ ನಿನ್ನ ಮನಸ್ಸನ್ನು ಕೆಡಿಸಿದನು ಆದರೂ ಕಡೆಗೆ ನೀನು ನನ್ನವಳೇ ಆದೆಯಲ್ಲವೇ? ಇಕೋ, ನಿನ್ನ ಗಲ್ಲವನ್ನು ಚುಂಬಿಸುವೆನು!"

ಈ ರೀತಿಯಾಗಿ ಕಲ್ಪನಾಮಯ ಸಾಮ್ರಾಜ್ಯದಲ್ಲಿ ಮಗ್ನನಾದ ಆ ತರುಣ ನಾಯಕನು ರೂಪಸುಂದರಿಯು ನಿಜವಾಗಿ ತನ್ನ ಬಳಿಯಲ್ಲಿಯೇ ಇರುವಳೆಂಬ ಭ್ರಾಂತಿಯಿಂದ ಮುಖವನ್ನು ಮುಂದಕ್ಕೆ ಚಾಚಿ ಚುಂಬಿಸಿದನು; ಆದರೆ ಆ ಚುಂಬನದಿಂದ ಅವನ ಕಾಲ್ಪನಿಕ ಸೃಷ್ಟಿಯು ಅಳಿದು ಹೋಗಿ, ತಾನು ಭ್ರಾ

ಯಿಂದ ಏನನ್ನು ಚುಂಬಿಸಿದೆನೆಂಬ ಅನುಭವವು ಅವನಿಗೆ ಚನ್ನಾಗಿ ಬಂದು ಹೋಯಿತು. ಡೋಲಿಯಲ್ಲಿದ್ದ ಅವನ ಪ್ರೀತಿಯ ಖಡ್ಗದ ಮೊನೆಯು ಅವನ ಮುಖಕ್ಕೆ ಬಲವಾದ ಗಾಯಗೊಳಿಸಿತ್ತು. ಆಗ ಆ ನಾಯಕನು ಸಂಪೂರ್ಣ ಎಚ್ಚತ್ತು, ಧಾರೆಗಟ್ಟಿ ಇಳಿಯುತ್ತಿರುವ ರಕ್ತವನ್ನು ಒರೆಸಿಕೊಂಡು, ಹೊರಗೆ ಮೋರೆ ಹಾಕಿ, ಈಗ ಡೋಲಿಯು ಎಲ್ಲಿಯ ವರೆಗೆ ಬಂದಿರುವದೆಂಬದನ್ನು ನೋಡಿದನು; ಮತ್ತು ವಾಹಕರಿಗೆ ಡೋಲಿಯನ್ನು ಇಳಿಸಿ, ವನಸ್ಪತಿಯನ್ನು ತರಲಿಕ್ಕೆ ಆಜ್ಞಾಪಿಸಿದನು ನಾಯಕನ ಮುಖವು ಇಷ್ಟೇಕೆ ರಕ್ತಮಯವಾಗಿದೆ ಎಂಬದನ್ನು ತಿಳಿಯದೆ, ಆ ಆಳುಗಳು ಗೊಂದಲದಲ್ಲಿ ಬಿದ್ದರು. ಅವರಲ್ಲಿ ಒಬ್ಬನು ಓಡುತ್ತ ಹೋಗಿ ಒಂದು ಗಿಡದ ಸೊಪ್ಪನ್ನು ಹರಿದು ತಂದು, ಅದನ್ನು ಆತನ ಗಾಯಕ್ಕೆ ಹಚ್ಚಿದನು. ಅದರಿಂದ ರಕ್ತಸ್ರಾವವು ನಿಂತು, ಅವನಿಗೆ ಸ್ವಲ್ಪ ನೋವು ಕಡಿಮೆಯಾಯಿತು. ಆಳುಗಳು ಪುನಃ ಡೋಲಿಯನ್ನು ಹೊತ್ತುಕೊಂಡು ನಡೆದರು. ಸ್ವಲ್ಪ ಹೊತ್ತು ಕ್ರಮಿಸುವಷ್ಟರಲ್ಲಿ ಒಂದು ದೊಡ್ಡ ಬೆಟ್ಟವು ಹತ್ತಿತು. ಅದನ್ನು ಸುತ್ತುವರೆದು ಅವರು ತಮ್ಮ ಸಾಂಕೇತಿಕ ಸ್ಥಳಕ್ಕೆ ಹೋಗ ಬೇಕಾಗಿತ್ತು; ಆದರೆ ನಿರಭ್ರವಾದ ಗಗನಮಂಡಲವು ಒಮ್ಮಿಂದೊಮ್ಮೆ ಮೇಘ ದಿಂದ ಮುಚ್ಚಲ್ಪಟ್ಟಿತು. ಕ್ಷಣದಲ್ಲಿ ಕಲ್ಲು ಸುರಿದ ಹಾಗೆ ಮಳೆಯು ಸುರಿಯ ತೊಡಗಿತು. ಆಗ ಆಳುಗಳ ಅಂಬೆ-ಅಂಚಡಿಗಳು ತೊಪ್ಪನೆ ತೊಯ್ದು ಹೋದವು. ಅಂಥ ಮಳೆಯಲ್ಲಿ ಮುಂದಕ್ಕೆ ಒಂದು ಹೆಜ್ಜೆಯನ್ನು ಇಡುವದೂ ಅವರಿಗೆ ಕಠಿಣ ವೆನಿಸಿತು. ಅಷ್ಟರಲ್ಲಿ ಒಬ್ಬನು ಕಾಲು ಜಾರಿ ಕಂದರದಲ್ಲಿ ಉರುಳಿ ಬಿದ್ದನು. ಆಗಂತೂ ಕೇಳುವದೇನು? ಆಳುಗಳ ಹಲ್ಲಣವೇ ಹಾರಿತು! ನಾಯಕನೂ ಗಾಬರಿಯಾದನು. ಇನ್ನೂ ತನ್ನ ಸಾಂಕೇತಿಕ ಸ್ಥಳವು ದೂರ ಇದ್ದದರಿಂದ, ಎದುರಿಗೆ ಕಾಣುವ ಬೆಟ್ಟದಲ್ಲಿರುವ ಪರಿಚಿತ ಗುಹೆಯಲ್ಲಿ ಅಂದಿನ ರಾತ್ರಿಯನ್ನು ಕಳೆಯಬೇಕೆಂದು ನಿಶ್ಚಯಿಸಿ, ಅವನು ಆ ಗುಹೆಯ ಕಡೆಗೆ ಡೋಲಿಯನ್ನು ತಿರುಗಿಸಲಿಕ್ಕೆ ಸೂಚಿಸಿದನು. ಆಳುಗಳು ಸಮಾಧಾನ ಹೊಂದಿ, ಆ ಗುಡ್ಡದ ಮಧ್ಯದಲ್ಲಿರುವ ಒಂದು ಗುಹೆಗೆ ಡೋಲಿಯನ್ನೊಯ್ದರು.

ಆ ಗುಹೆಯು ಪೂರ್ವಕಾಲದಲ್ಲಿ ಸಿದ್ಧರ ವಾಸಸ್ಥಳವಾಗಿದ್ದು, ಬಹು ವಿಶಾಲವಾಗಿತ್ತು. ಅದರಲ್ಲಿ ನಾಲ್ಕಾರು ಕೋಣೆಗಳಿದ್ದು, ಮಧ್ಯದಲ್ಲಿ ಒಂದು ದೊಡ್ಡ ಚೌಕು ಇತ್ತು. ಅದರ ಒಳಭಾಗವು ಗಚ್ಚಿನಿಂದ ಗಿಲಾಯಿ ಮಾಡಲ್ಪ ಟ್ಟಿತ್ತು. ಮೇಲೆ ಹೇಳಿದಂತೆ ಆ ಡೋಲಿಗಳು ಆ ಗುಹೆಯ ಒಳಗೆ ಬಂದಾಗ, ಅದರ ಬಾಗಿಲಿಗೆ ಒಂದು ದೊಡ್ಡ ಒಂಡೆಯು ಅನಿಸಲ್ಪಟ್ಟಿತ್ತು. ಆಳುಗಳು ಡೋಲಿಯನ್ನಿಳಿಸಿ, ಕಲ್ಲನ್ನು ಕಿತ್ತೊಗೆದು, ಡೋಲಿಯನ್ನು ಮೆಲ್ಲಗೆ ಸಾಗಿಸಿದರು.

ಒಳಗೆ ಗಾಢಾಂಧಕಾರವು ಮುಸುಕು ಹಾಕಿತ್ತು. ಆದರೂ ಅವರಿಗೆ ಗುಹೆಯ ಪರಿಚಯವಿದ್ದದರಿಂದ, ಮಧ್ಯದ ಚೌಕಿನಲ್ಲಿ ಎರಡೂ ಡೋಲಿಗಳನ್ನಿಳಿಸಿ, ಒದ್ದೆಯಾದ ತಮ್ಮ ಅರಿವೆಗಳನ್ನು ತೆಗೆದು ಬೆಚ್ಚಗಿದ್ದವುಗಳನ್ನು ಹೊತ್ತುಕೊಂಡು, ಮುಂಭಾಗದ ಕೋಣೆಯಲ್ಲಿ ಅಡ್ಡಾದರು. ಹಗಲೆಲ್ಲ ಅವರು ಡೋಲಿಯನ್ನು ಹೊತ್ತುಕೊಂಡು ದಾರೀ ನಡೆದದ್ದರಿಂದ, ಅವರಿಗಾದ ದಣುವನ್ನು ದೇವರೇ ಬಲ್ಲ! ಅವರು ನೆಲಕ್ಕೆ ಮಗ್ಗಲು ಹಚ್ಚುವದೊಂದೇ ತಡ; ನಿದ್ರಾಂಗನೆಯು ಅವರನ್ನು ತನ್ನ ಕಟಾಕ್ಷಕ್ಕೆ ಒಳಪಡಿಸಿಕೊಂಡು ಬಿಟ್ಟಳು.

ಆಳುಗಳಿಗೆ ನಿದ್ದೆ ಹತ್ತಿ ಗೊರ್ರ ಗೊರ್ರೆಂಬ ಸಪ್ಪಳವು ಸ್ಪಷ್ಟವಾಗಿ ಕೇಳಿಸಹತ್ತಲು, ಅದೇ ದಾರಿಯನ್ನು ಕಾಯುತ್ತಿದ್ದ ನಾಯಕನ ಕಾಮಾಗ್ನಿಯು ಪ್ರಜ್ವಲಿಸಿತು. ಅವನು ಮೆಲ್ಲಗೆ ಡೋಲಿಯಿಂದಿಳಿದು ರೂಪಸುಂದರಿಯ ಡೋಲಿಯ ಬಳಿಗೆ ಹೋದನು. ತನ್ನ ಸೇವಕರು ದ್ವಂದ್ವಯುದ್ಧವನ್ನು ನಡಿಸಿದಾಗ ಮೂರ್ಛೆ ಹೋದ ಆಕೆಯು, ಮಳೆಯಾದ್ದರಿಂದ ಉಂಟಾದ ತಂಗಾಳಿಗೆ ಈಗ ಜಾಗರೂಕತೆಯನ್ನು ಹೊಂದಿದ್ದಳು. ಅವಳಿಗೆ ಗುಹೆಯ ವರೆಗೆ ಎಚ್ಚರವೇ ಇರದ್ದರಿಂದ, ತಾನು ಎಲ್ಲಿ ಬಂದಿರುವೆನೆಂಬದು ತಿಳಿಯದೆ ಹೋಯಿತು. ಆದರೂ ಸುತ್ತಲೂ ಗಿಡ-ಬಳ್ಳಿಗಳು ಕಾಣದ್ದರಿಂದ ಅವಳು ತನ್ನ ತರ್ಕಶಕ್ತಿಯಿಂದ ಇದು ಅಡವಿಯಲ್ಲವೆಂದೂ, ಕಣ್ಣುಕಪ್ಪಡಿಯ ಮಲದ ವಾಸನೆಯಿಂದ ಇದು ಗುಹೆಯಾಗಿರಬೇಕೆಂದೂ, ಗೊರಕೆಯ ಸಪ್ಪಳದಿಂದ ಯಾರೋ ನೀಚರು ತನ್ನ ಡೋಲಿಯನ್ನು ಇಲ್ಲಿ ತಂದಿರಿಸಿ ಮಲಗಿರುವರೆಂದೂ ತಿಳಿದಳು. ಇಲ್ಲಿಂದ ಓಡಿ ಹೋಗಬೇಕೆಂಬ ವಿಚಾರವು ಒಮ್ಮೊಮ್ಮೆ ಅವಳ ಮನಸ್ಸಿನಲ್ಲಿ ಬರುತ್ತಿತ್ತು; ಆದರೆ ಆ ಕಗ್ಗತ್ತಲೆಯಿಂದ ಅವಳಿಗೆ ಗುಹೆಯ ಮುಖವು ಎಲ್ಲಿದೆಯೆಂಬದು ಕೂಡ ತಿಳಿಯದೆ ಹೋಯಿತು. ಅವಳು ಘೋರ ಚಿಂತೆಯಿಂದ ವ್ಯಾಪ್ತಳಾಗಿ ಏಕಲಿಂಗೇಶ್ವರನನ್ನು ಧ್ಯಾನಿಸುತ್ತ ಡೋಲಿಯಲ್ಲೇ ಕುಳಿತುಕೊಂಡಳು.

ರೂಪಸುಂದರಿಯು ಹೀಗೆ ಕುಳಿತುಕೊಂಡಿರಲು, ಆ ನರಾಧಮನಾದ ನಾಯಕನು ಆಕೆಯ ಡೋಲಿಯಲ್ಲಿ ಕೈಯಾಡಿಸಿದನು. ಮೊದಲು ಅವನಿಗೆ ಅವಳ ಮೃದುವಾದ ತೊಡೆಗಳು ಹತ್ತಿದವು. ಅವುಗಳ ಸ್ಪರ್ಶದಿಂದ ಆ ಕಾಮಾಂಧನ ಶರೀರದಲ್ಲಿ ವಿದ್ಯುತ್ ಸಂಚಾರವಾದಂತಾಯಿತು. ಆಗ ರೂಪಸುಂದರಿಯು ಪುರುಷ ಸ್ಪರ್ಶದಿಂದ ಬೆದರಿದಳು. ಅವಳು ಕೂಡಲೆ ಆವೇಶಗೊಂಡು ಆ ಕತ್ತಲಲ್ಲೇ ಸುಳುವು ನೋಡಿ, ತನ್ನ ಚಿಕ್ಕ ಖಡ್ಗದಿಂದ ತನ್ನನ್ನು ಸ್ಪರ್ಶಿಸಿದ ವ್ಯಕ್ತಿಗೆ ತಿವಿದಳು; ಆದರೆ ಆ ವ್ಯಕ್ತಿಯ ಆಯುಷ್ಯವಿನ್ನೂ ಇದ್ದದರಿಂದ, ಆ ಖಡ್ಗವು ಅವನ ವಕ್ಷಸ್ಥಳಕ್ಕೆ ತಾಕದೆ, ಆತನ ಬಲಭುಜಕ್ಕೆ ಬಲವಾದ ಗಾಯ ಮಾಡಿತು.

ಹೀಗೆ ಕತ್ತಿಯು ಪೆಟ್ಟು ತಾಕಲು, ಅವನು ಸಂತಾಪಗೆಟ್ಟು ಚೀರಿದನು. ಆ ಗದ್ದಲಕ್ಕೆ ಅವನ ಆಳುಗಳು ಚಡಪಡಿಸಿಕೊಂಡೆದ್ದು ಅವನ ಬಳಿಗೆ ಬಂದರು; ಆದರೆ ಅವನಿಗೇನಾಯಿತೆಂಬದನ್ನು ನೋಡಲಿಕ್ಕೆ ಬೆಳಕಿಲ್ಲದ್ದರಿಂದ, "ಒಡೆಯರೇ, ಏನಾಯಿತು?" ಎಂದು ಕೇಳಿದರು. ರೂಪಸುಂದರಿಯ ಖಡ್ಗದ ಕಡತಕ್ಕೆ ಹೆದರಿ ದೂರ ಸರಿದ ಆ ನಾಯಕನು, ಅವಳ ಮೇಲೆ ಬಳ್ಳೀ ಸಂತಾಪಗೊಂಡು:— "ಡೋಲಿಯಲ್ಲಿದ್ದ ಈ ರಾಕ್ಷಸಿಯ ಕೈಗಳನ್ನು ಗಟ್ಟಿಯಾಗಿ ಕಟ್ಟಿರಿ. ಆಕೆಯು ಖಡ್ಗದಿಂದ ನನ್ನ ಬಲಭುಜವನ್ನು ಕಡಿದಿರುವಳು. ನನ್ನ ಗಾಯವನ್ನು ಮೊದಲು ಅರಿವೆಯಿಂದ ಕಟ್ಟಿ, ಹಿಂದುಗಡೆ ಅವಳ ಸಮಾಚಾರವನ್ನು ತಕ್ಕೊಳ್ಳಿರಿ" ಎಂದು ನುಡಿದನು.

ಒಡೆಯನ ಅಪ್ಪಣೆಯಂತೆ ಅವನ ಭುಜದ ಗಾಯವನ್ನು ಚನ್ನಾಗಿ ಕಟ್ಟಿ, ನಾಲ್ಕಾರು ಜನ ಸೇವಕರು ರೂಪಸುಂದರಿಯ ಡೋಲಿಯನ್ನು ಸುತ್ತಗಟ್ಟಿ, ಪಾರಿವಾಳದ ಗೂಡಿನಲ್ಲಿ ಕೈ ಹಾಕುವಂತೆ ಒಮ್ಮೆಲೆ ಒಳಗೆ ಕೈ ಚಾಚಿ, ಆಕೆಯನ್ನು ಹಿಡಿಯಲು ಹವಣಿಸಿದರು. ರೂಪಸುಂದರಿಯು ವೀರ ತರುಣಿಯಾಗಿದ್ದರೂ ಆ ನರಾಧಮರ ಕೈಗೆ ಸಿಕ್ಕದ್ದರಿಂದ ಬಹಳವಾಗಿ ಅಂಜಿಕೊಂಡಿದ್ದಳು. ಆದರೂ ಅವಳು ಧೈರ್ಯದಿಂದ ಖಡ್ಗಪ್ರಯೋಗ ಮಾಡಲು, ಆ ಕಡತವು ಇಬ್ಬರ ವಕ್ಷಸ್ಥಳಕ್ಕೆ ಬಿದ್ದು, ಅವರಿಬ್ಬರೂ ಹಾ-ಹಾ! ಅನ್ನುತ್ತ ಕಾಲವಶರಾದರು. ಅಷ್ಟರಲ್ಲಿ ಉಳಿದ ನಾಲ್ವರು ಆಕೆಯ ರಟ್ಟೆಯನ್ನು ಹಿಡಿದು, ಅವಳ ಖಡ್ಗವನ್ನು ಕಸಿದುಕೊಂಡದ್ದರಿಂದ, ಹಲ್ಲು ಮುರಿದ ನಾಗಿಣಿಯಂತೆ ಅವಳು ಮನದಲ್ಲಿಯೇ ಸಂತಾಪದಿಂದ ದಗ್ಧಳಾಗಹತ್ತಿದಳು. ಆಗ ಅವಳಲ್ಲಿ ಆವೇಶ ತುಂಬಿಕೊಂಡಿತ್ತು; ಆದರೆ ಮಾಡುತ್ತಾಳೇನು? ಹೇಳಿ-ಕೇಳಿ ಅಬಲೆಯು! ಅದರಲ್ಲಿಯೂ ನಿಶ್ಶಸ್ತ್ರಳು! ಆ ಆಳುಗಳು ಆಕೆಯ ಕೈಗಳನ್ನು ಹಿಂಭಾಗಕ್ಕೆ ಜಗ್ಗಿಕೊಂಡು, ಆಕೆಯ ಸೆರಗಿನಿಂದಲೇ ಬಲವಾಗಿ ಕಟ್ಟಿದರು.

ಅಷ್ಟರಲ್ಲಿ ಅರುಣೋದಯವಾಗಿತ್ತು. ಭಗವಾನ್ ಸೂರ್ಯನು ಆ ವೀರ ಕುಮಾರಿಯ ವಿಟಂಬನೆಯನ್ನು ಪರಿಹರಿಸಲು ಧಾವಿಸಿ ಬರುತ್ತಿರುವಂತೆ, ತನ್ನ ಹೊಂಬಣ್ಣದ ಕಿರಣಗಳನ್ನು ಭರದಿಂದ ಆಕಾಶದಲ್ಲಿ ಪಸರಿಸತೊಡಗಿದ್ದನು. ಆತನ ಕಿರಣಗಳ ಮಂದಪ್ರಕಾಶವು ಗುಹೆಯಲ್ಲಿ ಸೇರಿಕೊಂಡಿತು. ಆಗ ಒಬ್ಬರ ಮುಖಗಳು ಮತ್ತೊಬ್ಬರಿಗೆ ಸ್ಪಷ್ಟವಾಗಿ ಕಾಣಿಸತೊಡಗಿದವು. ರೂಪಸುಂದರಿಯು, ಈಗಾದ ವಿಟಂಬನೆಯಿಂದ ಅವಸಾನಗೆಟ್ಟು, ತನ್ನ ಮರ್ಯಾದೆಯನ್ನು ಕೂಡ ಮುಚ್ಚಿಕೊಳ್ಳಲು ಬಾರದಂತೆ ಕೈಗಳು ಪರಾಧೀನವಾದ್ದರಿಂದ, ಇನ್ನು ಮುಂದೇನಾಗುವದೋ? ಎಂದು ಚಿಂತಿಸುತ್ತಿದ್ದಳು. ಆಗ ಅವಳ ವಿಶಾಲವಾದ ಕಣ್ಣುಗಳಲ್ಲಿ

ಅಶ್ರುಗಳ ಮಹಾಪೂರವೇ ಬಂದ ಹಾಗೆ ಆಗಿತ್ತು; ಆ ನೀರುಗಳು ಆಕೆಯ ಉನ್ನತ ವಕ್ಷಸ್ಥಳದ ಮೇಲೆ ಬಿದ್ದು ಆಕೆಯು ತೊಟ್ಟುಕೊಂಡಿದ್ದ ಕುಪ್ಪಸವನ್ನು ತೊಯಿಸಿ ಬಿಟ್ಟವು. ಹೀಗೆ ಆ ತರುಣಿಯ ಸ್ಥಿತಿಯು ಶೋಚನೀಯವಾಗಿರಲು, 'ಬೆಕ್ಕಿಗೆಆಟ, ಇಲಿಗೆ ಪ್ರಾಣಸಂಕಟ!'ವೆಂಬಂತೆ, ನಿರ್ಲಜ್ಜನಾದ ಆ ತರುಣನು ಪುನಃ ಆಕೆಯ ಸಮೀಪಕ್ಕೆ ಹೋಗಿ: "ಯಾಕೆ ರೂಪಸುಂದರೀ, ಖಡ್ಗದಿಂದ ಇರಿಯ ಬರುವಿಯಾ? ಈಗ ಇರಿಯಬಾರದೇ?" ಎಂದು ನುಡಿಯುತ್ತ, ಒದ್ದೆಯಾದ ಆಕೆಯ ಕುಪ್ಪಸದ ಗಂಟನ್ನು ಬಿಚ್ಚಿದನು. ಅವನ ಆ ಅಧಮತನವನ್ನು ನೋಡಿ, ಆ ತರುಣಿಯು:- ಎಲಾ ನೀಚಾ, ಅನಾಥಳಾದ ಅಬಲೆಯ ಮೇಲೆ ಪೌರುಷವನ್ನು ತೋರಿಸುವಿಯಾ? ಪರಸ್ತ್ರೀಯಾದ ನನ್ನನ್ನು ಮುಟ್ಟಲಿಕ್ಕೆ ನಿನಗೆ ನಾಚಿಕೆ ಬರುವದಿಲ್ಲವೇ? ಏನು ಮಾಡಲಿ? ನನ್ನ ಕೈಗಳು ತೆರವಿದ್ದರೆ, ನಿನ್ನ ಗಂಟಲು ಸೀಳುತ್ತಿದ್ದೆನು. ಭಗವಾನ್ ಏಕಲಿಂಗಜೀ, ಈ ನೀಚನ ನೀಚತನವನ್ನು ಕಂಡು ಕಣ್ಣು ಮುಚ್ಚಿಕೊಂಡು ಕುಳಿತಿರುವೆಯಾ? ಈತನಿಗೆ ಶಾಸನ ಮಾಡಲಿಕ್ಕೆ ನಿನ್ನ ಕೈಗಳು ಏಳವೇ? ಎಂದು ಗೋಳಿಡಲಾರಂಭಿಸಿದಳು. ಆಕೆಯ ದೈನ್ಯವು ಹೆಚ್ಚಾದಂತೆ, ಆ ನರಾಧಮನ ವಿನೋದವೂ ಹೆಚ್ಚುತ್ತ ನಡೆಯಿತು. ಸುವರ್ಣದ ಕಲಶಗಳೋ ಅಥವಾ ಮನ್ಮಥನ ಆಟಿಗೆಯ ಸುವರ್ಣದ ಒಡವೆಗಳೋ? ಎಂಬಂತೆ ತೋರುವ ಆಕೆಯ ಬಟ್ಟನ್ನ ಸ್ತನಗಳನ್ನು ಹಿಡಿದು ವಿನೋದಪಡುತ್ತ, ಆ ಸ್ತನಗಳನ್ನು ಸೃಷ್ಟಿಸಿದ ಬ್ರಹ್ಮನನ್ನು ಕೊಂಡಾಡುತ್ತ ಇಂದಿಗೆ ತಾನೇ ಧನ್ಯನೆಂದು ಆನಂದಪಡಲಾರಂಭಿಸಿದನು. ಬರಬರುತ್ತ ಅವನ ಈ ಆನಂದವು ಕುಡಿಯಿಟ್ಟು, ಅವನನ್ನು ತೀರ ನಿರ್ಲಜ್ಜತನಕ್ಕೆ ಒಯ್ದಿತು. ತನ್ನ ಆಳುಗಳು ನೋಡುತ್ತಿರಲು ಸ್ವಲ್ಪಾದರೂ ನಾಚಿಕೊಳ್ಳದೆ ಆ ರಾಕ್ಷಸನು ಆ ಕೋಮಲೆಯ ಮುಖವನ್ನು ಚುಂಬಿಸಹೋದನು. ಅವನು ಆಕೆಯ ಗಲ್ಲಗಳ ವರೆಗೆ ತನ್ನ ಮುಖವನ್ನು ಚಾಚುತ್ತಿರಲು, ಅವನ ಘಾಯವಾದ ಭುಜದ ಮೇಲೆ ಯಾರೋ ಖಡ್ಗದಿಂದ ಹೊಡೆದರು. ಕೂಡಲೆ ಅವನು ಚಿಟ್ಟನೆ ಚೀರಿ, ಬವಳಿ ಬಂದು ಬಿದ್ದುಬಿಟ್ಟನು. ಆ ಕ್ಷಣದಲ್ಲಿ ಆತನಿಗೆ ಖಡ್ಗದಿಂದ ಹೊಡೆದ ಪುರುಷನು, ರೂಪಸುಂದರಿಯ ಕೈಗಳನ್ನು ಬಿಚ್ಚಿ ಪುನ್ಹಾ ಕಟ್ಟಿಕೊಂಡನು. ಆ ಸಾಧ್ವಿಯು ಸೆರಗನ್ನು ಹೊದ್ದುಕೊಂಡು, ನಾಚಿಕೆಯಿಂದ ಡೋಲಿಯಲ್ಲಿ ತಲೆ ಬಗ್ಗಿಸಿ ಕುಳಿತುಕೊಂಡಳು. ಗವಿಯು ಹಡೆಯಿತೋ ಅಥವಾ ಪೃಥ್ವಿಯು ಇಬ್ಭಾಗವಾಗಿ ಮಾರ್ಗಮಾಡಿ ಕೊಟ್ಟಿತೋ? ಎಂಬಂತೆ ಇಪ್ಪತ್ತು-ಇಪ್ಪತ್ತೈದು ಜನರು ಆ ಡೋಲಿಯ ಹತ್ತರ ಬಂದು 'ಈ ನೀಚರ ತಲೆಗಳನ್ನು ಹರಿಗಡಿಯಿರಿ'ಎಂದು ಕೂಗಾಡಲಾರಂಭಿಸಿದರು. ಕ್ಷಣದಲ್ಲಿ ಆ ಹೊಸ ಜನರು ಮೊದಲಿನ ಜನರನ್ನು ತುಂಡರಿಸಿ ಚಲ್ಲಿದರು! ಗವಿಯು ರಕ್ತಮಯ

ವಾಯಿತು. ಆ ಬಳಿಕ ಆ ಸಾಧ್ವಿಯು ಕೈಯುಚ್ಚಿ ಪುಣ್ಯ ಪಡೆದ ನರವೀರನು ಮುಂದೆ ಬಂದು—ದೇವೀ, ರಾಜಕುಮಾರೀ, ಇನ್ನು ಅಂಜಬೇಡ. ನಿನ್ನ ಮಾನ ರಕ್ಷಣೆಗಾಗಿಯೇ ಏಕಲಿಂಗಜೀಯು ನನ್ನನ್ನು ಇಲ್ಲಿಗೆ ಬರಮಾಡಿದಂತೆ ತೋರುತ್ತದೆ. ಇನ್ನು ನೀನು ನಿಶ್ಚಿಂತಳಾಗಿರು, ಎಂದು ನುಡಿದು ಆಕೆಯು ಡೋಲಿಯನ್ನೂ, ಆ ನರಾಧಮನ ಡೋಲಿಯನ್ನೂ ಸಾಗಿಸಿಕೊಂಡು ಎತ್ತೋ ನಡೆದನು. ಪ್ರಿಯ ವಾಚಕರೇ, ಹೀಗೆ ಆ ಸಾಧ್ವಿಯು ಮಾನಹಾನಿಯ ಪ್ರಸಂಗದಲ್ಲಿ ಒದಗಿದ ಈ ಪುಣ್ಯಪುರುಷನು ಯಾವನಿರಬಹುದು?

---

## ೨ ರೂಪಸುಂದರಿಯ ಪೂರ್ವವೃತ್ತ.

ನಮ್ಮ ಕಥಾನಕವು ಜರುಗಿದ ಕಾಲದಲ್ಲಿ ಗುರ್ಜರದೇಶದಲ್ಲಿ ಅನಾಯಕತ್ವವು ಬೆಳೆದು ಹೋಗಿತ್ತು. ಸಣ್ಣ ದೊಡ್ಡ ಸಂಸ್ಥಾನಿಕರು ತಮ್ಮ ತಮ್ಮಷ್ಟಕ್ಕೆ ಸ್ವತಂತ್ರರಾಗಿ ಸ್ವೇಚ್ಛೆಯಿಂದ ವ್ಯವಹರಿಸುತ್ತಿದ್ದರು. ಭಯವು ಮನುಷ್ಯನಿಗೆ ಯಾವಾಗಲೂ ತಾರಕವಿರುತ್ತದೆ. ಅದೇ ನಿರ್ಭಯತೆಯು ಮನುಷ್ಯನನ್ನು ಅಧೋಗತಿಗೆ ಮುಟ್ಟಿಸುತ್ತದೆ; ಯಾವ ಭಯವನ್ನೂ ಲೆಕ್ಕಿಸದ ಮನುಷ್ಯನು, ತಾನೇ ಸರ್ವತಂತ್ರ ಸ್ವತಂತ್ರನೆಂದು ಮನಬಂದಂತೆ ಅನನ್ವಿತ ಕೃತ್ಯಗಳನ್ನು ಮಾಡತೊಡಗುತ್ತಾನೆ. ಅದರಂತೆ ಗುರ್ಜರ ಸಂಸ್ಥಾನಿಕರ ಸ್ಥಿತಿಯೂ ಆಗಿತ್ತು. ಅವರು ನಿರ್ಲಜ್ಜರಾಗಿ ದೇವರ ಭಯ, ಧರ್ಮ ಭಯ, ಸಮಾಜ ಭಯ ಇವೇ ಮೊದಲಾದ ಭಯಗಳಿಂದ ವರ್ಜಿತರಾಗಿ, ಕೇವಲ ಶಿಶ್ನೋದರ ಪರಾಯಣರಾಗಿದ್ದರು. ಯಾವ ರಾಷ್ಟ್ರದಲ್ಲಿ ರಾಜ್ಯಸೂತ್ರಪ್ರವರ್ತಕರು ಇಂಥ ದುರ್ಮಾರ್ಗರತರಾಗುವರೋ, ಅಂಥ ರಾಷ್ಟ್ರವು ಎಷ್ಟರ ಮಟ್ಟಿಗೆ ಸುಖಸಂಪನ್ನವಾಗಿರಬಹುದೆಂಬದನ್ನು ಬರೆದು ತಿಳಿಸುವ ಅವಶ್ಯಕತೆಯೋ ತೋರುವದಿಲ್ಲ. ಇರಲಿ.

ಪಂಚಾಸರವೆಂಬದೊಂದು ಸಾಧಾರಣ ಪ್ರತಿಯ ಸಂಸ್ಥಾನವು ಗುರ್ಜರ ರಾಷ್ಟ್ರದಲ್ಲಿತ್ತು. ಕೇಸರಿಸಿಂಹನೆಂಬ ತರುಣನೊಬ್ಬನು ಆ ಸಂಸ್ಥಾನಕ್ಕೆ ಅಧಿಪತಿಯಾಗಿದ್ದನು. ಆತನು ಶೂರನಿದ್ದನು ಮಾತ್ರ; ಆದರೆ ಶೂರರಲ್ಲಿರಬೇಕಾಗಿದ್ದ ನೀತಿ ಔದಾರ್ಯಾದಿ ಗುಣಗಳು ಔಷಧಕ್ಕೆ ಬೇಕೆಂದರೂ ಅವನಲ್ಲಿ ಸಿಗುವ ಹಾಗಿದ್ದಿಲ್ಲ. ದೌರ್ಜನ್ಯವು ಮಾತ್ರ ಅವನಲ್ಲಿ ಓತಪ್ರೋತವಾಗಿ ತುಂಬಿಕೊಂಡಿತ್ತು. ಈತನು ಆ ರಾಷ್ಟ್ರದಲ್ಲಿರುವ ಸಂಸ್ಥಾನಿಕರಲ್ಲಿ ದೌರ್ಜನ್ಯಕ್ಕೆ ಶಿರೋಮಣಿಯಾಗಿದ್ದನೆಂದರೂ ಸಲ್ಲುವದು. ಇವನು ತನ್ನ ಸಂಸ್ಥಾನದೊಳಗಿನ ಸುಂದರಿಯರಾದ ತರುಣಿಯರನ್ನು ಉಪಭೋಗಾರ್ಥವಾಗಿ ತನ್ನ ರಾಣೀವಾಸದಲ್ಲಿ ಸೇರಿಸಿದ್ದನು. ಇಲ್ಲಿಯ ವರೆಗೆ ಅವನಿಗೆ ಎಷ್ಟು ಜನ ಪತಿವ್ರತೆಯರು

ಶಾಪವ ಕೊಡುತ್ತಿದ್ದರೋ ಅದರ ಅಂತವೇ ಹತ್ತದು! ಇಷ್ಟಾದರೂ ಆ ದುರ್ಜನನ ಕಾಮಾಗ್ನಿಯು ಉಪಶಾಂತಿಯನ್ನು ಹೊಂದಿರಲಿಲ್ಲ.

ಹೀಗಿರಲು, ಅಪ್ಪಾಸರದ ಸಂಸ್ಥಾನಿಕನಾದ ವೃದ್ಧ ಲಕ್ಷ್ಮಣದಾಸನ ಮಗಳು ಉಪವರಳಾದ ಸಂಗತಿಯು ಆ ಕಾಮುಕನ ಕಿವಿಯವರೆಗೆ ಹೋಯಿತು. ಬಾಲ್ಯದಲ್ಲಿಯೇ ಆಕೆಯ ಸೌಂದರ್ಯವನ್ನು ಅವನು ಹಲವರ ಮುಖದಿಂದ ಕೇಳಿದ್ದನು. ಈ ಪ್ರೌಢದೆಸೆಯಲ್ಲಿ ಆಕೆಯ ಆ ಚಲ್ವಿಕೆಯು ದ್ವಿಗುಣಿತವಾದದ್ದನ್ನು ಕೇಳಿಯಂತೂ ಅವನು ಆ ಲೋಕಸುಂದರಿಯ ಪಾಣಿಗ್ರಹಣ ವಿಷಯವಾಗಿ ಅತ್ಯಂತ ಉತ್ಸುಕನಾಗಿದ್ದನು. ಕೂಡಲೆ ಅವನು ತನ್ನೊಬ್ಬ ರಾಯಭಾರಿಯನ್ನು ಕೊಟ್ಟು ಅಪ್ಪಾಸರಕ್ಕೆ ಕಳುಹಿದನು ಆ ರಾಯಭಾರಿಯು ವೃದ್ಧ ಲಕ್ಷ್ಮಣದಾಸನನ್ನು ಕಂಡು ತಮ್ಮ ಒಡೆಯನ ಆಶಯವನ್ನು ತಿಳಿಸಿದನು. ಲಕ್ಷ್ಮಣದಾಸನು ಮುಪ್ಪಿನ ಮುದುಕನಾಗಿದ್ದರೂ, ಕೇಸರೀಸಿಂಹನ ಈ ಉದ್ಧಟತನವನ್ನು ಸಹಿಸುವದು ಅವನಿಂದಾಗಲಿಲ್ಲ. ಕೂಡಲೆ ಆ ಮುದುಕನ ಕಣ್ಣುಗಳು ಕೆಂಪಗಾದವು; ತುಟಿಗಳು ನಡುಗಹತ್ತಿದವು; ಮೋರೆಯು ಉಗ್ರವಾಯಿತು. ಆ ಮುದುವನು ಈಗಲೇ ಆ ರಾಯಭಾರಿಯನ್ನು ಸೀಳಿ ಚಲ್ಲುವನೋ ಏನೋ ಅನ್ನುವ ಹಾಗೆ ತೋರಿತು. ಆ ಸಿಟ್ಟು ಕೇಸರೀಸಿಂಹನ ಪತ್ರದ ಮೇಲೆ ಹಾಯ್ದು, ಅದನ್ನು ಚೂರು ಚೂರು ಮಾಡಿ ಚಲ್ಲಿಬಿಟ್ಟಿತು!

ತನ್ನನ್ನು ಅವಮಾನಗೊಳಿಸುವ ಆ ಪತ್ರವು ಚೂರು ಚೂರಾಗಿ ನೆಲಕ್ಕೆ ಬೀಳಲು, ಆ ಮುದುಕನ ಸಿಟ್ಟು ತುಸ ಕಡಿಮೆಯಾಯಿತು. ಆಗ ಅವನು ಆ ರಾಯಭಾರಿಯನ್ನು ಕುರಿತು, ನುಡಿದನೇನಂದರೆ:—"ಮೂರ್ಖಾ, ಇಂಥ ಪತ್ರವನ್ನು ತೆಗೆದುಕೊಂಡು ಬರಲಿಕ್ಕೆ ನಿನಗೆ ತಿಳಿಯಲಿಲ್ಲವೇ? ಕ್ಷುದ್ರನೂ, ದುರ್ಜನನೂ ಆದ ಕೇಸರೀಸಿಂಹನು ನನ್ನ ಅಳಿಯನಾಗಲಿಚ್ಛಿಸುವನೇ? ಆ ನೀಚನಿಂದ ನಮ್ಮ ರಾಷ್ಟ್ರಕ್ಕೇ ಬಹು ದೊಡ್ಡ ಕಲಂಕವುಂಟಾಗಿರಲು, ಅಂಥ ಆ ಚಾಂಡಾಲನು ರಾಜಮನೆತನಗಳಿಗೆ ಕೈಹಾಕಬೇಕೆನ್ನುವನೇ? ಆ ದುರ್ಜನನ ಮುಖಾವಲೋಕನ ಮಾಡಬಾರದು. ಅಂಥವನ ಸೇವೆಯನ್ನು ಮಾಡಿ ಹೊಟ್ಟೆಹೊರೆಯುವ ನಿನ್ನಂಥ ನರಾಧಮ ರಾಯಭಾರಿಯ ಮುಸುಡಿಯನ್ನೂ ನೋಡಬಾರದು!"

ಈ ಮೇರೆಗೆ ಮುದುಕನು ಆವೇಶಗೊಂಡು ಮಾತಾಡುತ್ತಿರುವಾಗ ಅವನು ಸಂತಾಪದಿಂದ ಎರಡೂ ಕೈಗಳನ್ನು ಚಾಚಿ, ಆ ರಾಯಭಾರಿಯ ಮುಸುಡಿಗೆ ತಿವಿಯಲು, ಆತನು ಕೂಡಲೆ ಲಕ್ಷ್ಮಣದಾಸನ ದರ್ಬಾರದಿಂದ ಹೊರಟು ಹೋದನು. ಸಂತಾಪದ ಭರದಲ್ಲಿದ್ದ ಆ ಮುದುಕನು ಅವನನ್ನು ಪ್ರತಿಬಂಧಿಸಿಡುವ ಗೊಡವೆಗೆ ಹೋಗಲಿಲ್ಲ. ಅವನು ಕೇಸರೀಸಿಂಹನ ಬಳಿಗೆ ಬಂದು, ತನಗಾದ ಅವಮರ್ಯಾ

ದೆಯನ್ನು ಒಂದಕ್ಕೆ ಹತ್ತು ಮಾಡಿ ಹೇಳಿ, ತನ್ನ ಒಡೆಯನನ್ನು ರೇಗಿಗೆಬ್ಬಿಸುವ ಸಾಹಸ ನಡಿಸಿದನು. ದುರಭಿಮಾನಿಗಳನ್ನೂ, ಅಹಂಭಾವ ಪೀಡಿತರನ್ನೂ ಸಿಟ್ಟಿಗೆಬ್ಬಿಸುವದು ತಡವಲ್ಲ; ಒಂದೆರಡು ಶಬ್ದಗಳನ್ನು ಹೆಚ್ಚು ಹೇಳಿಬಿಟ್ಟರೆ ಹುಚ್ಚೆದ್ದು ಕುಣಿಯುವರು. ಅದರಂತೆ ಕೇಸರೀಸಿಂಹನ ಗತಿಯೂ ಆಯಿತು. ಅವನು ತನ್ನ ರಾಯಭಾರಿಯು ಹೇಳಿದ ಅವಮಾನಕಾರಕ ಸಂಗತಿಗಳಿಂದ ವಿಷವನ್ನು ಕಾರುವ ಕಾಳಿಂಗಸರ್ಪದಂತೆ ಫೂತ್ಕಾರ ಮಾಡತೊಡಗಿದನು. ಲಕ್ಷ್ಮಣದಾಸನ ರಾಜಧಾನಿಗೆ ಮುತ್ತಿಗೆ ಹಾಕಿ ಅವನನ್ನು ಸೆರೆ ಹಿಡಿದು, ಅವನ ಮಗಳಾದ ರೂಪಸುಂದರಿಯನ್ನು ಅಪಹರಿಸಿ ತರಬೇಕೆಂದು ಹೊಂಚು ಹಾಕಿದನು. ಇದಕ್ಕಾಗಿ ಅವನು ತನ್ನ ಸ್ನೇಹಿತ ಸಂಸ್ಥಾನಿಕರನ್ನು ಸಹಾಯಕ್ಕಾಗಿ ಕರೆದನು. ಲೋಕದಲ್ಲಿ ಸುಂದರ ತರುಣಿಯರನ್ನೂ ಮಧುರ ಹಣ್ಣುಗಳನ್ನೂ ನೋಡಿ ಯಾರಿಗಾದರೂ ಮೋಹವುಂಟಾಗುವದು ಸಹಜವು. ಕೇಸರಿಸಿಂಹನಂತೆ ಉಳಿದ ಸಂಸ್ಥಾನಿಕರೂ ರೂಪಸುಂದರಿಯನ್ನಿಚ್ಛಿಸುತ್ತಿದ್ದರು. ಆದ್ದರಿಂದ ಅವರು ಈ ಕೆಲಸದಲ್ಲಿ ಕೇಸರಿಸಿಂಹನಿಗೆ ಸಹಾಯ ಮಾಡಲು ಒಪ್ಪಲಿಲ್ಲ.

ತನ್ನ ದೋಸ್ತ ಸಂಸ್ಥಾನಿಕರು ತನಗೆ ಸಹಾಯ ಮಾಡದ್ದರಿಂದಂತೂ ಕೇಸರಿಸಿಂಹನ ಅಪಮಾನಾಗ್ನಿಯು ಮತ್ತಷ್ಟು ಹೆಚ್ಚಿತು. ಅವನು ತಾನೊಬ್ಬನೇ ದಂಡೆತ್ತಿ ಹೋಗಿ ಆ ಮುದುಕನ ಪಾರುಪತ್ಯವನ್ನು ಮಾಡಬೇಕೆಂದು ಯೋಚಿಸಿದನು. ಬಳಿಕ ಆತನು ತನ್ನ ಶಕ್ತಿಮೀರಿ ದಂಡು ಕೂಡಿಸಿದನು. ಯುದ್ಧದ ಸಾಮಗ್ರಿಗಳನ್ನೂ ಸಿದ್ಧಪಡಿಸಿದನು. ಅಷ್ಟರಲ್ಲಿ ಬೇರೊಬ್ಬ ರಾಮಸಿಂಗನೆಂಬ ಸಂಸ್ಥಾನಿಕನು ಮನಸ್ಸಿನಲ್ಲಿ ಏನೋ ಒಂದು ದುರಾಲೋಚನೆ ಮಾಡಿಕೊಂಡು, ಕೇಸರಿಸಿಂಹನಿಗೆ ಬಂದು ಕೂಡಿದನು. ಅನಂತರ ಆ ದುರಾತ್ಮರಿಬ್ಬರು ಅಪ್ಪಾಸರದ ಮೇಲೆ ಸಾಗಿ ಹೋದರು. ರಾಯಭಾರಿಯು ತಿರುಗಿ ಹೋದ ಬಳಿಕ ವೃದ್ಧಲಕ್ಷ್ಮಣದಾಸನಿಗೆ ಕೇಸರೀಸಿಂಹನು ತನ್ನ ಮೇಲೆ ದಂಡೆತ್ತಿ ಬರುವನೆಂಬದು ತಿಳಿದು ಹೋಗಿತ್ತು. ಆದ್ದರಿಂದ ಅವನು ಮೈಮರೆತು ಕೊಡ್ರದೆ, ಶತ್ರುಗಳೊಡನೆ ಹೋರಾಡುವದಕ್ಕೆ ತಕ್ಕ ಸಾಧನಗಳನ್ನು ಸಿದ್ಧಪಡಿಸಿಟ್ಟುಕೊಂಡಿದ್ದನು.

ಒಂದು ದಿನ ವೃದ್ಧಲಕ್ಷ್ಮಣದಾಸನು ಅರಮನೆಯಲ್ಲಿ ಊಟಕ್ಕೆ ಕುಳಿತುಕೊಂಡಿರಲು, ಶತ್ರುಗಳು ಕೋಟೆಗೆ ಬಲವಾದ ಮುತ್ತಿಗೆಯನ್ನಿಟ್ಟಿರುವರೆಂಬ ಸುದ್ದಿಯು ಹತ್ತಿತು. ಕೂಡಲೆ ಆ ಮುದುಕನು ಜಮದಗ್ನಿಯಂತೆ ಕೋಪೋದ್ದೀಪಿತನಾಗಿ ತನ್ನ ಸೈನಿಕರನ್ನು ಹುರಿದುಂಬಿಸುವದಕ್ಕೆ ಹೊರಹೊರಟನು. ಆತನು ನೆಟ್ಟಗೆ ಕೋಟೆಯ ಹೆಬ್ಬಾಗಿಲಕ್ಕೆ ಹೋಗಿ, ಅಲ್ಲಿಯ ಕೊತವಾಲನಿಗೆ ಹೇಳತಕ್ಕದ್ದನ್ನು ಹೇಳಿ, ಕೋಟೆಯ ಆಯಕಟ್ಟಿನ ಸ್ಥಳಗಳನ್ನೆಲ್ಲ ಕಣ್ಮುಟ್ಟ

ನೋಡಿ ಅಲ್ಲಲ್ಲಿ ಇಡತಕ್ಕಷ್ಟು ದಂಡು ಇಟ್ಟು, ಶತ್ರುಗಳು ಕೋಟೆಯ ಗೋಡೆಗಳ ಸನಿಯಕ್ಕೆ ಬಾರದಂತೆ ಕಾಯುವದಕ್ಕೆ ಸೇನಾಪತಿಗೆ ಅಪ್ಪಣೆ ಕೊಟ್ಟು, ತಾನು ಅರಮನೆಗೆ ಹೋದನು. ಅಪ್ಪಾಪುರದ ಕೋಟೆಯು ಭದ್ರವಾದದ್ದೇನೋ ನಿಜ; ಆದರೆ ಒಳಗಿನ ಸೈನಿಕರ ಸಂಖ್ಯೆಯು ಸಾಕಷ್ಟು ಇರದ್ದರಿಂದ ಕೋಟೆಯು ಎಷ್ಟು ದಿವಸ ತಡೆಯುವದೋ ಎಂಬ ಚಿಂತೆಯು ಲಕ್ಷ್ಮಣದಾಸನನ್ನು ಬಹಳವಾಗಿ ಬಾಧಿಸುತ್ತಿತ್ತು. ಮಗಳ ಮರ್ಯಾದೆಯು ಹೇಗೆ ಉಳಿಯುವದೋ ಎಂಬ ಚಿಂತೆಯಂತೂ ವಡವಾಗ್ನಿಯಂತೆ ಆವನನ್ನು ಯಾವಾಗಲೂ ದಹಿಸುತ್ತಿತ್ತು.

ಒಂದು ದಿನವಾಯಿತು, ಎರಡು ದಿವಸಗಳಾದವು; ಹೀಗೆ ಹದಿನೈದು ದಿನಗಳು ಕ್ರಮಿಸಿದವು. ಶತ್ರುಗಳ ಹೊಡತದಿಂದ ಪ್ರತಿನಿತ್ಯ ದಂಡಾಳುಗಳು ಸಾಯುತ್ತಿರುವದರಿಂದ ಲಕ್ಷ್ಮಣದಾಸನ ಸೈನ್ಯವು ಸಂಪುಷ್ಟಕ್ಕೆ ಬಂದಿತು; ಕೋಟೆಯೊಳಗಿನ ಆಹಾರ ಸಾಮುಗ್ರಿಯೂ ತೀರುತ್ತ ಬಂದಿತು. ಇನ್ನು ನಾಲ್ಕಾರು ದಿನಗಳು ಹೀಗೆಯೇ ಕ್ರಮಿಸಿದರೆ ಕೋಟೆಯು ಶತ್ರುಗಳ ಕೈವಶವಾಗುವದೆಂದು ತೋರಹತ್ತಿತು. ಲಕ್ಷ್ಮಣದಾಸನು ಕೈಕಾಲುಗೆಟ್ಟನು. ಆತನಿಗೆ ಈ ಕಾಲಕ್ಕೆ ಹೊರಗಿನ ಸಹಾಯ ಸಂಪತ್ತು ಅದಾವದೂ ಬರುವ ಹಾಗಿದ್ದಿಲ್ಲ. ಒಳಗಿನ ಸೈನ್ಯದ ಕಥೆಯಂತೂ ಮುಗಿಯುತ್ತ ಬರಲು, ಕೋಟೆಯು ಶತ್ರುಗಳ ಕೈವಶವಾಗುವದು ನಿಶ್ಚಯವೆಂದು ಆ ಮುದುಕನು ಗಟ್ಟಿಯಾಗಿ ನಂಬಿದನು. ಬಳಿಕ ಆತನು ಮಗಳನ್ನು ಯಾವದೊಂದು ಭದ್ರವಾದ ಸ್ಥಳಕ್ಕೆ ಮುಟ್ಟಿಸಬೇಕೆಂದು ಯೋಚಿಸತೊಡಗಿದನು. ಮಗಳ ಪಾತಿವ್ರತ್ಯವು ಪರಿಶುದ್ಧವಾಗಿ ಉಳಿಯುವಂಥ ವಿಶ್ವಾಸುಕ ಸ್ಥಾನವು ಆತನಿಗೆ ಯಾವದೂ ಸಿಗದಾಯಿತು. ಯಾಕಂದರೆ, ಗುಜರಾಥದ ಪರಿಸ್ಥಿತಿಯೇ ಆಗಿನ ಕಾಲದಲ್ಲಿ ಹಾಗೆ ಇತ್ತು. ನಂಬಿದವರ ಕುತ್ತಿಗೆ ಕೊಯ್ಯುವಂಥ ಅಪ್ರಾಮಾಣಿಕರು ಹೆಚ್ಚಿದ ದೇಶದಲ್ಲಿ ಮರ್ಯಾದೆವಂತರು ಮಾನರಕ್ಷಣೆ ಮಾಡಿಕೊಳ್ಳುವದು ಕಠಿಣವಾಗುತ್ತದೆ. ಇರಲಿ. ಇಂಥ ಕಠಿಣ ಪ್ರಸಂಗದಲ್ಲಿಯೂ ಲಕ್ಷ್ಮಣದಾಸನಿಗೆ ಒಂದು ಸುರಕ್ಷಿತವಾದ ಸ್ಥಳವು ನೆನಪಿಗೆ ಬಂದಿತು. ನಿರಂಕುಶವಾದ ಅಪಸ್ವಾರ್ಥವು ಹೆಚ್ಚಿದಾಗ, ದೇವರು ಮಾನವಂತರನ್ನು ಕಾಯುವದಕ್ಕಾಗಿ ಸಜ್ಜನರ ವೇಷದಿಂದ ಭೂತಲದ ಮೇಲೆ ಅಲ್ಲಲ್ಲಿಗೆ ವಾಸಮಾಡಿರುತ್ತಾನೆ ಬ ಮಾತು ಆತನಿಗೆ ಪಕ್ಕನೆ ನೆನಪಾಯಿತು. ಅವನ ಪ್ರೀತಿಯ ಗುರುಗಳೊಬ್ಬರು ರಾಜಧಾನಿಯಿಂದ ಹನ್ನೆರಡು ಮೈಲುಗಳ ಮೇಲೆ ಒಂದು ಘೋರಾರಣ್ಯದ ಗುಹೆಯಲ್ಲಿ ಇರುತ್ತಿದ್ದರು. ಅವರ ಪ್ರಶಾಂತವಾದ ತೇಜಸ್ಸು ಎಂಥ ನೀಚನನ್ನಾದರೂ ನಡುಗಿಸುತ್ತಿದ್ದುದರಿಂದ ಅವರಲ್ಲಿ ತನ್ನ ಮಗಳನ್ನಿಟ್ಟರೆ, ಆಕೆಯ ಪಾತಿವ್ರತ್ಯದ ರಕ್ಷಣವಾಗುವ

ದೆಂದೆನಿಸಿ ಅವನಿಗೆ ಅಂಥ ಆ ವಿಪನ್ನಾವಸ್ಥೆಯಲ್ಲಿಯೂ ಒಂದು ಬಗೆಯಿಂದ ಸಂತೋಷವೆನಿಸಿತು.

ಬಳಿಕ ಆತನು ಅಂತಃಪುರವನ್ನು ಸೇರಿ ರೂಪಸುಂದರಿಯೊಡನೆ ಆ ವಿಷಯವನ್ನು ರಹಸ್ಯವಾಗಿ ಆಲೋಚಿಸಿದನು. ಆಕೆಯು ಚಿಕ್ಕವಳಾಗಿದ್ದರೂ ಬಹು ಧೂರ್ತಳಿದ್ದಳು. ತಂದೆಯ ಯುಕ್ತಿಯು ಅವಳಿಗೆ ಸಮ್ಮತವಾಯಿತು. ಅನಂತರ ಆತನು ವಿಶ್ವಾಸುಕರಾದ ನಾಲ್ಕಾರು ಜನ ಸೇವಕರನ್ನು ಕರೆದು, ಅವರಿಗೆ ಹೇಳತಕ್ಕದ್ದನ್ನು ಹೇಳಿ, ರೂಪಸುಂದರಿಯನ್ನೂ ಆ ಸೇವಕರನ್ನೂ ಕರೆದುಕೊಂಡು ಅರಮನೆಯಲ್ಲಿರುವ ಗುಪ್ತದ್ವಾರದ ಬಳಿಗೆ ಹೋದನು. ಪ್ರಸಂಗ ಒಂದಾಗ ಕೋಟೆಯೊಳಗಿಂದ ಪಾರಾಗಿ ಹೋಗುವದಕ್ಕಾಗಿ ಪ್ರತಿಯೊಂದು ರಾಜಧಾನಿಯಲ್ಲಿಯೂ ಕೋಟೆಯ ಹೊರಗೆ ಹೋಗುವ ನೆಲಮಾರ್ಗಗಳಿರುತ್ತಿದ್ದವು; ಇಂಥದೊಂದು ಗುಪ್ತಮಾರ್ಗವು ಅಪ್ಪಾಸರದ ಅರಮನೆಯಲ್ಲೂ ಇತ್ತು. ಆ ಮಾರ್ಗದಿಂದ ಲಕ್ಷ್ಮಣದಾಸನು ರೂಪಸುಂದರಿಯನ್ನು ದಾಟಿಸಿದನು. ರೂಪಸುಂದರಿಯು ದೀವಟಿಗೆಯ ಬೆಳಕಿನಲ್ಲಿ ಸೇವಕರನ್ನು ಹಿಂಬಾಲಿಸಿ ನಡೆಯುತ್ತಿರಲು, ಆ ನೆಲಮಾರ್ಗದಲ್ಲಿ ಎರಡು ಮೈಲುಗಳು ಕ್ರಮಿಸಿದವು. ಇಷ್ಟೊತ್ತಿನ ವರೆಗೆ ಗುಹೆಯಲ್ಲಿ ಬಂದದ್ದರಿಂದ ರೂಪಸುಂದರಿಗೆ ಕಸವಿಸಿಯಾಗಿ ಹೋಗಿತ್ತು. ಅವಳು ಯಾವಾಗ ಬೈಲು ಹವೆಯನ್ನು ಕಾಣುವೆನೋ, ಎಂದು ಚಡಪಡಿಸುತ್ತಿದ್ದಳು. ಆಗ ಗುಹೆಯಲ್ಲಿ ಸುಳಿಗಾಳಿಯು ಬರಹತ್ತಿದ್ದರಿಂದ ಈ ಗುಹೆಯ ಮಾರ್ಗವು ಮುಗಿಯುತ್ತಾ ಬಂದಿತೆಂದು ಆಕೆಯು ತುಸ ಧೈರ್ಯವ ತಂದುಕೊಂಡಳು. ಗುಹೆಯ ದಾರಿಯೂ ಮುಗಿಯಿತು; ಹೊರಗಿನ ಬೆಳಕೂ ಕಾಣಿಸಿತು. ಅವರೆಲ್ಲರೂ ಗುಹೆಯ ಮುಖಕ್ಕೆ ಬಂದರು. ಅಲ್ಲಿ ಬಲವಾದ ದೊಡ್ಡದೊಂದು ಕಲ್ಲು ಮುಚ್ಚಲ್ಪಟ್ಟಿತ್ತು. ಸೇವಕರಲ್ಲೊಬ್ಬನು ಬಾಗಿಲ ವರೆಗೆ ಹೋಗಿ, ಒಂದು ಸಾಂಕೇತಿಕ ಶಬ್ದವನ್ನುಚ್ಚರಿಸಿದನು. ಕೂಡಲೆ ಯಾರೋ ಹೊರಗಿನಿಂದ ಆ ಕಲ್ಲನ್ನು ತೆಗೆದು, ಹೊರಗೆ ಬರುವದಕ್ಕೆ ಮಾರ್ಗವ ಮಾಡಿಕೊಟ್ಟರು!

ಬಳಿಕ ರೂಪಸುಂದರಿಯು ಆ ಬಿಂಡಿಯೊಳಗಿಂದ ಬಾಗ್ಗಿ ಹೊರಕ್ಕೆ ಬಂದಳು ಅಲ್ಲಿ ದಟ್ಟವಾದ ಅಡವಿಯು ಬೆಳೆದು ಹೋಗಿತ್ತು. ಹಗಲ ಹೊತ್ತಿನಲ್ಲಿಯೂ ಸೂರ್ಯನ ಪ್ರಕಾಶಕ್ಕೆ ಅವಕಾಶವಿದ್ದಿಲ್ಲ. ರೂಪಸುಂದರಿಯು ವೀರಕುಮಾರಿಯಾದ್ದರಿಂದ ಆ ಅರಣ್ಯಕ್ಕೆ ಅಂಜದೆ ಸುತ್ತಲೂ ದಿಟ್ಟಿಸಿ ನೋಡಿದಳು. ಅಲ್ಲಿ ಆಕೆಗೆ ೩-೪ ಗುಡಿಸಲುಗಳು ಕಂಡು ಬಂದವು. ಆಗ ಆಕೆಯು ತನ್ನ ಸೇವಕರನ್ನು ಕುರಿತು:—"ಅಜಯಾ, ಈ ಗುಡಿಸಲುಗಳು ಯಾರವು?" ಎನಲು,

ಅಜಯನು ಆಕೆಗೆ:—"ಇವು ನಮ್ಮ ಮಹಾರಾಜರ ಸೇವಕರವು. ಈ ಗುಡಿಸಿಲುಗಳಲ್ಲಿ ಈ ಗುಹೆಯ ಕಾವಲುಗಾರರು ಇರುತ್ತಾರೆ" ಎಂದು ಹೇಳಿ, ಬಹಳ ಹೊತ್ತು ಕಳೆಯದೆ, ಒಬ್ಬ ಕಾವಲುಗಾರನನ್ನು ಕರೆದು, ನಾಲ್ಕು ಕುದುರೆಗಳನ್ನು ಸಿದ್ಧಪಡಿಸಲಿಕ್ಕೆ ಹೇಳಿದನು. ಕೂಡಲೆ ಆತನು ಜೀನು ಹಾಕಿದ ನಾಲ್ಕು ಕುದುರೆಗಳನ್ನು ತಂದು ನಿಲ್ಲಿಸಿದನು. ಅಜಯನು ಒಂದು ಕುದುರೆಯ ಮೇಲೆ ರೂಪಸುಂದರಿಯನ್ನು ಹತ್ತಿಸಿ, ಬೇರೊಂದು ಕುದುರೆಯ ಮೇಲೆ ತಾನು ಕುಳಿತುಕೊಂಡನು. ಬಳಿಕ ಉಳಿದ ಎರಡು ಕುದುರೆಗಳ ಮೇಲೆ ಇಬ್ಬರು ಸೇವಕರು ಕುಳಿತರು. ಹೀಗೆ ಈ ನಾಲ್ವರು ಅಶ್ವಾರೂಢರಾಗಿ, ತಾವು ಹೊರಡತಕ್ಕ ಮಾರ್ಗವನ್ನು ವಿಲಂಬವಿಲ್ಲದೆ ಹಿಡಿದರು. ಇತ್ತ ರೂಪಸುಂದರಿಯನ್ನು ಕಳಿಸ ಬಂದ ಉಳಿದ ಸೇವಕರು ಕಾವಲುಗಾರನಿಗೆ ಗುಹೆಯ ಮುಖವನ್ನು ಭದ್ರವಾಗಿ ಹಾಕಲಿಕ್ಕೆ ಹೇಳಿ, ಪುನಃ ಗುಹೆಯನ್ನು ಸೇರಿ ರಾಜಧಾನಿಗೆ ನಡೆದರು.

ಇತ್ತ ಅಜಯನು ರೂಪಸುಂದರಿಯನ್ನು ಸಂರಕ್ಷಿಸುತ್ತ ಬಹು ಶೀಘ್ರವಾಗಿ ದಾರಿಯನ್ನು ಕ್ರಮಿಸಿ ಲಕ್ಷ್ಮಣದಾಸನ ಗುರುಗಳ ಆಶ್ರಮವನ್ನು ಹೊಂದಿ, ರಾಜಪ್ರಾರ್ಥನೆಯನ್ನು ಅಲ್ಲಿದ್ದ ಯೋಗಿಗಳಿಗೆ ತಿಳಿಸಿದನು. ಕರುಣಾಳುಗಳಾದ ಯೋಗಿಗಳು ರೂಪಸುಂದರಿಯ ಮೇಲೆ ಬಂದ ಗಂಡಾಂತರವನ್ನು ತಿಳಿದು, ಆಕೆಗೆ ತಮ್ಮ ಸನ್ನಿಧಿಯಲ್ಲಿರುವದಕ್ಕೆ ಅಪ್ಪಣೆ ಕೊಟ್ಟರು. ಬಳಿಕ ಅಜಯನು ಯೋಗಿಗಳ ಅಪ್ಪಣೆ ಪಡೆದು ಸಂಗಡಿಗರೊಡನೆ ಅಲ್ಲಿಂದ ಹೊರಟನು. ಆತನು ತಿರುಗಿ ಅಪ್ಪಾಪುರಕ್ಕೆ ಬರುವಷ್ಟರಲ್ಲಿ ಕೋಟೆಯು ಶತ್ರುಗಳ ಕೈವಶವಾಗಿತ್ತು. ಕೋಟೆಯಲ್ಲಿ ಎಷ್ಟು ಶೋಧಿಸಿದರೂ ರೂಪಸುಂದರಿಯು ಕಣ್ಣಿಗೆ ಬೀಳದ್ದರಿಂದ ಕೇಸರಿಸಿಂಹನು ಹುಚ್ಚನಾದನು. ಯಾವ ರೂಪಸುಂದರಿಯ ಸಲುವಾಗಿ ತಾನು ಇಷ್ಟೊಂದು ಸಾಹಸ ಮಾಡಿದ್ದನೋ ಆ ರೂಪಸುಂದರಿಯೇ ಕೈವಶಳಾಗದಿದ್ದ ಬಳಿಕ, ಆತನಿಗೆ ವಿಲಕ್ಷಣ ತಾಪವಾಗಹತ್ತಿತು. ಆಗ ಅವನು ಲಕ್ಷ್ಮಣದಾಸನನ್ನು ಸೆರೆಹಿಡಿದು, ರೂಪಸುಂದರಿಯು ಎಲ್ಲಿರುವಳು ಹೇಳು, ಎಂದು ಪರಿ ಪರಿಯಿಂದ ಪೀಡಿಸತೊಡಗಿದನು. ಮಗಳು ಮನೆಬಿಟ್ಟು ಹೋದದ್ದರಿಂದ ಒಂದು ಬಗೆಯ ಸಮಾಧಾನವನ್ನು ತಾಳಿದ ಆ ಮುದುಕನು, ಕೇಸರಿಸಿಂಹನು ಕೊಡುವ ಪೀಡೆಗಳನ್ನು ಸಹಿಸಿಕೊಳ್ಳುತ್ತಿದ್ದನು. ಮುದುಕನು ಏನು ಮಾಡಿದರೂ ರೂಪಸುಂದರಿಯ ಸುದ್ದಿಯನ್ನು ಹತ್ತಗೊಡಲಿಲ್ಲೆಂದು ಆ ನೀಚನಾದ ಕೇಸರಿಸಿಂಹನು ಲಕ್ಷ್ಮಣದಾಸನನ್ನು ತನ್ನೆದುರಿಗೆ ತರಿಸಿ, ಪ್ರತ್ಯಕ್ಷ ಯಮಯಾತನೆಗಳನ್ನೇ ಅವನಿಗೆ ಕೊಡಹತ್ತಿದನು. ಹೀಗೆ ಆ ಮುದಿ ಅರಸನ ಗೋಳು ಹೆಚ್ಚುತ್ತಿರಲು, ಕೋಟೆಯಲ್ಲಿ ಹಾ-ಹಾಕಾರವೆದ್ದಿತು! ಕೇಸರಿಸಿಂಹನ ದಂಡಾಳುಗಳು ಕೂಗಿಕೊಳ್ಳ

ಲಾರಂಭಿಸಿದರು. ಅಷ್ಟರಲ್ಲಿ ಕೆಲವರು ಓಡಿ ಬಂದು ಯಾರೋ ಶತ್ರುಗಳ ಸೈನ್ಯವು ಕೋಟೆಯನ್ನು ಪ್ರವೇಶಿಸಿ, ನಮ್ಮ ಸೈನ್ಯವನ್ನು ಸಂಹರಿಸುತ್ತದೆ, ಎಂದು ಕೇಸರಿಸಿಂಹನ ಮುಂದೆ ಹೇಳಿದರು. ಕೂಡಲೆ ಆತನ ಹಲ್ಲಣವೇ ಹಾರಿ ದಂತಾಯಿತು! ಅವನು ಲಕ್ಷ್ಮಣದಾಸನನ್ನು ಬಿಟ್ಟು ಹೊರಗೆ ಬರಲು, ಅಸಂಖ್ಯ ಸೇನೆಯು ಅವನ ಕಣ್ಣಿಗೆ ಬಿತ್ತು. ಅವನ ಸೈನಿಕರಂತೂ ದಾರಿ ಸಿಕ್ಕತ್ತ ಓಡು ತ್ತಿದ್ದರು. ಇದನ್ನು ನೋಡಿ ಕೇಸರೀಸಿಂಹನಿಗೆ ದಿಕ್ಕು ತಪ್ಪಿಹೋಯಿತು. ಈ ಶತ್ರುಸೈನ್ಯದೊಳಗಿಂದ ಹ್ಯಾಗೆ ಪಾರಾಗಬೇಕೆಂಬದು ಅವನಿಗೇ ತೋಚದಾಯಿತು. ಬಳಿಕ ಅವನು ಓಡಿ ಹೋಗುವ ತನ್ನ ಸೈನಿಕರನ್ನು ಹಿಂಬಾಲಿಸಿ ನಡೆದನು. ಅವ ನಿಂದ ಭೂತಲದಲ್ಲಿ ಇನ್ನೂ ಇಂಥ ಅತ್ಯಾಚಾರಗಳು ನಡೆಯಬೇಕಾದ್ದರಿಂದಲೂ ಅವನ ಪಾಪಪರ್ವತವು ಇನ್ನೂ ಬೆಳೆಯಬೇಕಾದ್ದರಿಂದಲೂ ಅಂದು ಅವನು ಸಂರಕ್ಷಿತ ವಾಗಿ ಕೋಟೆಯೊಳಗಿಂದ ಪಾರಾಗಿ ವೇಷವ ಬದಲಿಸಿಕೊಂಡು ತನ್ನ ಊರ ಹಾದೀ ಹಿಡಿದನು. ಅವನ ಸೈನ್ಯದ ಮುಕ್ಕಾಲು ಭಾಗವು ಶತ್ರುಗಳಿಂದ ಸಂಹೃತವಾ ಯಿತು. ಉಳಿದ ಭಾಗವು ಎತ್ತೆತ್ತೋ ಓಡಿ ಹೋಯಿತು.

ಹೀಗೆ ಕೇಸರಿಸಿಂಹನ ದಂಡಾಳುಗಳನ್ನು ಸಂಹರಿಸಿ ಲಕ್ಷ್ಮಣದಾಸನನ್ನು ಬಂಧಮುಕ್ತವಾಗ ಮಾಡಿದ ಈ ಹೊಸ ಸೈನ್ಯವು ಒಬ್ಬ ಪುಣ್ಯಪುರುಷನದಾಗಿತ್ತು. ಈತನು ಲಕ್ಷ್ಮಣದಾಸನ ದೂರಿನ ಆಪ್ತನು, ಆತನು ಬೇರೊಂದು ಕಾರಣದ ಸಲುವಾಗಿ ಸೈನ್ಯದೊಡನೆ ಹೊರಟಿರಲು, ದಾರಿಯಲ್ಲಿ ಅವನಿಗೆ ವೃದ್ಧ ಲಕ್ಷ್ಮಣ ದಾಸನಿಗೆ ಬಂದ ಆಪತ್ತು ಗೊತ್ತಾಯಿತು. ಕೂಡಲೆ ಅವನು ತನ್ನ ಸೈನ್ಯವನ್ನು ಅಪ್ಪಾಪರದ ಕಡೆಗೆ ತಿರುಗಿಸಿ, ಮೇಲೆ ಹೇಳಿದಂತೆ ಆತನ ಮುಕ್ತತೆಯನ್ನು ಮಾಡಿದನು. ಅಂದಿನಿಂದ ರೂಪಸುಂದರಿಯು ಆ ಯೋಗಿರಾಜನ ಆಶ್ರಯದಲ್ಲೇ ಇರುತ್ತಿದ್ದಳು.

---

## ೩ ಕ್ಷೋಭಿಸಿದ ವಡವಾಗ್ನಿ.

ಸಾಯಂಕಾಲದ ಆರು ಗಂಟೆಯ ಸಮಯ; ಭಗವಾನ್ ದಿವಾಕರನ ಪ್ರಚಂಡ ಕಿರಣಗಳ ತಾಪವಡಗಿ ಅವು ಹಿಮಕರನಂತೆ ಸೊಬಗನ್ನು ಬೀರಹತ್ತಿದ್ದರಿಂದ ಜನಗಳಿಗೆ ಉಲ್ಲಾಸವು ಹೆಚ್ಚುತ್ತಲಿದೆ. ಹಕ್ಕಿ-ಪಕ್ಕಿಗಳು ಸಹ ಮೋದಗೊಂಡು ಆಕಾಶದಲ್ಲಿ ಉಡ್ಡಾಣ ಮಾಡುತ್ತಲಿವೆ. ಅಹಾ! ಆಗಿನ ಸೃಷ್ಟಿಸೌಂದರ್ಯದ ಸೊಬಗನ್ನು ಹೇಳಲೇನು? ಹೊಂಬಣ್ಣದ ಹೊಬಿಸಿಲು ಎತ್ತರವಾದ ಗಿಡಗಳ ತುದಿ ಗಳ ಮೇಲೂ ಪರ್ವತ ಶಿಖರಗಳ ಮೇಲೂ ಬಿದ್ದದರಿಂದ ಅವು ವಿಲಕ್ಷಣ

ಸೌಂದರ್ಯವನ್ನು ಹೊಂದಿ ಪ್ರೇಕ್ಷಕರಿಗೆ ಆನಂದವನ್ನುಂಟು ಮಾಡತ್ತಲಿವೆ. ಸುಖಕರವಾದ ತಂಗಾಳಿಯು ಬೀಸಹತ್ತಿದ್ದರಿಂದ, ಉದ್ಯಾನಗಳಲ್ಲಿ ಅರಳಿದ ಮಲ್ಲಿಗೆ-ಸೇವಂತಿಗೆ ಮೊದಲಾದ ಸೌಗಂಧಿಕ ಪುಷ್ಪಗಳ ಪರಿಮಳವು ಸುತ್ತಲೂ ಹರಡಿ ಶ್ರಾಂತಪ್ರಾಣಿಗಳ ದಣುವನ್ನು ಹಿಂಗಿಸುತ್ತಲಿವೆ. ನೀಲವರ್ಣದ ಆಕಾಶವು ಸಂಧ್ಯಾರಾಗದಿಂದೊಡಗೂಡಿ ಅನುಪಮೇಯ ಸೌಂದರ್ಯವು ಹೇಗಿರುತ್ತದೆಂಬದನ್ನು ಬೈಲಿಗಿಡುತ್ತಿದೆ. ಇಂಥ ಪ್ರಶಾಂತವೂ ಸುಖಮಯವೂ ಆದ ಕಾಲದಲ್ಲಿ ವಿರಹಿಗಳ ವಿರಹತಾಪವು ಹೆಚ್ಚುವದು ಸ್ವಾಭಾವಿಕವು. ಅದರಲ್ಲಿಯೂ ವೈಭವಸಂಪನ್ನರಾದ ವಿರಹಿಗಳ ವಿರಹಾಗ್ನಿಯ ಪ್ರಕೋಪಕ್ಕೆ ಮೇರೆಯೇ ಉಳಿಯುವದಿಲ್ಲ! ಇರಲಿ.

ಇಂಥ ಹೊತ್ತಿನಲ್ಲಿ ಪಾವಗಡದ ಪ್ರಶಾಂತವಾದ ಅಂತಃಪುರದ ಒಂದು ಕೋಣೆಯಲ್ಲಿ ಓರ್ವ ತರುಣಿಯು ಚಿಂತಾಕ್ರಾಂತಳಾಗಿ ಕುಳಿತುಕೊಂಡಿದ್ದಳು. ಆಕೆಯು ರೂಪದಿಂದ ರತಿಯನ್ನು ಕೂಡ ನಾಚಿಸುತ್ತಿದ್ದಳು. ಆಕೆಯ ವಯಸ್ಸಾದರೂ ಚಿಕ್ಕದು; ಹದಿನೆಂಟರ ಒಳಹೊರಗೆ ಇರಬಹುದು. ಅವಳೊಂದು ಬಿಳಿಯ ರೇಶ್ಮಿಯ ಪತ್ತಲವನ್ನುಟ್ಟಿದ್ದು, ಅಂಥದೇ ಒಂದು ಕುಪ್ಪಸವನ್ನು ತೊಟ್ಟಿದ್ದಳು. ಅವಳ ಮೈಮೇಲೆ ವಿಶೇಷ ಆಭರಣಗಳಿರದೆ, ಕೊರಳಲ್ಲಿ ಒಂದೇ ಒಂದಾದ ಚಂದ್ರಹಾರವು ಪರಿಶೋಭಿಸುತ್ತಿತ್ತು. ಆ ಚಂದ್ರಹಾರದಲ್ಲಿರುವ ರತ್ನಗಳ ಕಾಂತಿಯು ಆಕೆಯ ಮುಖಕಾಂತಿಯನ್ನು ಹೆಚ್ಚಿಸಬೇಕೆನ್ನುತ್ತಿರಲು, ಅವಳ ಚಿಂತೆಯು ಆ ಕಾಂತಿಯನ್ನು ಕೂಡ ಲೆಕ್ಕಿಸದೆ ಆಕೆಯನ್ನು ತೇಜೋವಿಹೀನಳನ್ನಾಗ ಮಾಡುತ್ತಿತ್ತು. ಮನಸ್ಸಿನ ಪ್ರಗಲ್ಭತೆಯಿಲ್ಲದಾಗ ಬಹಿರಂಗದ ಯಾವ ಉಪಾಯಗಳಿಂದಲೂ ಪ್ರಸನ್ನತೆಯು ಬರಲಾರದೆಂಬದು ಅವಳನ್ನು ನೋಡಿದರೆ ತಟ್ಟನೆ ಹೊಳೆಯುವಂತಿತ್ತು. ಬಳಿಯಲ್ಲಿರುವ ಬಗೆಬಗೆಯ ಭೋಗ್ಯವಸ್ತುಗಳ ಕಡೆಗೆ ಅವಳ ಲಕ್ಷ್ಯವಿದ್ದಿಲ್ಲ; ಉದ್ಯಾನದೊಳಗಿಂದ ಬರುವ ಸುಗಂಧ ಮಾರುತನನ್ನು ಅವಳು ಪ್ರೀತಿಸುತ್ತಿರಲಿಲ್ಲ. ಕಿಂಬಹುನಾ ಈ ಕಾಲಕ್ಕೆ ಅವಳಿಗೆ ಈ ಸುಖಸಾಧನಗಳೆಲ್ಲ ಅಶ್ರುಗಳಂತೆ ಭಾಸವಾಗುತ್ತಿದ್ದರೂ ಆಗಿರಬಹುದು.

ತರುಣಿಯ ಚಿಂತೆಯ ಭಾರವು ಹೆಚ್ಚಿತು. ಆದರ ಭಾರವು ಅವಳಿಗೆ ಸಹಿಸಲಶಕ್ಯವಾಯಿತು. ಆಗಲವಳು ತನ್ನ ಮನಸ್ಸಿನಲ್ಲಿಯೇ ಒಬ್ಬ ಕಾಲ್ಪನಿಕ ಸಖಿಯನ್ನು ಕಲ್ಪಿಸಿಕೊಂಡು ಅವಳೊಡನೆ ಈ ರೀತಿಯಾಗಿ ಸಂಭಾಷಣ ಮಾಡತೊಡಗಿದಳು:—

ತರುಣಿ:—ಸಖೀ, ನನ್ನ ದೈವವು ಇಂಥದೇ ಇರಬಹುದೇನು?

ಕಾಲ್ಪನಿಕ ಸಖಿ:—ಅವ್ವಯ್ಯಾ! ಹೀಗೇಕೆ ಅನ್ನುವೆ? ನಿನಗೇನು ಕಡಿಮೆ

ಯಾಗಿದೆ? ಪಾವಗಡದ ಸಂಸ್ಥಾನಾಧಿಪತಿಯ ರಾಣಿಯಾದ ನೀನು ಹೀಗೆ ಮಾತಾಡಬಹುದೇ?

ತರುಣಿ (ಕಣ್ಣಿಗೆ ನೀರು ತಂದು):— ಸಖೀ, ವೈಭವದಿಂದ ಸೌಖ್ಯವಾಗುವದೆಂದು ತಿಳಿದಿರುವಿಯೇನು? ಹಾಗೆ ತಿಳಿದಿದ್ದರೆ ಹೇಳು, ಮಾತಾಡುತ್ತೇನೆ.

ಕಾಲ್ಪನಿಕ ಸಖಿ (ಮಾತಿನ ದಿಕ್ಕು ಬದಲಿಸಿ):— ಮಹಾರಾಣಿಯವರೇ, ಹೀಗೆ ಅಳುವದೇಕೆ? ಅಂಥ ಪ್ರಸಂಗವೇನು ಬಂದಿರುವದು? ಈಗ ಶತ್ರುಗಳು ಕೋಟೆಗೆ ಮುತ್ತಿಗೆಯನ್ನು ಹಾಕಿರುವರಾದ್ದರಿಂದ ಮುಂದೇನಾಗುವದೆಂದು ಕಣ್ಣೀರು ಹಾಕುವಿರೇನು? ಛೇ, ನಮ್ಮ ಮಹಾರಾಜರೇನು ಕಡಿಮೆಯವರಲ್ಲ. ವಯಸ್ಸಿನಿಂದ ವೃದ್ಧರಾಗಿದ್ದರೂ ಯುಕ್ತಿಯಲ್ಲಿಯೂ, ಶೌರ್ಯದಲ್ಲಿಯೂ ಕೇವಲ ತರುಣರಾಗಿರುವರು. ಇಂಥ ಸೊಟ್ಟ ಶತ್ರುಗಳಿಗೆ ಅವರು ಸೊಪ್ಪು ಹಾಕುವರೇ? ನೀವೇ ನೋಡುತ್ತಿರುವಿರಲ್ಲ; ಮುತ್ತಿಗೆ ಬಿದ್ದು ಹದಿನೈದು ದಿನಗಳಾದರೂ ನಮ್ಮ ಮಹಾರಾಜರು ರತಿಮಾತ್ರವಾದರೂ ಧೈರ್ಯಗುಂದಿಲ್ಲ!

ತರುಣಿ:—ಸಖೀ, ನನ್ನ ಚಿಂತೆಯ ಕಾರಣವು ನಿನಗೆ ಹೇಗೆ ತಿಳಿಯಬೇಕು? ಆದ್ದರಿಂದ ನೀನು ನಿನ್ನ ಮನಸ್ಸಿಗೆ ತಿಳಿದಂತೆ ಮಾತಾಡತಕ್ಕವಳೇ ಸರಿ.

ಕಾಲ್ಪನಿಕ ಸಖಿ:- ರಾಣಿಯವರೇ, ನೀವು ಬಾಯಿಬಿಚ್ಚಿ ಹೇಳದ ಹೊರತು ನಿಮ್ಮ ಮನೋಭಿಪ್ರಾಯವು ನನಗೆ ತಿಳಿಯುವ ಬಗೆಹೇಗೆ? ನಾನೇನು ದೇವಾಂಶಳೇ?

ತರುಣಿ:—ಮಂದಿಯ ಮುಂದೆ ಹೇಳುತ್ತ ಹೋದರೆ ಆಗುವದಾದರೂ ಏನು? ಹದಿನಾರು ವರುಷಗಳ ವರೆಗೆ ನನ್ನನ್ನು ಸಾಕಿ ಸಲುಹಿದ ನನ್ನ ತಂದೆಗೇ ನನ್ನ ವಿಷಯವಾಗಿ ಕನಿಕರ ಉತ್ಪನ್ನವಾಗದಿಲ್ಲವೆಂದ ಬಳಿಕ, ನನ್ನ ಅದೃಷ್ಟಕ್ಕೆ ಇನ್ನಾರೇನು ಮಾಡುವರು?

ಕಾಲ್ಪನಿಕ ಸಖಿ:—ರಾಣಿಯವರೇ, ಹಾ! ತಿಳಿಯಿತು, ತಿಳಿಯಿತು. ನಿಮ್ಮ ಚಿಂತೆಗೆ ವಿಷಯುವಾವುದೆಂಬದು ನನ್ನ ಧ್ಯಾನದಲ್ಲಿ ಬಂದಿತು. ನೀವು ಆಡುವದು ನಿಜವಿರುತ್ತದೆ. ಹೆಣ್ಣುಮಕ್ಕಳನ್ನು ಹಡೆದ ಈಗಿನ ತಂದೆ-ತಾಯಿಗಳಿಗೆ ಸ್ವಲ್ಪವೂ ಜ್ಞಾನವಿರುವದಿಲ್ಲ. ಅವರು ತಮ್ಮ ಅನುಕೂಲವನ್ನು ನೋಡುವರೇ ಹೊರತು ಮಕ್ಕಳ ಸುಖವನ್ನು ನೋಡುವದಿಲ್ಲ. ಅಳಿಯನು ಶ್ರೀಮಂತನಿದ್ದರೆ ತಮಗೆ ಆರ್ಥಿಕ ಲಾಭವಾಗುವದೆಂಬದೊಂದೇ ವಿಷಯವು ಇವರ ತಲೆಯಲ್ಲಿ ತುಂಬಿರುತ್ತದೆ. ಅಳಿಯನು ಸ್ಮಶಾನಕ್ಕೆ ಸಂಚುಗಾರ ಕೊಟ್ಟಿದ್ದರೂ ಚಿಂತೆಯಿಲ್ಲ; ಅವನಿಗೆ ನಿಶ್ಶಂಕೆಯಿಂದ ತಮ್ಮ ಹೊಟ್ಟೆಯಲ್ಲಿ ಹುಟ್ಟಿದ ಕೋಮಲ ಬಾಲಿಕೆಯರನ್ನು ಧಾರೆಯೆರೆದು ಕೊಡುವರು. ಹಾಯ್! ಹಾಯ್! ಏನು ವಿವಾಹ ಮಾಡುವ ಪದ್ಧತಿಯಿದು! ಶ್ರೀಮಂತಿಕೆಯೊಂದಿದ್ದರೆ ವಯಸ್ಸು ಜ್ವಲಿಗೆ

ಬರುವದಿಲ್ಲ; ಮೂರ್ಖತನ-ಹುಚ್ಚುತನ ಮೊದಲಾದವುಗಳು ಸಹ ಗಣನೆಗೆ ಬರುವದಿಲ್ಲ.

ತರುಣಿ:—ಸಖೀ, ಯೋಗ್ಯ ಮಾತುಗಳನ್ನಾಡಿದೆ. ಪಿತೃಸ್ಥಾನಕ್ಕೆ ಶೋಭಿಸುವಂಥವರೊಡನೆ ವಿವಾಹವಾದರೆ, ದಂಪತಿಗಳಲ್ಲಿ ಎಷ್ಟು ಪ್ರೇಮವೂ, ಸೌಖ್ಯವೂ ಇರಬಹುದೆಂಬದನ್ನು ನೀನೇ ನೋಡು.

ಕಾಲ್ಪನಿಕ ಸಖಿ:—ಅವ್ವನವರೇ, ಇಂಥ ಅಸಂಬದ್ಧ ವಿವಾಹಗಳಿಂದ ಒಮ್ಮೊಮ್ಮೆ ಬಹಳ ಅನರ್ಥವಾಗುತ್ತದೆ. ಯಾಕಂದರೆ ಪ್ರೇಮವು ಯಾವದೊಂದು ವ್ಯಕ್ತಿಯ ಮೇಲೆ ಆವಾಹಿಸಲ್ಪಟ್ಟು, ಆ ವ್ಯಕ್ತಿಯನ್ನು ಆರಾಧಿಸಿದ ಹೊರತು ಅದು ಹಾಗೆಯೇ ಕಡಿಮೆಯಾಗುವದಿಲ್ಲ.

ತರುಣಿ(ಸಂತೋಷದಿಂದ):—ಭಲಾ ಸಖಿ! ಯಥಾರ್ಥವಾದ ತತ್ವವನ್ನು ಹುಡುಕಿ ತೆಗೆದೆ? ನನ್ನ ವಿವಾಹವಾಗಿ ಎರಡು ವರುಷಗಳಾಗಿ ಹೋಗಿದ್ದರೂ ಈಗ ನೀನು ಹೇಳಿದಂತೆ ಈ ಅಸಂಬದ್ಧ ವಿವಾಹದಿಂದ ನನ್ನ ಪ್ರೇಮವು ಮೊಸಲವಾಗಿ ಹಾಗೆಯೇ ಉಳಿದಿದೆ; ಆದರೆ........

ಕಾಲ್ಪನಿಕ ಸಖಿ:—ಆದರೆ ಯಾಕೆ?

ತರುಣಿ(ಸ್ವಲ್ಪ ನಾಚಿಕೆಯಿಂದ):—ಸಖೀ, ನಾನು ಆದರೆ ಎಂಬ ಶಬ್ದವನ್ನು ಉಪಯೋಗಿಸಿದ್ದಲ್ಲಿ ಕಾರಣವನ್ನು ಹೇಳಲು ನನಗೆ ನಾಚಿಕೆಯುಂಟಾಗುತ್ತದೆ.

ಕಾಲ್ಪನಿಕ ಸಖಿ:—ಗೆಳತೀ, ನಾಚಿಕೆ ಯಾವಾಗ? ಅನ್ಯರಿದ್ದಾಗಲ್ಲವೆ? ಈಗ ಅನ್ಯರು ಇಲ್ಲಿ ಯಾರಿರುವರು?

ತರುಣಿ:—ಅನ್ಯರಿಲ್ಲದ್ದು ನಿಜ; ಆದರೂ ಗುಪ್ತಮನೋಭಾವವನ್ನು ಪ್ರಕಾಶಕ್ಕೆ ತರುವದು ಜಡವೆನಿಸುತ್ತದೆ.

ಹೀಗೆ ಆ ತರುಣಿಯು ಕಾಲ್ಪನಿಕಸಖಿಯೊಡನೆ ಪ್ರಶ್ನೋತ್ತರಗಳನ್ನು ನಡಿಸಿರಲು, ಅಂತಃಪುರದಲ್ಲಿ ಯಾರೋ ಪ್ರವೇಶಿಸಿದ ಹಾಗೆ ಭಾಸವಾಯಿತು. ಕೂಡಲೆ ಅವಳು ಸೆರಗು ಸಾವರಿಸಿಕೊಂಡು ಅತ್ತಿತ್ತ ನೋಡುತ್ತಿರಲು ಗಿರಿಸಿಂಹನು ಒಳಗೆ ಬಂದನು. ಅವನ ಬರವನ್ನು ಕಂಡು, ತರುಣಿಯು ಎದ್ದುನಿಂತು ಕೃತ್ರಿಮಸಂತೋಷವನ್ನು ತಂದುಕೊಂಡು, ಆತನನ್ನು ಆದರಿಸಿದಳು. ಆಗ ಗಿರಿಸಿಂಹನ ಗಲ್ಲವು ಪೆಚ್ಚು ಬಿದ್ದು ಗದ್ದವು ಮುಂದೆ ಹಾಯ್ದಿರಲು, ಕಣ್ಣುಗಳು ಒಳಸಿಕ್ಕು ಮುಖದ ಶೋಭೆಯು ಹೊರಟು ಹೋಗಿರಲು, ಅವನು ತರುಣನಂತೆ ಉಲ್ಹಾಸವನ್ನು ವ್ಯಕ್ತಗೊಳಿಸುತ್ತ ಅಲ್ಲಿದ್ದ ಒಂದು ಸುಂದರವಾದ ಮಂಚದ ಮೇಲೆ ಕುಳಿತು:—ಬಾ ಪ್ರಿಯೇ, ಛಂದ ಎಂ ತರುಣಿಯನ್ನು ಹತ್ತರ ಜಗ್ಗಿಕೊಂಡನು. ಬಳಿಕ ಆತನ ಪೌರುಷದ ಮಾತುಗಳಿಗೆ ಪ್ರಾರಂಭವಾಯಿತು.

ಗಿರಿಸಿಂಹ:—ಪ್ರಿಯೇ, ನಾನು ಮುದುಕನೆಂದು ತಿಳಿದು ನನ್ನ ಮೇಲೆ ಮಾಡತಕ್ಕಷ್ಟು ಪ್ರೇಮವನ್ನು ನೀನು ಮಾಡುವದಿಲ್ಲೆಂದು ತಿಳಿದಿದ್ದೆನು; ಆದರೆ ಈ ದಿನ ನಿನ್ನ ಮುಖಭಾವ-ಆದರಗಳನ್ನು ನೋಡಿ, ನನ್ನ ಆ ತಿಳುವಳಿಕೆಯು ದೂರಾಯಿತು.

ತರುಣಿ (ಅಂತರಂಗದಲ್ಲಿ ಅಸಹ್ಯಪಡುತ್ತ):—ಸರಿ-ಸರಿ, ಇದೊಳ್ಳೆಯ ನಿಮ್ಮ ತಿಳವಳಿಕೆಯು? ನೀವು ಹೀಗೆ ಇಲ್ಲದ್ದೊಂದು ಸಂಶಯ ತಕ್ಕೊಂಡರೆ, ನಾನು ಯಾವ ಆಧಾರದ ಮೇಲೆ ಇಲ್ಲಿ ಇರಬೇಕು? ನೀವೇ ನನಗೆ ಸರ್ವಸ್ವವಾಗಿರಲು, ನಿಮ್ಮ ವಿಷಯವಾಗಿ ಅನಾದರಭಾವವನ್ನು ತಳೆಯಬಹುದೇ?

ಗಿರಿಸಿಂಹ:—ಪ್ರಿಯೇ, ವ್ಯರ್ಥವಾಗಿ ನಿನ್ನ ಮನಸ್ಸು ನೋಯಿಸಿದ್ದಕ್ಕೆ ನನಗೆ ಪಶ್ಚಾತ್ತಾಪವಾಗುತ್ತಿದೆ. ಇದಕ್ಕೆ ನಿನ್ನ ಕ್ಷಮೆ ಬೇಡುವೆನು. ಇರಲಿ. ಸದ್ಯಕ್ಕೆ ಒಂದು ಆನಂದದ ಸುದ್ದಿಯನ್ನು ನಿನ್ನ ಮುಂದೆ ಹೇಳಬೇಕಾಗಿದೆ. ಈಗ ಚಾಲುಕ್ಯ ಸಮ್ರಾಟನು ನಮ್ಮ ಕೋಟೆಯನ್ನು ಕೈವಶ ಮಾಡಿಕೊಳ್ಳಬೇಕೆಂದು ಹದಿನೈದು ದಿವಸಗಳಿಂದ ಮುತ್ತಿಗೆ ಹಾಕಿರುವನಷ್ಟೆ; ಆದರೆ ನಮ್ಮ ಪಾವಗಡದ ಕೋಟೆಯು ಅವನಪ್ಪನಿಗೂ ಹಣಿಯದಾಗಿದೆ. ನಮ್ಮಲ್ಲಿ ಹೇರಳವಾದ ಅನ್ನಸಾಮಗ್ರಿಯಿದೆ; ನೀರಿನ ಕೊರತೆಯಿಲ್ಲ; ಅವನು ವರುಷಗಟ್ಟಲೆ ಕಾಯುತ್ತ ಕುಳಿತರೂ, ನಾವು ಅಂಜುವ ಹಾಗೆ ಇದ್ದಿಲ್ಲ. ಇಂಥದರಲ್ಲಿ ವಿಶೇಷವಾಗಿ ನಮ್ಮ ಸೇನಾಪತಿಯಾದ ಧನಸಿಂಗನು ಒಳ್ಳೇ ಸಮಯ ನೋಡಿ, ಶತ್ರುಗಳ ಒಂದು ತುಕ್ಕಡಿಯನ್ನು ಸೋಲಿಸಿ, ಇಂದೇ ವಿಜಯವನ್ನು ಸಂಪಾದಿಸಿಕೊಂಡು ಒಂದಿದ್ದಾನೆ. ಚಾಲುಕ್ಯಸಮ್ರಾಟನ ದಂಡಿನಲ್ಲಿ ಇದು ವರೆಗೆ ಅಸಂಖ್ಯಜನರ ಪ್ರಾಣಹಾನಿಯಾಗಿರುವದಲ್ಲದೆ, ಈ ದಿನವೂ ವಿಶೇಷವಾಗಿರುತ್ತದೆ. ನಾನು ಪ್ರತಿನಿತ್ಯ ಮೂರು-ಮೂರು ಸಾರೆ ಕೋಟೆಯ ಆಯಕಟ್ಟಿನ ಸ್ಥಳಗಳಿಗೆ ಹೋಗಿ, ಕಾವಲುಗಾರರನ್ನು ಹುರಿದುಂಬಿಸುತ್ತಿದ್ದದರಿಂದ, ನಮ್ಮ ಜನರು ಒಳ್ಳೇ ದಕ್ಷತೆಯಲ್ಲಿರುತ್ತಾರೆ. ನನ್ನ ದರ್ಪಿಗೆ ಅಂಜಿ, ಯಾವ ಒಳಸಂಚುಗಾರನೂ ಕೋಟೆಯೊಳಕ್ಕೆ ಕಾಲಿಡುವ ಹಾಗಿಲ್ಲ. ಹೀಗೆ ಸಮ್ರಾಟನ ಕಡೆಯದೊಂದು ಇರುವೆಗೆ ಸಹ ನುಸುಳಲಿಕ್ಕೆ ಆಸ್ಪದ ಸಿಗದ್ದರಿಂದ, ಅವನು ಈ ದಿನ ಆದ ಅಪಮಾನದಿಂದ ಖಿನ್ನನಾಗಿ, ಮುತ್ತಿಗೆಯನ್ನೆಬ್ಬಿಸಿಕೊಂಡು ಹೋಗುವನೆಂಬ ಸುವಾರ್ತೆಯು ಒಂದಿರುತ್ತದೆ. ಪ್ರಿಯೆ, ನೋಡು, ಹೇಗಿದೆ ಗಿರಿಸಿಂಹನ ಕರ್ತೃತ್ವಶಕ್ತಿಯು! ಈ ಕಾಲಕ್ಕೆ ಈ ಬಹಾದ್ದರ ಗಿರಿಸಿಂಹನಲ್ಲದೆ ಇನ್ನೊಬ್ಬನು ಈ ಸಿಂಹಾಸನದ ಮೇಲಿದ್ದರೆ, ಅಂಜಿ ಕೋಟೆಯನ್ನು ಶತ್ರುಗಳಿಗೆ ಒಪ್ಪಿಸಿ ಬಿಡುತ್ತಿದ್ದನು.

ಈ ಮೇರೆಗೆ ಗಿರಿಸಿಂಹನು ಪೌರುಷವನ್ನು ಕೊಚ್ಚಿಕೊಳ್ಳುತ್ತಿರಲು, ತರು

ಣಿಯು ಬೇಸತ್ತಳು. ಆಕೆಗೆ ಆ ಮುದುಕನ ವಾಗಾಡಂಬರಗಳನ್ನು ಕೇಳಿ ಕೇಳಿ ಸಾಕಾಗಿತ್ತು. ಆದರೂ ಅವಳು ಭಿಡೆಕ್ಕಾಗಿ ಮೌನದಿಂದ ಶ್ರವಣ ಮಾಡುತ್ತಿದ್ದಳು; ಆದರೆ ಆಕೆಗೆ ಈ ದಿವಸ ಆತನು ಹೇಳುವ ಸಂಗತಿಯಿಂದ ವಿಲಕ್ಷಣ ಅಸಮಾಧಾನವಾಗಹತ್ತಿತು. ಅವಳು ಬಹು ಚಾಣಾಕ್ಷಳಿದ್ದದರಿಂದ, ಆ ಮುದುಕನಿಗೆ ತನ್ನ ಮನೋಭಾವವು ತಿಳಿಯಬಾರದೆಂದು ಆದಷ್ಟು ಹಾಸ್ಯಭಾವವನ್ನು ತಾಳಲಿಕ್ಕೆ ಪ್ರಯತ್ನಿಸುತ್ತಿದ್ದಳು. ಪೌರುಷ ಹೇಳುವ ಭರದಲ್ಲಿದ್ದ ಗಿರಿಸಿಂಹನ ಲಕ್ಷ್ಯವೂ ಆಕೆಯ ಅಸಮಾಧಾನದ ಕಡೆಗೆ ಹೋಗಲಿಲ್ಲ. ಇನ್ನು ಆ ಮುದುಕನು ಏನೇನೋ ಹರಟತಕ್ಕವನಿದ್ದನು; ಅಷ್ಟರಲ್ಲಿ ಒಬ್ಬ ದೂತನು ಬಂದು ದಾಸಿಯರ ಮುಖಾಂತರ ವರದಿಯನ್ನು ಕಳುಹಿಸಿದನು. ಆಗ ಗಿರಿಸಿಂಹನು:— "ಪ್ರಿಯೇ, ನಿನ್ನೊಡನೆ ಕೆಲ ಹೊತ್ತು ವಿನೋದದಲ್ಲಿ ಕಳೆಯಬೇಕೆಂದರೆ, ನನಗೆ ಒಂದು ಗಳಿಗೆ ಕೂಡಾ ವಿರಾಮವಿಲ್ಲ ನೋಡು; ಈ ಹಾಳು ರಾಜ್ಯದ ಸಲುವಾಗಿ ಸಾಕು-ಸಾಕಾಗಿದೆ. ಅದರಲ್ಲೂ ಶತ್ರುಗಳು ಮುತ್ತಿದ ಈ ಕಾಲದಲ್ಲಿ ಕಣ್ಣಲ್ಲಿ ಎಣ್ಣೆ ಹಾಕಿಕೊಂಡು ಕೂಡ್ರಬೇಕಾಗಿದೆ" ಎಂದು ನುಡಿದು, ಹೆಂಡತಿಯ ಕೋಮಲ ಗಲ್ಲವನ್ನೊಮ್ಮೆ ಚುಂಬಿಸಿ, ಅಲ್ಲಿಂದ ಹೊರಹೊರಟನು.

ಪ್ರಿಯವಾಚಕರೇ, ಮೇಲಿನ ಸಂಭಾಷಣ ಶ್ರವಣದಿಂದ ಆ ತರುಣಿಯು ಗಿರಿಸಿಂಹನ ಹೆಂಡತಿಯೆಂದು ಗೊತ್ತಾಗಿರಬಹುದಲ್ಲವೇ? ಗಿರಿಸಿಂಹನು ಗುಜರಾಥದಲ್ಲಿ ಎಲ್ಲಕ್ಕೂ ಶ್ರೇಷ್ಠಪ್ರತಿಯ ಸಂಸ್ಥಾನಿಕನಾಗಿದ್ದನು ಕಿಂಬಹುನಾ ಈತನಿಗೆ ಎಲ್ಲ ಸಂಸ್ಥಾನಿಕರೂ ಅಧೀನರಾಗಿ ನಡೆಯುತ್ತಿದ್ದರೆಂದರೂ ಸಲ್ಲುವದು; ಆದರೆ ಕಾಲಮಾನದಿಂದ ಗಿರಿಸಿಂಹನು ವೃದ್ಧಾಪ್ಯದೆಸೆಗೆ ಬರಲು, ಹಿಂದೆ ಎರಡನೆಯ ಪ್ರಕರಣದಲ್ಲಿ ಹೇಳಿದಂತೆ ಗುಜರಾಥದ ಎಲ್ಲ ಸಂಸ್ಥಾನಿಕರೂ ಆಪಸ್ವಾರ್ಥದ ಹರಿಗೆ ಬಿದ್ದು, ಆತನನ್ನು ಉದಾಸೀನ ಮಾಡುತ್ತಿದ್ದರು; ಆದರೂ ಆತನ ಅಂಜಿಕೆಯು ಎಲ್ಲರನ್ನೂ ಬಾಧಿಸುತ್ತಿತ್ತು.

ಗಿರಿಸಿಂಹನು ಪೌರುಷವಂತನು; ಮಹಾಶೂರನು; ಶತ್ರುಗಳಿಗೆ ಪ್ರತ್ಯಕ್ಷ ಕಾಲನು; ಯುಕ್ತಿಗಳಲ್ಲಂತೂ ಮಿಗಿಲಾದವನು. ಇಂಥ ಅಗಾಧವಾದ ಬಲಶಾಲಿತ್ವ-ಅಪಾರವಾದ ವೈಭವಗಳಿದ್ದರೂ, ಆ ವೈಭವವನ್ನು ಸಫಲಗೊಳಿಸಲಿಕ್ಕೆ ಆತನಿಗೆ ಸಂತತಿಯು ಮಾತ್ರ ಇದ್ದಿಲ್ಲ; ಆ ಕೊರತೆಗಾಗಿ ಅವನು ಯಾವಾಗಲೂ ಯೋಚಿಸುತ್ತಿದ್ದನು. ಪಟ್ಟಮಹಿಷಿಯು ಹುಟ್ಟಬಂಜೆಯಾದಳು; ಉಳಿದ ಇಬ್ಬರು ಮಡದಿಯರ ಕೂಸುಗಳು ಬದುಕದಾದವು. ಹೀಗಾಗಿ ಎಪ್ಪತ್ತು ವರುಷದ ಮುದುಕನಾದರೂ ಪುತ್ರಮುಖವನ್ನು ಕಾಣದೆ ಹೋದನು. ಆದ್ದರಿಂದ ಬೇರೊಬ್ಬ ಹೆಂಡತಿಯನ್ನು ಮಾಡಿಕೊಳ್ಳಬೇಕೆಂಬ ಹುಚ್ಚು ಹಿಡಿದು, ಪದ್ಮರಾಜಸಾಗ

ರದ ಸಂಸ್ಥಾನಿಕನ ಮಗಳಾದ ವಿಮಲೆಯನ್ನು ಮದುವೆ ಮಾಡಿಕೊಂಡಿದ್ದನು.

ವಿಮಲೆಯು ಗಿರಿಸಿಂಹನ ರಾಣಿಯಾಗಿ ಪದ್ಮರಾಜಸಾಗರವನ್ನು ಬಿಟ್ಟು, ಪಾವಗಡಕ್ಕೆ ಬಂದಳು. ಆಗ ಆಕೆಗೆ ಒಳ್ಳೇ ಯೌವನವು ಪ್ರಾಪ್ತವಾಗಿತ್ತು; ಆದರೆ ವೃದ್ಧನ ಪಾಣಿಗ್ರಹಣ ಮಾಡಿದ್ದರಿಂದ, ಅವಳಿಗೆ ಪ್ರೇಮಕ್ಕೆ ಸ್ಥಳವಿಲ್ಲದಂತಾಗಿತ್ತು. ಪವಿತ್ರಪ್ರೇಮವು ಬೆಳೆಯಲಿಕ್ಕೆ ಸಮಾನ ಗುಣಧರ್ಮವು ಬೇಕೆಂಬದನ್ನು ಆ ವಿಮಲೆಯ ತಂದೆಯು ಅರಿತಿದ್ದರೂ, ಗಿರಿಸಿಂಹನಂಥ ದೊಡ್ಡ ಸಂಸ್ಥಾನಿಕನ ಬೆಂಬಲವು ತನಗೆ ದೊರೆಯುವದೆಂಬ ದುರಾಶೆಗೆ ಬಿದ್ದು, ಆ ಮುದುವನಿಗೆ ತನ್ನ ಮಗಳನ್ನು ಕೊಟ್ಟಿದ್ದನು ಪ್ರಾಯವು ಕಳೆದು ಹೋದ ಮೇಲೆ ವಿವಾಹದ ಗೊಡವೆಗೆ ಹೋಗುವದು ತೀರ ದಡ್ಡತನವೆಂಬದು ಗಿರಿಸಿಂಹನಿಗೆ ತಿಳಿದ ಸಂಗತಿಯಾಗಿದ್ದರೂ, ಆತನು ಮುದಿಹುಚ್ಚಿನಿಂದ ಒಂದು ಜಗೆಯ ಈರ್ಷೆಗೆ ಬಿದ್ದೇ ಆ ಮದುವೆಯ ಉರಲನ್ನು ಕೊರಳಿಗೆ ಹಾಕಿಕೊಂಡಿದ್ದನು! ವಿಮಲೆಯು ಮನೆಗೆ ಬಂದನಂತರ ತಾನು ಈ ಹೊಸ ರಾಣಿಯನ್ನು ಮಾಡಿಕೊಂಡು ಬಂದದ್ದು ತಪ್ಪಾಯಿತೆಂಬದು ಅವನ ಅನುಭವಕ್ಕೆ ಬಂದು ಹೋಯಿತು; ಆದರೆ ಕಾರ್ಯವು ಆಗಿ ಹೋಗಿದ್ದರಿಂದ ಅವನು ಆದದ್ದನ್ನು ಅನುಭವಿಸಲೇ ಬೇಕಾಗಿತ್ತು.

ಲೋಕದಲ್ಲಿ, ಈಗಿನ ಕಾಲದಲ್ಲಿ ವಿಶೇಷವಾಗಿ ವೃದ್ಧವಿವಾಹಗಳು ಹೆಚ್ಚುತ್ತಿರುವದು ಅತ್ಯಂತ ಶೋಚನೀಯವಿರುತ್ತದೆ. ಕನ್ಯಾಪಿತೃಗಳು ದ್ರವ್ಯದ ಆಶೆಗಾಗಿ ತಮ್ಮ ಎಳೆಯ ಮಕ್ಕಳನ್ನು ಒಂದು ಕಾಲನ್ನು ಸ್ಮಶಾನದಲ್ಲಿ, ಇನ್ನೊಂದನ್ನು ಮನೆಯಲ್ಲಿ ಇಟ್ಟಂಥ ಮುದುಕರಿಗೆ ಕೊಡುವದರಿಂದ ಎಷ್ಟು ಅನರ್ಥವಾಗುವದೆಂಬದನ್ನು ಅವರು ವಿಚಾರಿಸುವದಿಲ್ಲ. ಇದರಿಂದ ಅನೀತಿವೃದ್ಧಿಗೆ ಅಸ್ಪದವು ಸಿಕ್ಕು ಸಾಮಾಜಿಕ ಸ್ಥಿತಿಯು ಹಾಳಾಗುವದೆಂಬದನ್ನು ಅವರು ಲಕ್ಷಿಸುವದಿಲ್ಲ. ಈ ಅನೀತಿ ಅಭಿವೃದ್ಧಿಯ ದೋಷಕ್ಕೆ ಕನ್ಯಾಪಿತನೂ ಕನ್ಯೆಯು ವೃದ್ಧಪತಿಯೂ ಭಾಗಿಗಳಾಗುವರು. ಆದ್ದರಿಂದ ಈ ವೃದ್ಧವಿವಾಹವು ಕಾಲತ್ರಯದಲ್ಲಿಯೂ ನಿಷೇಧವೆಂದು ಹೇಳಲಾಗುವದು. ಇಂಥ ಅವ್ಯಾಪಾರೇಷು ವ್ಯಾಪಾರ ಮಾಡತಕ್ಕವರು ಮರಣಾಂತದವರೆಗೆ ದುಃಖಭೋಗಿಸುವದನ್ನು ನೋಡುತ್ತಿದ್ದರೂ ಆ ಕಡೆಗೆ ಜನರು ಮತ್ತೂ ದುರ್ಲಕ್ಷಿಸುವರೆಂಬದು ಅತ್ಯಂತ ಶೋಚನೀಯವಾಗಿದೆ ಇರಲಿ.

ವಿಮಲೆಯು ಅಂತರಂಗದಲ್ಲಿ ಯಾವಾಗಲೂ ತಳಮಳಿಸುತ್ತಿದ್ದಳು. ಆಕೆಗೆ ಒಳಗೆ ಬಂದರೆ ಸಮಾಧಾನವಿಲ್ಲ; ಹೊರಗೆ ಹೋದರೆ ಸಮಾಧಾನವಿಲ್ಲ; ಕೂತರೆ ಸಮಾಧಾನವಿಲ್ಲ; ನಿಂತರೆ ಸಮಾಧಾನವಿಲ್ಲ; ಮಲಗಿದರೆ ಸಮಾಧಾನವಿಲ್ಲ. ಈ ಅಖಂಡ ಅಸಮಾಧಾನದಿಂದ ತ್ರಸ್ತಳಾಗಿ ಅವಳು ಪ್ರತಿ ದಿನದಲ್ಲೂ ಕಿಂಬಹುನಾ ಪ್ರತಿಕ್ಷಣದಲ್ಲೂ ತಂದೆಯನ್ನೂ ಪತಿಯನ್ನೂ ಶಪಿಸುತ್ತಿದ್ದಳು! ಆಕೆಯು ಪಾಪ

ಭೀರುವಿದ್ದದರಿಂದ ಅಡ್ಡಮಾರ್ಗವನ್ನು ಹಿಡಿಯದೆ, ದಿನಾಲು ಕಣ್ಣೀರುದುರಿಸುವದೊಂದೇ ವ್ರತವನ್ನು ಹಿಡಿದಿದ್ದಳು. ಈ ಸಂಗತಿಯನ್ನು ಸೂಕ್ಷ್ಮವಾಗಿ ಕಂಡುಹಿಡಿದ ಗಿರಿಸಿಂಹನು ಮನಸ್ಸಿನಲ್ಲಿ ಬಹಳವಾಗಿ ನಾಚಿಕೊಂಡಿದ್ದನು. ಆತನು ವಿಮಲೆಯ ಅಂತಃಪುರಕ್ಕೆ ಒರಬೇಕಾದರೆ ಎಡಗೈಯಲ್ಲಿ ಜೀವ ಹಿಡಿದುಕೊಂಡೇ ಬರಬೇಕಾಗುತ್ತಿತ್ತು. ಹಾಯ್! ಹಾಯ್! ವೃದ್ಧಾಪ್ಯದಲ್ಲಿ ವಿವಾಹವನ್ನು ಮಾಡಿಕೊಂಡು, ಈ ರೀತಿ ಪರರ ಮನೋವ್ಯಥೆಯನ್ನು ಹೆಚ್ಚಿಸುವವರ ಬಾಳುವೆಗೆ ಧಿಃಕಾರವಿರಲಿ! ವಿಮಲೆಗೆ ಏರಿಕೆಯ ಪ್ರಾಯವು; ದಿವಸಗಳು ಹೆಚ್ಚಿದಂತೆ ಆಕೆಯ ಮನೋವ್ಯಥೆಯೂ ಹೆಚ್ಚುತ್ತ ನಡೆಯುವದು ಸ್ವಾಭಾವಿಕವು. ಈಚೀಚೆಗಂತೂ ಅವಳು ಕೇವಲ ತನ್ನ ಸ್ಥಿತಿಯ ಯೋಚನೆಯಲ್ಲಿಯೇ ಕಾಲಕಳೆಯುತ್ತಿದ್ದಳು. ಯಾವಾಗಲೂ ಏಕಾಂತ ಮಂದಿರದಲ್ಲಿ ಇರುತ್ತಿದ್ದಳು. ದಾಸಿಯರ ಸಂಗಡವೂ ವಿಶೇಷ ಮಾತಾಡುತ್ತಿದ್ದಿಲ್ಲ. ಅವ್ವನವರು ಹೀಗೇಕೆ ಮಾಡುವರೆಂದು ಆ ದಾಸಿಯರು ತಮ್ಮ ತಮ್ಮೊಳಗೆ ಚರ್ಚಿಸಿ, ಅವರೂ ಆಕೆಯ ವಿಷಯವಾಗಿ ಕನಿಕರ ಪಡುತ್ತಿದ್ದರು.

ಹೀಗಿರಲು, ಒಂದುದಿನ ವಿಮಲೆಯು ದಾಸಿಯರೊಡನೆ ಶತ್ರುಗಳು ಕೋಟೆಗೆ ಹಾಕಿದ ಮುತ್ತಿಗೆಯನ್ನು ನೋಡುವದಕ್ಕೆ 'ಏಕಲಿಂಗಜೀ' ಎಂಬ ಹೆಸರಿನ ಬುರುಜಿನ ಮೇಲೆ ಹತ್ತಿದ್ದಳು. ಈ ಬುರುಜು ಗುರ್ಜರ ದೇಶದಲ್ಲಿಯ ಎಲ್ಲ ಕಿಲ್ಲೆಗಳಲ್ಲಿರುವ ಬುರುಜುಗಳಿಗಿಂತ ಅತ್ಯಂತ ಶ್ರೇಷ್ಠವಾದದ್ದು. ಎತ್ತರ, ಭದ್ರತೆ, ಸೌಂದರ್ಯ ಇವುಗಳಲ್ಲಿ ಇದನ್ನು ಬಿಟ್ಟರೆ, ಇನ್ನಾವ ಬುರುಜುಗಳೂ ಶ್ರೇಷ್ಠವಿದ್ದಿಲ್ಲ. ಈ ಬುರುಜಿನ ಮೇಲೆ ಹತ್ತಿ ಕುಳಿತುಕೊಂಡರೆ, ಪಾವಗಡದುರ್ಗವು ಸುತ್ತುಮುತ್ತು ಮೂರು ಮೈಲುಗಳ ವರೆಗಿನ ಪ್ರದೇಶವು ಸ್ವಚ್ಛವಾಗಿ ಕಾಣಿಸುತ್ತಿತ್ತು. ದುರ್ಗದ ಸಮೀಪದ ಪ್ರದೇಶವಂತೂ ಬಹಳ ಉತ್ತಮವಾಗಿ ಕಾಣಿಸುತ್ತಿತ್ತು. ಸಂಗಡಿಗರಾದ ದಾಸಿಯರು ಬೊಟ್ಟು ಮಾಡಿ ಇದು ಇಂಥದು, ಇವರು ಇಂಥವರು, ಈ ರಾಹುಟಿಯು ಅಂಥವರದು ಎಂದು ರಾಣಿಗೆ ತೋರಿಸುತ್ತಿರಲು, ತೇಜೋಮಯನಾದ ಒಬ್ಬ ಪುರುಷನು ಕರೀಬಣ್ಣದ್ದೊಂದು ಬೆಟ್ಟದಂಥ ಕುದುರೆಯನ್ನೇರಿ ಒಂದು ರಾಹುಟಿಯೊಳಗಿಂದ ಹೊರಬಿದ್ದು, ಬೈಲಿಗೆ ಬಂದನು. ಆ ಕೂಡಲೆ ದಾಸಿಯರು ಆತನ ಕಡೆಗೆ ಬೊಟ್ಟು ಮಾಡಿ:—ಅವ್ವನವರೇ, ಇಕೋ ನೋಡಿರಿ. ಈ ಕುದುರೆಯ ಮೇಲೆ ಕುಳಿತುಕೊಂಡಿರುವ ಈ ಭವ್ಯಪುರುಷನು ಈ ಶತ್ರುಸೈನ್ಯದ ರಾಜನಂತೆ. ಈತನೇ ನಮ್ಮ ಪಾವಗಡದ ದುರ್ಗವನ್ನು ಕೈವಶ ಮಾಡಿಕೊಂಡು, ಸುಟ್ಟು ಸೂರೆಗೊಳ್ಳಬೇಕೆಂದು ಇಷ್ಟು ಸನ್ನಾಹದೊಡನೆ ಬಂದವನಂತೆ! ಇವನು ದಕ್ಷಿಣ ದೇಶದಲ್ಲಿ ದೊಡ್ಡ ರಾಜನಿ

ರುವನಂತೆ. ಆದರೂ ರಾಜ್ಯ ಗಳಿಸುವ ಹುಚ್ಚು ಬಿಡದೆ, ನಮ್ಮ ಮಹಾರಾಜರೊಡನೆ ಕಾಲು ಕೆದರಿ ಜಗಳವನ್ನು ತೆಗೆದಿರುವನು. ನಮ್ಮ ಗಿರಿಸಿಂಹ ಮಹಾರಾಜರು ಈತನ ಗಂಟಲು ಸೀಳದೆ ಬಿಡರು! ಎಂದು ನುಡಿದು ಸುಮ್ಮನಾದರು. ನೋಡ-ನೋಡುವಷ್ಟರಲ್ಲಿ ಆ ಅಶ್ವಾರೂಢನಾದ ತೇಜಸ್ವೀ ಪುರುಷನು ತನ್ನ ವಿಶಾಲವಾದ ದಂಡಿನಲ್ಲಿ ಸೇರಿ ಕಾಣದಂತಾದನು.

ಹೀಗೆ ತರುಣನು ಕಾಣದಾಗಲು ವಿಮಲೆಯು ಮೆಲ್ಲಗೆ ಒಂದು ನಿಟ್ಟುಸಿರು ಬಿಟ್ಟು, ದಾಸಿಯರೊಡನೆ ಅಂತಃಪುರಕ್ಕೆ ತಿರುಗಿ ಬಂದಳು. ಆಕೆಗೆ ಯಾವ ಕ್ಷಣಕ್ಕೆ ಆ ತರುಣನ ದರುಶನವಾಯಿತೋ, ಆ ಕ್ಷಣದಲ್ಲಿಯೇ ಅವಳ ಚಿತ್ತವು ಆ ತರುಣನನ್ನು ಹಿಂಬಾಲಿಸಿ ನಡೆಯಿತು. ಬಹು ದಿವಸಗಳ ವರೆಗೆ ಪ್ರತಿಬಂಧದಲ್ಲಿದ್ದ ಆ ತರುಣಿಯ ಪ್ರೇಮವು ನಿರಂಕುಶವಾಗಿ ಹಬ್ಬಿ ಹರಿಬಿದ್ದಿತು ತರುಣಿಗೆ ಏನೂ ತಿಳಿಯದಾಯಿತು. ಅವಳು ಆ ತರುಣನ ಧ್ಯಾನದಲ್ಲಿ ತದೇಕಮಗ್ನಳಾದಳು!

ಈ ಮೇರೆಗೆ ವಿಮಲೆಯ ಮನಸ್ಸು ಚಾಲುಕ್ಯ ಸಮ್ರಾಟನಲ್ಲಿ ನಡಲು, ಅಂದಿನಿಂದ ಅವಳು ಇದೇ ವಿಷಯುವನ್ನೇ ಯೋಚಿಸುತ್ತಿದ್ದಳು. ಸಮ್ರಾಟನ ವಿಷಯವಾಗಿದ್ದ ತನ್ನ ಈ ಪ್ರೇಮವು ಹೇಗೆ ಸಾರ್ಥಕವಾಗುವದೆಂಬದೇ ಅವಳ ಚಿಂತೆಯ ವಿಷಯವು. ಹೀಗೆ ಈ ನೂತನ ರಾಣಿಯು ವಡವಾಗ್ನಿಯಂತೆ ಅಂತಃಪುರದಲ್ಲಿದ್ದುಕೊಂಡು, ಶತ್ರುವಿಗೆ ಕ್ಷೇಮಚಿಂತನೆಯನ್ನು ಮಾಡುವಳೆಂಬದನ್ನು ಅರಿಯದ ಆ ಮುದಿ ಅರಸನು, ಈ ದಿನ ಆಕೆಯ ಬಳಿಗೆ ಬಂದು ತನ್ನ ಪೌರುಷವನ್ನು ಕೊಚ್ಚುವ ನೆವದಿಂದ ಶತ್ರುವಿನ ಅಪಕರ್ಷವನ್ನು ವರ್ಣಿಸಿದನು; ಯಾವ ಸಂಗತಿಯನ್ನು ಹೇಳುವದರಿಂದ ತನ್ನ ಹೊಸ ರಾಣಿಯು ಸಂತಸ ಹೊಂದಿ, ತನ್ನನ್ನು ಪ್ರೀತಿಸುವಳೆಂದು ಗಿರಿಸಿಂಹನು ತಿಳಿದಿದ್ದನೋ, ಆ ಸಂಗತಿಯ ಕಥನವೇ ತನಗೆ ಮೃತ್ಯುರೂಪವಾಗಿ ಪರಿಣಮಿಸುವದೆಂಬದನ್ನು ಪಾಪ! ಅವನೇನು ಬಲ್ಲನು? ಆದ್ದರಿಂದಲೆ ಮನುಷ್ಯನು ತಾನೊಂದು ಮಾಡಿದರೆ, ದೈವವು ಮತ್ತೊಂದನ್ನು ಮಾಡುವದೆಂದು ಅನ್ನುವರು. ಗಿರಿಸಿಂಹನು ಇಷ್ಟು ಸಂಗತಿಯನ್ನು ಹೇಳಿದ್ದಷ್ಟೇ ತಡ; ವಿಮಲೆಗೆ ಮೋಹ-ಸಂತಾಪಗಳು ಒಮ್ಮೆಲೆ ಉತ್ಪನ್ನವಾದವು. ಸಮ್ರಾಟನ ವಿಷಯವಾಗಿ ಮೋಹವೂ, ಗಿರಿಸಿಂಹನ ವಿಷಯವಾಗಿ ಸಂತಾಪವೂ ಅಧಿಕವಾಗಿ ಬೆಳೆದು, ಆಕೆಯಲ್ಲಿ ಒಂದು ಬಗೆಯ ಭ್ರಮೆಯನ್ನುಂಟು ಮಾಡಿದವು. ಆ ಭ್ರಮೆಯಿಂದ ಅವಳಿಗೆ ಗಿರಿಸಿಂಹನನ್ನು ರಸಾತಳಕ್ಕೆ ಮುಟ್ಟಿದ ಹೊರತು ತನ್ನ ಪ್ರೇಮನಿಧಿಯು ತನಗೆ ದಕ್ಕಲಾರದೆಂಬ ಭಾವನೆಯಾಯಿತು. ಆದ್ದರಿಂದ ಅವಳು ಇದು ವರೆಗೆ ಯಾವ ಮೂರ್ತಿಯನ್ನು ಧ್ಯಾನಿಸುತ್ತ ಬಂದಳೋ ಮತ್ತು ಯಾವ ಮೂರ್ತಿಯ ಸಾನ್ನಿಧ್ಯವು ಹೇಗಾದರೆ ದೊರಕುವದೆಂದು ಸರ್ವದಾ

ಯೋಚಿಸುತ್ತಿದ್ದಳೋ ಹಾಗು ಯಾವ ಮೂರ್ತಿಯು ಪ್ರೇಮಕ್ಕೆ ಆತುರಪಡು ತ್ತಿದ್ದಳೋ ಆ ಮೂರ್ತಿಯು ರಕ್ಷಣೆಯು ವಿಷಯವಾಗಿ ಟೊಂಕ ಕಟ್ಟಿದಳು. ಅದ ಕ್ಕಾಗಿ ಅವಳು ಕ್ಷೋಭಿಸಿದ ವಡವಾಗ್ನಿಯಂತೆ ಗಿರಿಸಿಂಹನ ಆಯುಸ್ಸೆಂಬ ಸಮು ದ್ರವನ್ನು ಆಟ್ಟಿಸುವದಕ್ಕೆ ಹಲವು ಬಗೆಯ ಹಂಚಿಕೆಗಳನ್ನು ಹಾಕಹತ್ತಿದಳು!

---

## ೪ ಕನ್ನಡಿಯೊಳಗಿನ ಪಡಿನೆಳಲು.

ಸ್ವಮ್ರಾಟ್ ಭೂವಡನು ಕರ್ನಾಟಕ ಪ್ರಾಂತದಲ್ಲಿ ಬಹು ದೊಡ್ಡ ಸಾಮ್ರಾಜ್ಯಾ ಧಿಪತಿಯಾಗಿದ್ದನು. ದಕ್ಷಿಣ ಹಿಂದುಸ್ತಾನದ ಬಹು ದೊಡ್ಡ ಭಾಗವು ಅವನ ಆಳಿಕೆಗೆ ಒಳಪಟ್ಟಿತ್ತು. ಆತನು ಸ್ವಭಾವಸಿದ್ಧ ಶೂರನಿದ್ದನು. ಪರಾಜಯವೆಂಬದು ಎಂಥದೆಂಬದನ್ನು ಅವನು ಇದು ವರೆಗೂ ಕಂಡಿರಲಿಲ್ಲ. ಅವನು ಅತ್ಯಂತ ನ್ಯಾಯ ಪ್ರಿಯನಿದ್ದನು. ಅಪಸ್ವಾರ್ಥಿಗಳನ್ನೂ ದುರ್ಮದಾಂಧರನ್ನೂ ಕಂಡರೆ ಅವನಿಗೆ ಆಗುತ್ತಿದ್ದಿಲ್ಲ. ಅವನು ಅತ್ಯಂತ ಮಹತ್ವಾಕಾಂಕ್ಷಿಯಾಗಿದ್ದನು. ದಕ್ಷಿಣ ಹಿಂದುಸ್ತಾನವೊಂದಲ್ಲದೆ ಉತ್ತರ ಹಿಂದುಸ್ತಾನವನ್ನೂ ಪಾದಾಕ್ರಾಂತವಾಗ ಮಾಡಿ, ಏಕಛತ್ರಾಧಿತ್ಯವನ್ನು ಭರತಖಂಡದಲ್ಲೆಲ್ಲ ಮೆರೆಯಿಸಬೇಕೆಂಬ ಉತ್ಕಟೇ ಚ್ಛೆಯನ್ನು ತಾಳಿದ್ದನು. ನಿಜವಾಗಿಯೂ ಇಂಥ ಉತ್ಕಟೇಚ್ಛೆಗೆ ಆತನು ಪಾತ್ರ ನಾಗಿದ್ದನು. ಇಂದಿನವರೆಗೆ ಆತನು ಏನಿಲ್ಲೆಂದರೂ ೨೭ ಕೋಟೆಗಳನ್ನು ಕೈವಶ ಮಾಡಿಕೊಂಡು ಚಾಲುಕ್ಯ ಸಾಮ್ರಾಜ್ಯವನ್ನು ವಿಸ್ತರಿಸಿದ್ದನು. ಜಯಲಕ್ಷ್ಮಿ ಯು ಆತನಿಗೆ ನಿರಂತರವಾಗಿ ಮಾಲೆ ಹಾಕಿರುವಳೋ ಎಂಬಂತೆ, ಅವನು ಎಲ್ಲಿ ಕೈ ಹಾಕಿದರೂ ಅಲ್ಲಿ ಅವನಿಗೆ ಜಯ ಬರುವದನ್ನು ನೋಡಿ, ಎಲ್ಲ ರಾಜರಲ್ಲಿಯೂ ಆಶ್ಚರ್ಯ ಹಾಗು ಭಯಗಳುಂಟಾಗುತ್ತಿದ್ದವು. ಇರಲಿ.

ಇಂಥ ಪೌರುಷಶಾಲಿಯಾದ ಭೂವಡನು ತನ್ನ ರಾಜಧಾನಿಯಿಂದ ಉತ್ತ ರಕ್ಕೆ ದಂಡಯಾತ್ರೆಯನ್ನು ಹೊರಡಿಸಿ, ಹಾದಿಯಲ್ಲಿ ಹತ್ತಿದ ರಾಷ್ಟ್ರಗಳನ್ನು ಗೆಲ್ಲುತ್ತ, ಅಲ್ಲಿಯ ಅರಸರುಗಳಿಂದ ಕಪ್ಪ-ಕಾಣಿಕೆಗಳನ್ನು ಸಂಗ್ರಹಿಸುತ್ತ, ಸೌರಾಷ್ಟ್ರ ಅಂದರೆ ಗುರ್ಜರ ಭೂಮಿಗೆ ಬಂದನು. ಆ ಕಾಲಕ್ಕೆ ಗುಜರಾಥವು ಅನೇಕ ಸಣ್ಣ-ದೊಡ್ಡ ಸಂಸ್ಥಾನಾಧಿಪತಿಗಳ ಆತ್ಮಕಲಹಕ್ಕೆ ಇಂಬುಗೊಟ್ಟು ಸ್ವ-ಸಾಮರ್ಥ್ಯವನ್ನು ಕಳಕೊಂಡಿತ್ತು. ಗುಪ್ತಹೇರರ ಮುಖಾಂತರವಾಗಿ ಆ ದೇಶದ ಪರಿಸ್ಥಿತಿಯನ್ನು ತಿಳಿದುಕೊಂಡ ಭೂವಡ ಸಮ್ರಾಟನು ಒಮ್ಮಿಂದೊಮ್ಮೆ ಪಾವಗಡಕ್ಕೆ ಮುತ್ತಿಗೆಯನ್ನಿಟ್ಟನು. ಪಾವಗಡವೊಂದು ಕೈವಶವಾದರೆ, ಇಡಿ ಗುರ್ಜರ ರಾಷ್ಟ್ರವೇ ಕೈ ಸೇರಿದಂತಾಗುತ್ತಿತ್ತು; ಆದರೆ ಪಾವಗಡದ ಮುದಿ

ಅರಸನು ಕಡಿಮೆಯವನಿದ್ದಿಲ್ಲ. ಅವನ ದುರ್ಗವು ಅತ್ಯಂತ ದುರ್ಭೇದ್ಯವಾದದ್ದಲ್ಲದೆ, ಅವನೂ ಕಾರ್ಯದಕ್ಷನಿದ್ದನು. ಆದ್ದರಿಂದ ಹಿಂದಿನ ಪ್ರಕರಣದಲ್ಲಿ ಹೇಳಿದಂತೆ ಹದಿನೈದು ದಿವಸಗಳ ವರೆಗೆ ಕುಳಿತರೂ ದುರ್ಗವನ್ನು ಹೇಗೆ ಕೈವಶವಮಾಡಿಕೊಳ್ಳಬೇಕೆಂಬದು ತಿಳಿಯದೆ ಹೋಯಿತು. ಗಿರಿಸಿಂಹನ ಕಾಟವಂತೂ ಹೆಚ್ಚಾಯಿತು. ಗುಪ್ತಚಾರರು ಎಷ್ಟು ಬಗೆಯಿಂದ ಪ್ರಯತ್ನಿಸಿದರೂ ದುರ್ಗದೊಳಗೆ ಪ್ರವೇಶ ಮಾಡುವದು ಕಷ್ಟವಾಯಿತು. ಅವರ ವೇಷಗಳು ಮಾತಿಗೆ ಬಾರದಾದವು; ಜಾಣತನವು ಕೆಲಸಕ್ಕೆ ಬಾರದಾಯಿತು. ಹೀಗೆ ಒಂದಕ್ಕೂ ಆಸ್ಪದ ದೊರೆಯದ್ದರಿಂದ, ಈ ಕೋಟೆಯು ಹೇಗೆ ಕೈಸೇರೀತೆಂಬ ಚಿಂತೆಯು ಸಮ್ರಾಟನನ್ನು ಆವರಿಸಿತು. ಸಮರಾಂಗಣದಲ್ಲಿ ಕೈಗೆ ಕೈಹತ್ತಿದಾಗ ಪ್ರತ್ಯಕ್ಷ ಕಾಲನು ಎದುರಾದರೂ ನೋಡಿಕೊಳ್ಳುವಷ್ಟು ಶಕ್ತಿಯು ಆತನಲ್ಲಿತ್ತು; ಆದರೆ ಆ ಶಕ್ತಿಯು ಹಾಗು ಸೈನ್ಯದ ಆಟವು ದುರ್ಗದ ಮೇಲೆ ನಡೆಯುವ ಬಗೆ ಹೇಗೆ? ಸಮ್ರಾಟನ ಎಲ್ಲ ಉಪಾಯಗಳೂ ನಿಂತವು. ಸೈನಿಕರಲ್ಲನೇಕರು ಶತ್ರುಗಳ ಅಳವಿನಲ್ಲಿ ಸಿಕ್ಕು ಮೃತ್ಯುಪಥವನ್ನು ಹಿಡಿಯತೊಡಗಿದ್ದರು. ಇದಲ್ಲದೆ ಬಹು ದಿವಸಗಳ ವರೆಗೆ ದಂಡಯಾತ್ರೆಯಲ್ಲಿ ಪಯಣದ ಮೇಲೆ ಇದ್ದದರಿಂದ, ದಂಡಾಳುಗಳ ಪ್ರಕೃತಿಯು ಕೆಟ್ಟು ಹೋಗಿತ್ತು. ಅದರಿಂದ ಛಾವಣಿಯಲ್ಲಿ ಒಂದು ಬಗೆಯ ರೋಗವೇ ವ್ಯಾಪಿಸಿಕೊಂಡಂತಾಗಿತ್ತು. ಇದಲ್ಲದೆ ಇಷ್ಟು ದಿವಸಗಳ ವರೆಗೆ ಪಾದಾಕ್ರಾಂತರಾದ ರಾಜರು ಸೈನ್ಯಕ್ಕೆ ಅನ್ನ-ನೀರು ಒದಗಿಸುತ್ತ ಬಂದದ್ದರಿಂದ, ಸಮ್ರಾಟನು ಆ ವಿಷಯದಲ್ಲಿ ನಿಶ್ಚಿಂತನಾಗಿದ್ದನು; ಆದರೆ ಪಾವಗಡವು ಕೈವಶವಾಗುವ ಲಕ್ಷಣವು ತೋರದ್ದರಿಂದ, ಅವನು ಹೀಗೆ ಅಗಾಧವಾದ ಚಿಂತೆಯಲ್ಲಿ ಮುಳುಗಿದ್ದರಲ್ಲಿ ಆಶ್ಚರ್ಯವಿಲ್ಲ ಈ ಚಿಂತೆಯಿಂದ ಜಿಜ್ಞೆಯಾಗಿ ಅವನು ಒಬ್ಬನೇ ಏಕಾಂತವಾದದ್ದೊಂದು ರಾಹುಟಿಯಲ್ಲಿ ಕುಳಿತು ಈ ಪ್ರಕಾರ ಯೋಚಿಸತೊಡಗಿದನು: ‘ ಚಾಲುಕ್ಯಸಮ್ರಾಟನಾದ ನನ್ನ ಕೀರ್ತಿಗೆ ಇಂದು ಕಲಂಕ ಹತ್ತುವ ಪ್ರಸಂಗವು ಬಂದಿತು. ಈ ದುರ್ಗವು ಇಷ್ಟು ದುರ್ಭೇದ್ಯವೆಂಬದು ನಮ್ಮ ಗುಪ್ತಚಾರರಿಗೆ ತಿಳಿಯದೆ ಮೋಸ ಹೋಯಿತು. ಇನ್ನು ಮುಂದೆ ಹೇಗೆ ಮಾಡಬೇಕು? ಕೋಟೆಗೆ ಒಮ್ಮೆ ಮುತ್ತಿಗೆ ಹಾಕಿದ ಬಳಿಕ, ಅದನ್ನು ಕೈವಶ ಮಾಡಿಕೊಳ್ಳದೆ ಬಿಟ್ಟು ಹೋಗುವದು ಅತ್ಯಂತ ಲಾಂಛನಾಸ್ಪದವಾದದ್ದು; ಇನ್ನು ಬೇಕಾದಷ್ಟು ದಿವಸ ಹಿಡಿದರೂ ಕೈವಶ ಮಾಡಿಕೊಂಡೇ ತೀರಬೇಕೆಂದರೆ ಸೈನಿಕರಿಗೆ ಆಹಾರದ ಪೂರೈಕೆಯಿಲ್ಲ. ಒಂದುವೇಳೆ ಆಹಾರದ ವಿಷಯವಾಗಿ ಏನಾದರೂ ಪ್ರಯತ್ನ ಮಾಡಬಹುದು; ಆದರೆ ಗಗನಚುಂಬಿತವಾದ ಈ ಕೋಟೆಯನ್ನು ಏರಲಿಕ್ಕೆ ಎಲ್ಲಿಯೂ ಮಾರ್ಗವಿಲ್ಲವಲ್ಲ! ಸುತ್ತಲೂ ಆಳವಾದ ಕಂದಕವು ಇರುವದರಿಂದ,

ಆಗಸೇ ಬಾಗಿಲವನ್ನು ಮುಟ್ಟುವದು ಕೂಡಾ ಸಾಧ್ಯವಿಲ್ಲ!''

ಈ ಮೇರೆಗೆ ಭೂಮಡನು ಯೋಚಿಸುತ್ತಿರಲು, ಒಬ್ಬ ಚರನು ಬಂದು ಮೋಹರು ಮಾಡಿದ ಒಂದು ಚೀಲವನ್ನು ಆತನ ಮುಂದೆ ಇಟ್ಟನು. ಆಗ ಸಮ್ರಾಟನು ಅದನ್ನು ನೋಡಿ ಇದನ್ನಾರು ಕೊಟ್ಟರೆಂದು ಕೇಳುವಷ್ಟರಲ್ಲಿ ಚರನು ಅಲ್ಲಿಂದ ಕಾಲ್ದೆಗೆದಿದ್ದನು. ಬಳಿಕ ಆತನು ಚೀಲವನ್ನು ಕೈಯಲ್ಲಿ ತಕ್ಕೊಂಡು ಇದು ಯಾರದಾಗಿರಬಹುದೆಂದು ಯೋಚಿಸತೊಡಗಿದನು ಚೀಲದ ಮೇಲಿನ ಮುದ್ರೆಯು ರಾಜಮುದ್ರೆಯನ್ನು ಹೋಲುತ್ತಿರುವದರಿಂದ ಇದು ಯಾವ ರಾಜರ ಕಡೆಯಿಂದ ಬಂದಿರಬಹುದೆಂಬದು ಅವನಿಗೆ ತಿಳಿಯದಾಯಿತು. ಮುದ್ರೆಯಲ್ಲಿಯ ಅಕ್ಷರಗಳಾದರೂ ಸ್ಪಷ್ಟವಾಗಿ ಮೂಡಿರಲಿಲ್ಲ. ಕೊನೆಗೆ ಆತನು ಚೀಲವನ್ನು ಒಡೆದು ಯಾರದೆಂಬದನ್ನು ನಿರ್ಧರಿಸಬೇಕೆಂದು ನಿಶ್ಚಯಿಸಿ, ಚೀಲವನ್ನು ಒಡೆದನು. ಆಗ ಅದರಲ್ಲಿ ಒಂದು ಲಕ್ಕೋಟೆಯು ಇತ್ತು. ಲಕ್ಕೋಟೆಯನ್ನು ಹರಿದು ನೋಡಲು, ಒಳಗೆ ಒಂದು ಪತ್ರವಿದ್ದು, ಅದರಲ್ಲಿ ಹೀಗೆ ಬರೆದಿತ್ತು:—

''ಚಾಲುಕ್ಯಸಮ್ರಾಟರ ಸನ್ನಿಧಿಯಲ್ಲಿ— ವಿಜ್ಞಾಪನೆ, ನಿಮ್ಮೊಡನೆ ಒಡಂಬಡಿಕೆ ಮಾಡಿಕೊಳ್ಳುವ ವಿಚಾರವಿದೆ. ನಿಮ್ಮ ಸಮ್ಮತಿಯಿದ್ದರೆ, ಅದರ ದರ್ಶಕವೆಂದು ನಿಮ್ಮ ಧ್ವಜಸ್ತಂಭವನ್ನು ಸ್ವಲ್ಪ ಸ್ಥಳಾಂತರಗೊಳಿಸಿ, ತನ್ಮೂಲಕ ನಮಗೆ ತಿಳಿಸಬೇಕು.''

'ಪಾವಗಡದ ಸಂಸ್ಥಾನಾಧೀಶ,

**ಗಿರಿಸಿಂಹ.'**

ಈ ಪ್ರಕಾರವಿರುವ ಪತ್ರವನ್ನೋದಿ ಸಮ್ರಾಟಭೂಮಡನು ಚಕಿತನಾದನು. ಇದರಲ್ಲಿ ಏನಾದರೂ ಮೋಸವಿರಬಹುದೆಂಬ ಕಲ್ಪನೆಯು ತಟ್ಟನೆ ಅವನ ಮನಸ್ಸಿನಲ್ಲಿ ಬಂದಿತು. ನಿಜವಾಗಿ ಗಿರಿಸಿಂಹನು ಈ ಪತ್ರವನ್ನು ಕಳುಹಿದ್ದರೆ ರಾಯಭಾರಿಯೊಡನೆ ಕಳುಹಬಹುದಾಗಿತ್ತು; ಆದರೆ ರಾಯಭಾರಿಯು ಎಲ್ಲಿ? ಒಂದು ವೇಳೆ ಈ ಪತ್ರವು ಗಿರಿಸಿಂಹನದೇ ಆಗಿದ್ದರೆ, ರಾಜಮುದ್ರೆಯು ಹೇಗೆ ಬೀಳುತ್ತಿತ್ತು? ಇರಬಹುದು, ಇದು ಗಿರಿಸಿಂಹನದೇ ಪತ್ರವಿರಬಹುದು. ರಾಯಭಾರಿಯು ಹೊರಗೆ ನಿಂತಿದ್ದರೂ ನಿಂತಿರಬಹುದು, ಎಂದು ಯೋಚಿಸಿ, ಕಾವಲುಗಾರನು ಬರುವ ಹಾಗೆ ಸಂಜ್ಞೆ ಮಾಡಿದನು. ತತ್ಕ್ಷಣದಲ್ಲಿ ಕಾವಲುಗಾರನು ಎದುರಿಗೆ ಬಂದು, ನೆಲಮುಟ್ಟಿ ನಮಸ್ಕರಿಸಿ ನಿಂತುಕೊಳ್ಳಲು, ''ಈ ಚೀಲವನ್ನು ತಂದ ಚರನೆಲ್ಲಿ?'' ಎಂದು ಪ್ರಶ್ನೆ ಮಾಡಿದನು. ಕಾವಲುಗಾರನು ತಡವರಿಸಲಾರಂಭಿಸಿದನು. ಅವನ ಮುಖದಿಂದ ಬೇಗನೆ ಅಕ್ಷರಗಳೇ ಹೊರಡದಾದವು. ಆತನ ಈ ಸ್ಥಿತಿಯನ್ನು ಕಂಡು ಸಮ್ರಾಟನು ಇದರ ವಿಚಾರವು ಈಗ ಬೇಡ

ವೆಂದು ಆ ಕಾವಲುಗಾರನನ್ನು ಅವನ ಕೆಲಸಕ್ಕೆ ಕಳುಹಿಸಿದನು. ಬಳಿಕ ಆತನು ತನ್ನ ಮನಸ್ಸಿನಲ್ಲಿ ನಿರ್ಧರಿಸಿದ್ದೇನಂದರೆ: "ಗಿರಿಸಿಂಹನ ಈ ಪತ್ರದ ಮೇರೆಗೆ ನಮ್ಮ ಧ್ವಜಸ್ತಂಭವನ್ನು ಈಗಿದ್ದ ಸ್ಥಳದಿಂದ ಕೆಲವು ಅಂತರದ ಮೇಲೆ ನಿಲ್ಲಿ ನೋಣ; ಅಂದರೆ ಮುಂದಿನ ಸೋಗು ತಾನೇ ತಿಳಿಯುವದು."

ಈ ಮೇರೆಗೆ ಯೋಚಿಸಿ, ಸಮ್ರಾಟ್ ಭೂಪಡನು ಆ ಕೂಡಲೆ ಸೇನಾಪತಿ ಯನ್ನು ಕರೆಯಿಸಿ ಧ್ವಜಸ್ತಂಭದ ಸ್ಥಳಾಂತರ ಮಾಡಲು ಅಪ್ಪಣೆ ಮಾಡಿದನು. ಹೀಗೇಕೆ ಮಾಡಬೇಕೆಂಬದರ ಕಾರಣವು ತಿಳಿಯದೆ ಆತನು ಸ್ವಲ್ಪ ಗೊಂದಲದಲ್ಲಿ ಬಿದ್ದನು; ಆದರೆ ಸಮ್ರಾಟನ ಅಪ್ಪಣೆಯು ಮುಂದೆ ಯಾರ ಆಟವೂ ಸಾಗುವಂತೆ ಇದ್ದಿಲ್ಲಾದ್ದರಿಂದ ಸೇನಾಪತಿಯು ಹೆಚ್ಚಿನ ವಿಚಾರಕ್ಕೆ ಬೀಳದೆ ತಟ್ಟನೆ ಹೋಗಿ, ಧ್ವಜಸ್ತಂಭವನ್ನು ಸಮ್ರಾಟನು ಹೇಳಿದ ಸ್ಥಳದಲ್ಲಿ ನೆಲೆಗೊಳಿಸಿದನು. ಮರುದಿನ ಬೆಳಗು ಹರಿಯಿತು. ರಾತ್ರಿಯಲ್ಲೆಲ್ಲ ಇದೇ ಯೋಚನೆಯನ್ನು ಮಾಡುತಲಿದ್ದ ಸಮ್ರಾಟನಿಗೆ ಬೆಳಗಿನ ತಂಗಾಳಿಗೆ ನಿದ್ರೆ ಹತ್ತಿತು. ಆಗ ಅವನಿಗೊಂದು ಸ್ವಪ್ನವು ಬಿದ್ದಿತು: "ತಾನು ಪಾವಗಡದ ಕಿಲ್ಲೆಯನ್ನು ಕೈವಶ ಮಾಡಿಕೊಂಡಂತೆಯೂ, ಚಾಲುಕ್ಯ ಸಮ್ರಾಟನ ವಿಜಯ ಪ್ರತಾಕೆಯು ಏಕಲಿಂಗಜೀ ಬುರುಜಿನ ಮೇಲೆ ಪ್ರಸ್ಥಾಪಿತವಾದಂತೆಯೂ, ಗಿರಿಸಿಂಹನು ಶರಣು ಬಂದಂತೆಯೂ ಭಾಸವಾಯಿತು. ಅಷ್ಟರಲ್ಲಿ ಸಮ್ರಾಟನಿಗೆ ಎಚ್ಚರಿಕೆಯುಂಟಾಗಲು, ಅವನು ಕಣ್ದೆರೆದು ನೋಡಿ ದನು. ರಾಹುಟಿಯು ತುಂಬೆಲ್ಲ ಸ್ವಚ್ಛಪ್ರಕಾಶವು ಬಿದ್ದಿತ್ತು, ಬಳಿಕ ಅವನು ಎದ್ದು ಕುಳಿತು, ಸ್ವಪ್ನದ ಸಂಗತಿಯನ್ನು ಸ್ಮರಣೆಗೆ ತಂದನು. ಆಗ ಅವನಿಗೆ ಅತ್ಯಂತಾನಂದವಾಯಿತು. ತಾನು ಎಲ್ಲಿದ್ದೇನೆಂಬದನ್ನು ಕೂಡಾ ಅವನು ಮರೆತು ಬಿಟ್ಟನು! ಮನುಷ್ಯನು ಕಾರ್ಯವು ಹೇಗೆ ಕೈಗೂಡೀತೆಂದು ಘೋರಚಿಂತೆಯಲ್ಲಿ ಬಿದ್ದಿರುವಾಗ ಕಾರ್ಯ ಕೈಗೂಡುವ ಸೂಚನೆಗಳು ತೋರಹತ್ತಿದವೆಂದರೆ, ಅವನು ಆನಂದಪರವಶನಾಗುವದು ಸಹಜವು. ಅದರಂತೆ ಸಮ್ರಾಟ್ ಭೂಪಡ ನಿಗೂ ಆಯಿತು. ಕೆಲ ಹೊತ್ತು ಈ ಕೌತುಕದಲ್ಲಿ ಕಳೆದ ಬಳಿಕ ಭೂಪಡನು ಅದೇ ಆನಂದದಲ್ಲಿ ಮುಖಮಾರ್ಜನಾದಿ ಪ್ರಾತರ್ವಿಧಿಗಳನ್ನು ನೆರವೇರಿಸಿ, ನಿನ್ನೆ ಧ್ವಜಸ್ತಂಭವನ್ನು ಸ್ಥಲಾಂತರ ಮಾಡಿದ್ದರ ಪರಿಣಾಮವೇನಾಗುವದೋ ಎಂದು ಎದುರು ನೋಡತೊಡಗಿದನು.

ಹೀಗೆ ಸಮ್ರಾಟನು ಗಿರಿಸಿಂಹನಿಂದ ಏನಾದರೂ ಉತ್ತರ ಬರಬಹುದೇ ನೆಂದು ಅನ್ಯ ಕೆಲಸವಿಲ್ಲದೆ ಕುಳಿತಿರಲು, ಪಾವಗಡದಿಂದ ಒಬ್ಬ ರಾಯಭಾರಿಯು ಬಂದಿರುವನೆಂದು ಕಾವಲುಗಾರನು ವರದಿಯನ್ನು ಮುಟ್ಟಿಸಿದನು. ಆ ಅಮೃತ ದಂಥ ಸುದ್ದಿಯನ್ನು ಕೇಳಿ ನೆಟ್ಟಗೆ ಕುಳಿತು, ಆತನನ್ನು ಒಳಗೆ ಬಿಡೆಂದು ಕಾವಲು

ಗಾರನಿಗೆ ಅಪ್ಪಣೆ ಮಾಡಿದನು. ಬಳಿಕ ರಾಯಭಾರಿಯು ವೇಷದಿಂದ ಒಪ್ಪುತ್ತಿದ್ದ ಒಬ್ಬ ಯುವಕನು ಒಳಗೆ ಬಂದನು. ಸಮ್ರಾಟನು ಅವನನ್ನು ಆದರಿಸಿ ಉಚಿತಾಸನದ ಮೇಲೆ ಕುಳ್ಳಿರಿಸಿದನು. ಪ್ರಾರಂಭದಲ್ಲಿ ರಾಯಭಾರಿಯ ಮುಖವನ್ನು ನೋಡಿದ ಕೂಡಲೆ ಸಮ್ರಾಟನ ಚಿತ್ತಹರಣವಾಗಿ ಹೋಯಿತು. ರಾಯಭಾರಿಯು ಅತ್ಯಂತ ಸುಂದರನಾಗಿದ್ದನು. ಅವನು ಇಪ್ಪತ್ತೈದು ವರ್ಷದವನಿರಬಹುದು; ಆದರೂ ಅವನ ಮುಖದ ಮೇಲೆ ಕೋಮಲತೆಯು ವ್ಯಕ್ತವಾಗುತ್ತಿತ್ತು. ಬಳಿಕ ರಾಯಭಾರಿಯು ಸಮ್ರಾಟನನ್ನು ಕುರಿತು: ಚಾಲುಕ್ಯಪ್ರಭುಗಳೇ, ನಿನ್ನೆಯ ದಿನ ನಮ್ಮ ಪ್ರಭುಗಳವರು ಕಳಿಸಿದ ಪತ್ರದ ಆಶಯದಂತೆ ತಾವು ಬೆಳಗಾಗುವದರೊಳಗೆ ನಿಮ್ಮ ಧ್ವಜಸ್ತಂಭವನ್ನು ಸ್ಥಳಾಂತರಗೊಳಿಸಿದ್ದನ್ನು ನೋಡಿ ಅವರಿಗೆ ಪರಮಾನಂದವಾಗಿರುತ್ತದೆ. ನಿಮ್ಮಂಥ ಸಾರ್ವಭೌಮರು ಇಷ್ಟೊಂದು ಸೌಜನ್ಯವನ್ನು ತಾಳಿ, ಹೀಗೆ ಕೆಲಸ ಮಾಡೀರೆಂಬದು ನಮ್ಮ ಮಹಾರಾಜರಿಗೆ ವಿಶ್ವಾಸವಿದ್ದಿಲ್ಲ. ಈಗ ಪ್ರತ್ಯಕ್ಷ ಅನುಭವಕ್ಕೆ ಬಂದದ್ದರಿಂದ, ನಿಮ್ಮ ವಿಷಯವಾಗಿ ಅವರ ಕೃತಜ್ಞತೆಯು ಹೆಚ್ಚುತ್ತಲಿದೆ. ನೀವು ನಾಳೆಗೆ ಎರಡು ತಾಸು ರಾತ್ರಿಯ ಸುಮಾರಕ್ಕೆ ನಿಮ್ಮ ನಿಯಮಿತ ಪರಿವಾರದೊಡನೆ ಕೋಟೆಯ ಬಾಗಿಲಕ್ಕೆ ಬಂದರೆ, ಬಾಗಿಲ ತೆರೆದು ನಿಮ್ಮನ್ನು ಒಳಕ್ಕೆ ಕರೆದುಕೊಳ್ಳಲಾಗುವದು. ಆ ಬಳಿಕ ನಮ್ಮ ಗಿರಿಸಿಂಹ ಮಹಾರಾಜರು ನಿಮಗೆ ತಮ್ಮ ರಾಜ್ಯವನ್ನು ಒಪ್ಪಿಸಿ ಬಿಡುವರು, ಎಂದು ನುಡಿದನು.

ಭೂಮಡನು ಆ ರಾಯಭಾರಿಯ ಮಾತುಗಳನ್ನು ಬಹು ಶಾಂತವಾಗಿ ಕೇಳುತ್ತಿದ್ದನು. ಆತನ ಪ್ರತಿಯೊಂದು ಮಾತು ಸಮ್ರಾಟನಿಗೆ ಅತ್ಯಂತ ಪ್ರಿಯವಾಗಿ ತೋರುತ್ತಿತ್ತೋ ಅಥವಾ ಆ ರಾಯಭಾರಿಯ ಸವಿ ಮಾತುಗಳು ಕೋಮಲ ಕಂಠದಿಂದ ಬರುವ ಮಂಜುಳ ವಾಕ್ಯಗಳಂತೆ ಮನಸ್ಸನ್ನಾಕರ್ಷಿಸಿದ್ದವೋ ತಿಳಿಯದು; ಒಟ್ಟಿಗೆ ಸಮ್ರಾಟನು ರಾಯಭಾರಿಯ ವಿಷಯವಾಗಿ ಬಹಳ ಆದರ ತಾಳಿ, ಅವನ ಮಾತುಗಳನ್ನು ಕುರಿತು ಮನಸ್ಸಿನಲ್ಲಿ ಯೋಚಿಸತೊಡಗಿದನು. ಆಗ ಅವನಿಗೆ ಆ ಆಲೋಚನೆಯು ಬಗೆ ಬೀಳದ್ದರಿಂದ, ರಾಯಭಾರಿಗೆ ಕೆಲ ಹೊತ್ತು ವಿಶ್ರಮಿಸಬೇಕೆಂದು ಸೂಚಿಸಿ, ಅವನನ್ನು ಬೇರೊಂದು ರಾಹುಟಿಗೆ ಕರೆದೊಯ್ಯಲು ಅಂಗರಕ್ಷಕನಿಗೆ ಆಜ್ಞಾಪಿಸಿದನು; ಆದರೆ ಸಮ್ರಾಟನ ಈ ಮಾತುಗಳನ್ನು ಕೇಳಿ ರಾಯಭಾರಿಯು ಬೆದರಿದನು; ಆದರೂ ಅವನು ತನ್ನ ಆ ಪುಕ್ಕತನವು ಹೊರಬೀಳದಂತೆ ಎಚ್ಚರಿಕೆಯನ್ನು ತಾಳಿ, ಸಮ್ರಾಟನನ್ನು ಕುರಿತು:—"ನಾನು ಇಲ್ಲಿ ಬಹಳ ಹೊತ್ತು ನಿಲ್ಲುವ ಹಾಗಿಲ್ಲ. ಈಗಲೇ ತಿರುಗಿ ಹೋಗುವದು ಅವಶ್ಯವಿದೆ; ನನ್ನ ಮಾತಿಗೆ ಪ್ರತ್ಯುತ್ತರವನ್ನು ಕೊಡುವದಕ್ಕೆ ನೀವು ಇಷ್ಟೊಂದು ಯೋಚಿಸುವದು

ನನಗೆ ಆಶ್ಚರ್ಯವಾಗಿದೆ. ನಿಮಗೆ ಈಗಲೇ ಉತ್ತರ ಕೊಡುವದಾಗದಿದ್ದರೆ ನಾಳಿಗೆ ಕೊಡಬಹುದು. ನಮ್ಮ ಮಹಾರಾಜರಿಂದ ಏನು ಅಪ್ಪಣೆಯಾಗುತ್ತದೆಂಬದನ್ನು ತಿಳಿದು, ಪುನಃ ನಾನು ನಾಳಿಗೆ ಇದೇ ಹೊತ್ತಿಗೆ ಇಲ್ಲಿಗೆ ಬರುವೆನು" ಎಂದು ನುಡಿದು, ಹೊರಡುವದಕ್ಕೆ ಉತ್ಸುಕನಾಗಿ ಎದ್ದು ನಿಂತುಕೊಳ್ಳಲು, ಸಮ್ರಾಟನು ಆಗ್ರಹದಿಂದ: ಒಂದು ಕ್ಷಣ ಕಾಲ ವಿಶ್ರಾಂತಿಗೊಳ್ಳಿರಿ. ಅಷ್ಟರಲ್ಲಿ ನಾನು ನಮ್ಮ ಮಂತ್ರಿವರ್ಗವನ್ನು ವಿಚಾರಿಸಿ, ನಿಮ್ಮ ಒಡೆಯನು ಹೇಳಿ ಕಳಿಸಿದ ಸಂಗತಿಗಳಿಗೆ ಉತ್ತರ ಕೊಡುತ್ತೇನೆ, ಎಂದು ನುಡಿಯುತ್ತ, ಆತನ ಕೈ ಹಿಡಿದು ಕೂಡ್ರಿಸ ಹೋದನು. ಸಮ್ರಾಟನ ಈ ಬಗೆಯ ಆಗ್ರಹವ ನೋಡಿ ರಾಯಭಾರಿಯು ಮತ್ತಿಷ್ಟು ಗೊಂದಲದಲ್ಲಿ ಬಿದ್ದು, ಆತನು ತನ್ನ ಕೈ ಹಿಡಿಯಬಾರದೆಂದು ದೂರ ಸರಿಯಲಾರಂಭಿಸಿದನು. ರಾಯಭಾರಿಯು ಹೀಗೆ ತನ್ನ ಮೈ-ಕೈ ಮುಟ್ಟಗೊಡ ದ್ದರಿಂದ, ಸಮ್ರಾಟನಿಗೆ ಉಂಟಾಗಿದ್ದ ಸಂಶಯವು ಮತ್ತಿಷ್ಟು ದೃಢವಾಯಿತು. ಆಗ ಆತನು ಯಾವ ಸಂಶಯದ ಸಲುವಾಗಿ ಕಾಲ ವಿಲಂಬ ಮಾಡಬೇಕೆನ್ನುತ್ತಿ ದ್ದನೋ, ಆ ಸಂಶಯವೇ ನಿಸ್ಸಂಶಯವಾದ ಬಳಿಕ, ಹೆಚ್ಚಿಗೆ ಕಾಲಕಳೆದು ರಾಯ ಭಾರಿಗೆ ಅಸಮಾಧಾನವನ್ನುಂಟು ಮಾಡುವದು ಯೋಗ್ಯವಲ್ಲೆಂದು ನುಡಿದನೇನಂ ದರೆ:—"ರಾಯಭಾರಿಗಳೇ, ನಾನು ವಿಶ್ರಾಂತಿ ತಕ್ಕೊಳ್ಳಿರೆಂದು ಆಗ್ರಹ ಮಾಡಿ ದ್ದಕ್ಕೆ ನಿಮಗೆ ಸಂಕೋಚವಾದಂತೆ ತೋರುತ್ತದೆ. ಆಗಲಿ. ನಿಮಗಾದರೂ ಅಷ್ಟು ಸಂಕೋಚಭಾವವನ್ನು ಏಕೆ ಉಂಟುಮಾಡಬೇಕು? ನಿಮ್ಮ ಒಡೆಯರು ಹೇಳಿ ಕಳಿಸಿದುದು ನಮಗೆ ಸಮ್ಮತವಿದೆ; ನೀವು ಸೂಚಿಸಿದಂತೆ ನಮ್ಮ ನಿಯಮಿತ ಪರಿವಾರದೊಡನೆ ದುರ್ಗದ ಹೆಬ್ಬಾಗಿಲ ಬಳಿಗೆ ಬರುವೆವು."

ಬಳಿಕ ರಾಯಭಾರಿಯು ಸಮ್ರಾಟನ ನಿರೂಪತಕ್ಕೊಂಡು, ಒಂದು ದೊಡ್ಡ ಗಂಡಾಂತರದೊಳಗಿಂದ ಪಾರಾದಂತೆ ಆನಂದಪಡುತ್ತ ಬಂದದಾರಿಯಿಂದ ತಿರುಗಿ ನಡೆದನು. ಇತ್ತ ರಾಯಭಾರಿಯು ಹೋದ ಬಳಿಕ ಸಮ್ರಾಟನು ಒಬ್ಬನೇ ಕುಳಿತು ಕೊಂಡು ಹೀಗೆ ಯೋಚಿಸತೊಡಗಿದನು: "ಇದರಲ್ಲೇನು ಗೂಢವಿರಬಹುದು? ರಾಯಭಾರಿಯ ಮುಖಚರ್ಯೆ, ಸ್ವರ, ಮೈಕಟ್ಟು ಮೊದಲಾದವುಗಳನ್ನು ನೋಡಿ ದರೆ ನಮಗೆ ಏನೋ ಒಂದು ತರವಾಗಿ ಕಾಣುತ್ತದೆ. ನನ್ನನ್ನು ಮುಟ್ಟಗೊಡ ದ್ದರಿಂದ ಆತನು ವೇಷಧಾರಿ ಪುರುಷನಿರಬಹುದೆಂದು ತೋರುತ್ತದೆ. ಇದಕ್ಕೂ ಮೊದಲು ಬಂದ ರಾಯಭಾರಿಯು ನನಗೆ ಭೆಟ್ಟಿಯಾಗದೆ, ಕಾವಲುಗಾರರ ಕೈ- ಯಲ್ಲೇ ಮೋಹರು ಮಾಡಿದ ಚೀಲವನ್ನು ಕೊಟ್ಟು ಹೋದನು. ಈ ದಿನ ಬಂದ ರಾಯಭಾರಿಯು ಸ್ತ್ರೀಯಳಿದ್ದಂತೆ ಭಾಸವಾಗುವದು. ಇದರಲ್ಲಿ ಏನು ಮೋಸ ವಿದೆಯೋ ತಿಳಿಯದು! ಸ್ತ್ರೀಗೆ ಪುರುಷವೇಷವನ್ನು ಅಳವಡಿಸಿ, ರಾಯಭಾರಿ

ಯೆಂದು ಕಳಿಸುವದರಲ್ಲಿ ಗಿರಿಸಿಂಹನ ಉದ್ದೇಶವೇನಿರಬಹುದು? ಆತನು ಈ ಮೂಲಕ ನನ್ನ ನೈತಿಕ ಶಕ್ತಿಯನ್ನು ಪರೀಕ್ಷಿಸುವನೆ? ಹಾಗಿದ್ದರೆ ಚಾಲುಕ್ಯ ಸಮ್ರಾಟನು ಎಷ್ಟು ನೀತಿವಂತನಾಗಿರುವನೆಂಬದನ್ನು ನೋಡಲಿ; ಪರನಾರೀ ಸೋದರತ್ವವೂ ಏಕಪತ್ನೀವ್ರತವೂ ನಮ್ಮ ವಂಶದ ಬಿರದುಗಳೆಂಬದನ್ನು ಅವನು ಚನ್ನಾಗಿ ಅನುಭವ ತಕ್ಕೊಳ್ಳಲಿ. ಇದಂತಿರಲಿ. ಈಗ ನಾನು ಯಾವ ಯೋಚನೆ ಯನ್ನೂ ಮಾಡದೆ ನಿಯಮಿತ ಪರಿವಾರದೊಡನೆ ಕೋಟೆಯ ಬಾಗಿಲಿಗೆ ಬರುವೆ ನೆಂದು ಹೇಳಿದೆನಲ್ಲ! ಈ ಮಾತಿನ ಗತಿಯೇನು? ಹಾಗೆ ಮಾಡಿದರೆ ಗಿರಿಸಿಂಹನು ನನಗೆ ಮೋಸ ಮಾಡಲಿಕ್ಕಿಲ್ಲವಷ್ಟೆ; ಯಾರಿಗೆ ಗೊತ್ತು! ನಿಯಮಿತ ಜನರೊಡನೆ ನನ್ನನ್ನು ಒಳಗೆ ಬರಮಾಡಿಕೊಂಡು ಮೋಸದಿಂದ ನಮ್ಮನ್ನು ಸೆರೆಯಲ್ಲಿಟ್ಟರೆ, ಎಷ್ಟು ಲೋಕೋತ್ತರವಾದ ಅಪಹಾಸ್ಯಕ್ಕೆ ನಾನು ಗುರಿಯಾಗಬೇಕಾಗುವದಲ್ಲ? ಛೇ! ಇದೇನು ಕುಕಲ್ಪನೆಯನ್ನು ಮನಸ್ಸಿನಲ್ಲಿ ತಂದೆನು! ಯಾರು, ಗಿರಿಸಿಂಹ ನಂಥ ಸಣ್ಣ ಸಂಸ್ಥಾನಿಕನೊಬ್ಬನು ನನಗೆ ಮೋಸ ಮಾಡಿ ಬದುಕುವನೆ! ಈ ಮಹಾದಿ ಸಮ್ರಾಟನ ಮೈಯನ್ನು ಮುಟ್ಟುವವನು ಅದಾವ ಶೂರನಿರುವನು? ದುರ್ಗವು ಅತ್ಯಂತ ಭದ್ರವಾಗಿರುವದರಿಂದ ನನ್ನ ಆಟವು ಸಾಗದಂತಾಗಿದೆ ಒಳಗೆ ಪ್ರವೇಶ ಮಾಡಲಿಕ್ಕೆ ಸ್ವಲ್ಪ ಆಸ್ಪದ ಸಿಕ್ಕರೆ ಸಾಕು. ಪಾವಗಡಾಧೀಶನ ಸಾಮ ರ್ಥ್ಯವು ಎಷ್ಟಿದೆ ಎಂಬದನ್ನು ನೋಡಿಯೇ ಬಿಡುವೆನು.''

ಈ ಮೇರೆಗೆ ಸಮ್ರಾಟ ಭೂಮಡನು ಯೋಚಿಸಿ, ದುರ್ಗದ ಪ್ರವೇಶಕ್ಕೆ ಕಪಟಬುದ್ಧಿಯಿಂದಲೇ ಆಗಲೊಲ್ಲದೇಕೆ; ಗಿರಿಸಿಂಹನು ನಮಗೆ ಒಮ್ಮೆ ಮಾರ್ಗ ಮಾಡಿಕೊಟ್ಟರೆ ಸಾಕು. ನಾನು ಈ ಚಿಂತೆಯಿಂದ ಪಾರಾಗುವೆನೆಂದು ಸಮಾ ಧಾನ ಹಚ್ಚಿಕೊಂಡನು. ಈ ಸಮಾಧಾನದಲ್ಲಿ ಆತನು, ಗಿರಿಸಿಂಹನು ಹೇಗೆ ನಡೆದು ಕೊಳ್ಳುವನೋ ಹಾಗೆ ನಾನೂ ನಡೆದುಕೊಳ್ಳಬೇಕೆಂಬ ಅಂಶವನ್ನು ಮುಖ್ಯ ವಾಗಿಟ್ಟುಕೊಂಡಿದ್ದನು. ಲೋಕದಲ್ಲಿ ನ್ಯಾಯಪ್ರಿಯರಾದವರ ಆಚರಣೆಯು ಹೀಗೆಯೇ ಇರುತ್ತದೆ. ರಾಜನೀತಿಯು ವಾರಾಂಗನೆಯಂತೆ ಪ್ರಸಂಗಾನುಸಾರ ರೂಪಾಂತರಪಡುವದು ಸ್ವಾಭಾವಿಕವಾಗಿದ್ದರೂ ಸಮ್ರಾಟ ಭೂಮಡನು ಮಾತ್ರ ಕನ್ನಡಿಯೊಳಗಿನ ಪಡಿನೆಳಲಿನಂತೆ ಒಂದೇ ವಿಧವಾದ ಕ್ರಿಯೆಯನ್ನು ಕಾಯ್ದುಕೊಳ್ಳುತ್ತಿದ್ದನು. ಅದೇ ನಿಶ್ಚಯದಿಂದಲೇ ಅವನು ಈ ದಿನ ಗಿರಿಸಿಂಹನ ರಾಯಭಾರಿಗೆ ನಿರಾಲೋಚನೆಯಿಂದ ಸಮ್ಮತಿ ಕೊಟ್ಟನು.



## ೪ ದುರ್ಗವು ಕೈಸೇರಿತು, ಮುಂದೇನು?

ಇಂದು ಮಹಾಪ್ರಭುಗಳು ಕಿಲ್ಲೆಯೊಳಕ್ಕೆ ಪ್ರವೇಶಿಸುವರೆಂದು ಚಾಲುಕ್ಯರ ದಂಡಿನಲ್ಲಿ ವಿಜಯೋತ್ಸವವು ನಡೆದಿರುತ್ತದೆ; ಸೈನಿಕರು ಶತ್ರುಗಳ ಅಂಜಿಕೆಯನ್ನು ಬಿಟ್ಟು ಆಟ-ನೋಟ ಮೊದಲಾದ ವಿನೋದಗಳಲ್ಲಿ ಕಾಲಕಳೆಯುತಲಿದ್ದಾರೆ. ದಿನ ಮಣಿಯು ಅಸ್ತಂಗತನಾಗಿ ಬರಬರುತ್ತ ಕತ್ತಲು ಬೀಳಹತ್ತಲು, ಗೊತ್ತುಪಡಿಸಿದ ಹೊತ್ತು ಸಮೀಪಿಸಿದಂತೆ ಭೂವಡನು ಆರಿಸಿದ ಕೆಲಜನ ಸರದಾರರನ್ನು ಸಂಗಡ ತಕ್ಕೊಂಡು ಕೋಟೆಯ ಬಾಗಿಲ ಬಳಿಗೆ ನಡೆದನು; ಆದರೆ ಆ ಧೂರ್ತನು ಯಾವ ಕಾಲಕ್ಕೆ ಹೇಗೆ ಪ್ರಸಂಗ ಬರುವದೋ ಎಂಬದರ ನಿಯಮವಿಲ್ಲೆಂದು ತಿಳಿದು, ಅಂಥ ಪ್ರಸಂಗ ಬಂದಲ್ಲಿ ಮೋಸೆಯೊಣಗಿಸಿಕೊಂಡು ಕೂಡ್ರಬಾರದೆಂದು, ಸಾಕಷ್ಟು ಸೈನ್ಯವನ್ನು ಸಿದ್ಧಪಡಿಸಿಕೊಂಡು ಕೋಟೆಯ ಬಾಗಿಲ ಬಳಿಯಲ್ಲಿ ನಿಲ್ಲ ಲಿಕ್ಕೆ ಸೇನಾಪತಿಗೆ ತಿಳಿಸಿದ್ದನು.

ಈ ಪ್ರಕಾರ ತನ್ನ ರಕ್ಷಣೆಯ ಹಂಚಿಕೆಯನ್ನು ಕೈಕೊಂಡು, ಸಮ್ರಾಟನು ಸಾಂಕೇತಿಕ ವೇಳೆಗೆ ಸರಿಯಾಗಿ ಕೋಟೆಯ ಬಳಿಯಲ್ಲಿ ಹೋದನು. ಈತನು ಕಂದಕವನ್ನು ಮುಟ್ಟು-ಮುಟ್ಟುವಷ್ಟರಲ್ಲ ಝಣ-ಝಣ ಎಂಬ ಸಪ್ಪಳದೊಂದಿಗೆ ಕಂದಕದ ಮೇಲೆ ಪೂಲು ಬಿದ್ದು ಹೆಬ್ಬಾಗಿಲವು ತೆರೆಯಿತು. ಬಳಿಕ ಸಮ್ರಾಟನು ಪರಮ ಉತ್ಸಾಹದಿಂದ ಕೋಟೆಯೊಳಕ್ಕೆ ಪ್ರವೇಶ ಮಾಡಿದನು; ಆದರೆ ಕೋಟೆಯ ಬಾಗಿಲಲ್ಲಿ ಕಾಲಿಟ್ಟ ಕೂಡಲೆ ಅವನ ಉತ್ಸಾಹವೆಲ್ಲ ಒಮ್ಮಿಂದೊ ಮ್ಮೆಲೆ ಕುಗ್ಗಿ ಹೋಯಿತು. ಯಾಕಂದರೆ ಹೆಬ್ಬಾಗಿಲು ಕಾಯುವ ಕಾವಲು ಗಾರರೆಲ್ಲ ಗೊರಕೆ ಹೊಡೆಯುತ್ತಿದ್ದರು. ಸಮ್ರಾಟನನ್ನು ಎದುರುಗೊಳ್ಳುವದ ಕ್ಕಾಗಿ ಗಿರಿಸಿಂಹನಾಗಲಿ, ಆತನ ಸಚಿವನಾಗಲಿ ಉತ್ಸವಡೊಡನೆ ಬಂದಿರಲಿಲ್ಲ; ಇದಲ್ಲದೆ ದುರ್ಗದಲ್ಲಿಯೂ ಎದುರುಗೊಳ್ಳುವ ಚಿಹ್ನಗಳು ಕಂಡು ಬರಲಿಲ್ಲ. ಕೋಟೆಯಲ್ಲೆಲ್ಲ ವ್ಯಾಪಿಸಿರುವ ಅಂಧಃಕಾರವು ಗಿರಿಸಿಂಹನ ಕೃಷ್ಣಹೃದಯವನ್ನು ನೆನಪಿಗೆ ತಂದು ಕೊಡುತ್ತದೋ ಎಂಬಂತೆ ಸಮ್ರಾಟನಿಗೆ ತೋರಿತು. ಇದರ ಲ್ಲೇನೋ ಭಯಂಕರ ಮೋಸವಿದೆಯೆಂದು ಆತನು ತರ್ಕಿಸಿದನು; ಮುಂದೆ ಹೋಗಬೇಕೋ-ಹೋಗಬಾರದೋ ಎಂಬ ವಿಚಾರತರಂಗಗಳು ಅವನ ಮನಸ್ಸಿ ನಲ್ಲಿ ಅಲೆದಾಡಿದವು. ಬಳಿಕ ಅವನು ಕಾದಿಟ್ಟ ಸೈನ್ಯವನ್ನು ಬರಮಾಡಿಕೊಂಡು ಒಳನುಗ್ಗಿದನು.

ಸಮ್ರಾಟನ ಸೈನ್ಯವು ಕೋಟೆಯಲ್ಲಿ ಪಸರಿಸಲು ಗಿರಿಸಿಂಹನ ದಂಡಾಳು ಗಳಲ್ಲಿ ಹಾ-ಹಾಕಾರ ಉತ್ಪನ್ನವಾಯಿತು ಈ ಸೈತಾನರು ಯಾವ ಮಾರ್ಗ

ದಿಂದ ಬಂದರೆಂದು ಅವರು ಗಾಬರಿಯಾಗಿ ತಮ್ಮ ಆಯುಧಗಳನ್ನು ಸಾವರಿಸಿಕೊಳ್ಳಹತ್ತಿದರು. ಕ್ಷಣದಲ್ಲಿ ಉಭಯ ಪಕ್ಷಗಳ ಸೈನಿಕರಲ್ಲಿ ಕೈಗೆ ಕೈ ಹತ್ತಿ ತುಮುಲ ಯುದ್ಧಕ್ಕಾರಂಭವಾಯಿತು. ಸಮ್ರಾಟನು ಆಶ್ಚರ್ಯಚಕಿತನಾಗಿ ಕೋಟೆಯ ಆಯಕಟ್ಟಿನ ಸ್ಥಳಗಳನ್ನೆಲ್ಲ ಆಕ್ರಮಿಸಲಿಕ್ಕೆ ತನ್ನ ಸೈನಿಕರಿಗೆ ಅಪ್ಪಣೆ ಮಾಡಿದನು. ಗಿರಿಸಿಂಹನ ದಂಡಾಳುಗಳು ಅಲ್ಪ ಸಂಖ್ಯಾಕರಿದ್ದದರಿಂದ, ಸ್ವಲ್ಪ ಹೊತ್ತಿನಲ್ಲಿ ಸಮ್ರಾಟನ ಸೈನಿಕರು ಅವರನ್ನು ಪ್ರತಿಬಂಧಿಸಿದರು. ಹೀಗೆ ದುರ್ಗದಲ್ಲಿ ಕೋಲಾಹಲ ನಡೆದಿರಲು, ಬಾಲೇ ಕಿಲ್ಲೆಯಲ್ಲಿ ಈ ಯಾವ ಪಾಪವನ್ನೂ ಅರಿಯದ ಗಿರಿಸಿಂಹನು ಏನೇನೋ ಯೋಚಿಸುತ್ತ ಕುಳಿತಿದ್ದನು. ಒಮ್ಮಿಂದೊಮ್ಮೆ ಸೈನಿಕರ ಆರ್ತಧ್ವನಿಯು ಕೇಳಬರಲು, ಅವನ ಹೃದಯಕ್ಕೆ ಬಾಣ ಹೊಡೆದಂತಾಯಿತು. ಕೂಡಲೆ ಅವನು ಕಕ್ಕಾಪಿಕ್ಕಿಯಾಗಿ ನೋಡುತ್ತ ಇದೇನು ಅದ್ಭುತವೆಂದು ಹೊರಗೆ ಬರಲು, ಭಯಂಕರ ಕೋಲಾಹಲವೆದ್ದಂತೆ ತೋರಿತು. ಅವನು ಹಾಗೆಯೇ ಸಂತಾಪಗೊಂಡು, ಕೈಯೊಳಗೆ ಖಡ್ಗವನ್ನು ತಕ್ಕೊಂಡು ಅರಮನೆಯಿಂದ ಹೊರಬೀಳುವಷ್ಟರಲ್ಲಿ ಶತ್ರುಗಳು ಅವನನ್ನು ಸೆರೆ ಹಿಡಿದುಬಿಟ್ಟರು.

ಸಮ್ರಾಟಭೂಪಡನು ತಡವಿಲ್ಲದೆ ಸಂಪೂರ್ಣ ದುರ್ಗವನ್ನು ಕೈವಶ ಮಾಡಿಕೊಂಡು, ಶತ್ರುಗಳ ಒಂದು ಪಿಳ್ಳೆಯು ಕೂಡ ಹೊರಗೆ ಉಳಿಯದಂತೆ ಮಾಡಿದನು; ಮತ್ತು ಆ ಕೂಡಲೆ ತನ್ನ ಸಮಗ್ರ ದಂಡಾಳುಗಳನ್ನು ಕರೆಯಕಳುಹಿ, ದುರ್ಗದ ಮೇಲೆ ಚಾಲುಕ್ಯ ಸಮ್ರಾಟನ ವಿಜಯಧ್ವಜವನ್ನು ನಿಲ್ಲಿಸಿದನು. ಇಷ್ಟೆಲ್ಲ ಆಗಬೇಕಾದರೆ ಬೆಳಗಿನ ನಾಲ್ಕು ಗಂಟೆಯಾಯಿತು. ಭಯಂಕರ ಕೋಲಾಹಲವೆಲ್ಲ ಅಡಗಿ, ಎಲ್ಲ ಕಡೆಗೂ ಶಾಂತತೆಯು ನೆಲೆಗೊಂಡಿತು. ಆಗ ಭೂಪಡನಿಗಾದ ಆನಂದವನ್ನು ವರ್ಣಿಸಲಾಗಲ್ಲ! ಕೋಟೆಯು ಕೈವಶವಾಗಿ ವಿಜಯವಾದದ್ದೇನೋ ನಿಜ; ಆದರೆ ನನ್ನೊಡನೆ ಪತ್ರವ್ಯವಹಾರವನ್ನು ನಡೆಯಿಸಿ, ಇಷ್ಟೆಲ್ಲ ಕಾರಸ್ಥಾನಗಳನ್ನು ಯಾರು ಮಾಡಿರಬಹುದೆಂದು ಅವನ ಮನಸ್ಸಿನಲ್ಲಿ ಕಟಿಯ ಹತ್ತಿತು. ದುರ್ಗದಲ್ಲಿ ನಡೆದ ಈ ವಿಪರೀತ ಪ್ರಕಾರದಿಂದ ಗಿರಿಸಿಂಹನು ತನಗೆ ಆಮಂತ್ರಣ ಕೊಟ್ಟಿಲ್ಲೆಂಬದು ಅವನಿಗೆ ಹೊಳೆದುಹೋಯಿತು; ಆದರೆ ರಾಜಮುದ್ರೆಯನ್ನು ಅಪಹರಿಸಿ ಬೇರೆ ಯಾರೋ ಸಾಹಸಿಗರು ಈ ಕೆಲಸ ಮಾಡಿರಬೇಕೆಂದು ಅವನಿಗೆ ತೋರಿತು. ಅವರು ಹೀಗೆ ಸಾಹಸ ಮಾಡಿ ನನಗೆ ದುರ್ಗವನ್ನು ಕೈವಶ ಮಾಡಿಕೊಟ್ಟದ್ದರ ಉದ್ದೇಶವೇನು? ಇದರಿಂದ ಅವರಿಗೆ ಬರತಕ್ಕ ಲಾಭವಾದರೂ ಯಾವದಿರಬಹುದು? ಎಂಬಿವೇ ಪ್ರಶ್ನೆಗಳನ್ನು ವಿಚಾರಕ್ಕೆ ತಂದುಕೊಂಡು ಸಮ್ರಾಟನು ತಲ್ಲೀನನಾದನು. ಸೇನಾಪತಿ-ಮಂತ್ರಿಗಳೆಲ್ಲರೂ ದುರ್ಗದ ಸಂರಕ್ಷಣೆಯ ಕಾರ್ಯದಲ್ಲಿ ತೊಡಗಿದರು. ಸಮ್ರಾಟನು ಯಾವ

ಮಂದಿರದಲ್ಲಿ ಕುಳಿತು ಹೀಗೆ ಯೋಚಿಸುತ್ತಿದ್ದನೋ, ಆ ಮಂದಿರವು ಗಿರಿಸಿಂಹನ ಸ್ವಂತದ ದಿವಾಣಖಾನೆಯಾಗಿತ್ತು. ಒಮ್ಮೆ ಅವನು ಆ ದಿವಾಣಖಾನೆಯ ಸೌಂದರ್ಯವನ್ನು ನೋಡುವದರಲ್ಲಿ ತೊಡಗುತ್ತಿದ್ದನು. ಮತ್ತೊಮ್ಮೆ ಇದೆಲ್ಲ ಯೋಗಾಯೋಗವು ಹೇಗೆ ಕೂಡಿ ಬಂತೆಂದು ವಿಚಾರಪರನಾಗುತ್ತಿದ್ದನು. ಗಿರಿಸಿಂಹ ಮೊದಲು ಮಾಡಿಕೊಂಡು ಶತ್ರುಸೈನ್ಯವೆಲ್ಲವೂ ಕೈವಶವಾದ್ದರಿಂದ, ಆತನು ನಿರ್ಭಯತೆಯಿಂದ ಕುಳಿತುಕೊಂಡಿದ್ದನು. ಇದಲ್ಲದೆ ಸಾವಿರಾರು ಜನ ಕಾಲಾಳುಗಳು ಅವನು ಕುಳಿತ ಮಂದಿರದ ಸುತ್ತಲೂ ಪಹರೆ ಮಾಡುತ್ತಿದ್ದರು.

ಹೀಗೆ ಕೆಲವು ನಿಮಿಷಗಳು ಕಳೆಯುತ್ತಿರಲು, ದಿವಾಣಖಾನೆಯ ಉತ್ತರ ದಿಕ್ಕಿನ ಗೋಡೆಯು ಒಮ್ಮೆಲೆ ಇಬ್ಭಾಗವಾದಂತೆ ತೋರಿತು. ಸಮ್ರಾಟನು ಮೆಟ್ಟಿಬಿದ್ದು, ಅತ್ತ ಕಡೆಗೆ ನೋಡುತ್ತಿರಲು ಅಲ್ಲಿ ಮನುಷ್ಯಾಕೃತಿಯು ಕಾಣಿಸಿತು. ಆಗ ಆತನು ಇದೇನು ಸೋಜಿಗವೆಂದು ಟೊಂಕದೊಳಗಿನ ಖಡ್ಗಕ್ಕೆ ಕೈ ನೀಡುತ್ತಿರಲು, ಒಂದು ವ್ಯಕ್ತಿಯು ಒಮ್ಮಿಂದೊಮ್ಮೆಲೆ ಅವನ ಮುಂದೆ ಬಂದು ನಿಂತು: "ಯಾಕೆ, ಸಮ್ರಾಟರೇ, ಅಂಜಿಕೊಂಡಿರೇನು? ಖಡ್ಗಕ್ಕೆ ಕೈ ನೀಡುವಿರಲ್ಲ!" ಎಂದು ಕೇಳಿತು. ಇದೆಲ್ಲವನ್ನು ನೋಡಿ ಸಮ್ರಾಟನಿಗೆ ದಂಗು ಬಡೆದುಹೋಯಿತು.

ಸಮ್ರಾಟನ ಎದುರಿಗೆ ಬಂದು ನಿಂತ ವ್ಯಕ್ತಿಯು ಸ್ತ್ರೀಯಾಗಿದ್ದಳು. ಆಕೆಯು ದಿವಾಣಖಾನೆಯ ಗೋಡೆಯಲ್ಲಿ ವಿಶಿಷ್ಟ ಪದ್ಧತಿಯಿಂದ ರಚಿಸಿದ ಕಪಾಟಿನ ಬಾಗಿಲವನ್ನು ಮೆಲ್ಲಗೆ ತೆರೆದು ಬಂದಿದ್ದಳು. ಸ್ತ್ರೀಯ ಗುರುತು ಸಮ್ರಾಟನಿಗೆ ಹತ್ತಿದಂತಾಯಿತು. ಆದರೂ ಅವನು ಒಮ್ಮೆಲೆ ಮಾತಾಡಿಸಲಿಕ್ಕೆ ಧೈರ್ಯಗೊಳ್ಳದೆ ಸುಮ್ಮನಿರಲು,

ಸ್ತ್ರೀಯು:— ಸಮ್ರಾಟರೇ, ನನ್ನ ಪರಿಚಯವು ನಿಮಗೆ ಹತ್ತಿದ್ದರೂ ಹತ್ತಿರಬಹುದು.

ಸಮ್ರಾಟ:—ಎಲ್ಲಿಯೋ ನೋಡಿದಂತೆ ಸ್ಮರಣೆಯಲ್ಲಿದೆ; ಆದರೆ ಇಂಥಲ್ಲಿಯೇ ನೋಡಿರುವೆನೆಂದು ನೆನಪಾಗಲೊಲ್ಲದು.

ಸ್ತ್ರೀಯು:—ನಿಮಗೆ ನೆನಪಾಗದಿದ್ದರೂ ನಾನು ನೆನಪು ಮಾಡಿಕೊಡುತ್ತೇನೆ. ಕೋಟೆಯೊಳಕ್ಕೆ ಬರಲಿಕ್ಕೆ ಆಮಂತ್ರಣವ ಕೊಡಲು ಒಬ್ಬ ರಾಯಭಾರಿಯು ನಿಮ್ಮ ಬಳಿಗೆ ಬಂದಿದ್ದನಷ್ಟೇ; ನಾನೇ ಆ ರಾಯಭಾರಿಯು.

ಸಮ್ರಾಟ(ಚಕಿತನಾಗಿ):— ಹಾ! ಧ್ಯಾನದಲ್ಲಿ ಬಂದಿತು. ಇದೇ ಯೋಚನೆಯಲ್ಲಿಯೇ ನಾನು ಮಗ್ನನಾಗಿದ್ದೆನು. ಕುಳಿತುಕೊಳ್ಳಿರಿ. ರಾಯಭಾರಿಯ ವೇಷದಿಂದ ಸ್ತ್ರೀಯರಾದ ನೀವು ನನ್ನಲ್ಲಿಗೆ ಬರಲು ಕಾರಣವೇನು? ನಿಮ್ಮನ್ನು ಗಿರಿಸಿಂಹನೇ ಕಳಿಸಿದ್ದನಲ್ಲವೆ?

ಸ್ತ್ರೀ(ನಗುತ್ತ): ಆ ಸಂಗತಿಯನ್ನು ತಿಳಿಸುವದಕ್ಕಾಗಿಯೇ ನಾನೀಗ ನಿಮ್ಮ ಬಳಿಗೆ ಬಂದಿರುತ್ತೇನೆ. ಅಭಯ ಕೊಟ್ಟರೆ ಹೇಳುತ್ತೇನೆ.

ಸಮ್ರಾಟ: - ಹೇಳಿರಿ, ಮೊದಲು ಹೇಳಿರಿ; ಅದನ್ನು ಕೇಳಿದ ಹೊರತು ನನಗೆ ಸಮಾಧಾನವಾಗುವಂತಿಲ್ಲ.

ಸ್ತ್ರೀ: —ಸಮ್ರಾಟ ಪ್ರಭುಗಳೇ, ಕ್ಷಮಿಸಿರಿ. ನನ್ನನ್ನು ನಿಮ್ಮ ಬಳಿಗೆ ಪುರುಷವೇಷದಿಂದ ಕಳಿಸಿದವರು ಗಿರಿಸಿಂಹ ದೊರೆಗಳಲ್ಲ; ಅವರ ರಾಣಿಯವರು.

ಸಮ್ರಾಟ(ಆಶ್ಚರ್ಯದಿಂದ):— ಇಷ್ಟೆಲ್ಲ ಕಾರಸ್ಥಾನವನ್ನು ರಾಣಿಯವರೇ ಮಾಡಿರುವರೇನು? ಇದರಲ್ಲಿ ಅವರ ಉದ್ದೇಶವೇನಿರುವದು?

ಸ್ತ್ರೀ:— ಹೌದು, ಅವರೇ ಮಾಡಿಸಿರುವರು; ಆದರೆ ಅವರ ಗುಪ್ತಉದ್ದೇಶವು ನನಗೆ ತಿಳಿಯದು. ಈ ಮೇರೆಗೆ ಅವರಿಬ್ಬರೂ ಮಾತಾಡುತ್ತಿರುವಷ್ಟರಲ್ಲಿ ಸರ್ವಾಂಗಗಳನ್ನೂ ವಸ್ತ್ರದಿಂದ ಮುಚ್ಚಿಕೊಂಡಿದ್ದ ಮತ್ತೊಬ್ಬ ಸ್ತ್ರೀಯು ಅಲ್ಲಿಗೆ ಬಂದಳು. ಆಗ ಮೊದಲಿನ ಸ್ತ್ರೀಯು ಸಮ್ರಾಟನನ್ನು ಕುರಿತು: — ಮಹಾಪ್ರಭುಗಳೇ, ಇಲ್ಲಿಗೆ ಮಹಾರಾಣಿಯವರೇ ದಯಮಾಡಿಸಿರುವರು. ಇನ್ನು ನಾನು ಹೋಗುತ್ತೇನೆ, ಎಂದು ನುಡಿದು, ಕೂಡಲೆ ಅಲ್ಲಿಂದ ಕಾಲ್ದೆಗೆದಳು. ಬಳಿಕ ಹಿಂದುಗಡೆ ಬಂದ ತರುಣಿಯು ಮೈಮೇಲಿನ ಬುರುಕಿಯನ್ನು ತೆಗೆದೊಗೆದು, ಸ್ಮಿತವದನದಿಂದ ಸಮ್ರಾಟನನ್ನು ನೋಡುತ್ತ ನಿಂತಳು. ಕ್ಷಣಹೊತ್ತಿನ ವರೆಗೆ ಇಬ್ಬರ ಮುಖಗಳಿಂದಲೂ ಶಬ್ದಗಳು ಹೊರಡವಾದವು. ಆ ಸ್ವರ್ಗೀಯ ಸೌಂದರ್ಯವನ್ನು ನೋಡಿ ಸಮ್ರಾಟನು ಮೋಹಗೊಂಡರೂ, ವಿಚಾರಾಂತ್ಯದಲ್ಲಿ ವಿವೇಕವನ್ನು ತಂದುಕೊಂಡು,

ಸಮ್ರಾಟ:— ಮಹಾರಾಣಿಯವರೇ, ಅಪರಿಚಿತನೂ ಶತ್ರುವೂ ಆದ ನನ್ನ ಬಳಿಗೆ ಏಕೆ ಬಂದಿರಿ?

ತರುಣಿ(ತುಸ ಲಜ್ಜೆಯಿಂದ):—ಪ್ರಭುಗಳಾದ ತಮ್ಮನ್ನು ಶತ್ರುಗಳೆಂದು ತಿಳಿದಿದ್ದರೆ, ನಾನು ಇಲ್ಲಿಗೆ ಬರುವ ಸಂಭವವಾದರೂ ಹೇಗೆ?

ಸಮ್ರಾಟ:—ಹಾಗಾದರೆ ನನ್ನನ್ನು ಏನೆಂದು ತಿಳಿದಿರುವಿರಿ?

ತರುಣಿ: — ಹೀಗೆ ತಾವು ನನಗೆ ಬಹುಮಾನವನ್ನು ಕೊಟ್ಟು ಮಾತಾಡುವದರಿಂದ, ನನಗೆ ಮಾತಾಡಲಿಕ್ಕೆ ಬಹು ಸಂಕೋಚವಾಗುತ್ತದೆ.

ಸಮ್ರಾಟ: — ಪರಸ್ತ್ರೀಯರಾದ ತಮಗೆ ಬಹುಮಾನ ಕೊಡದೆ ಮಾತಾಡುವದು ಶಿಷ್ಟಾಚಾರಕ್ಕೆ ವಿರೋಧವಲ್ಲವೆ?

ತರುಣಿ(ವಿನಯದಿಂದ):— ತಾವು ನನ್ನನ್ನು ಪರಸ್ತ್ರೀಯೆಂದು ಭಾವಿಸಲಾಗದು

ಸಮ್ರಾಟ(ಆಶ್ಚರ್ಯಸೂಚಕಸ್ವರದಿಂದ): —ಇದನ್ನೇನು ಮಾತಾಡುವಿರಿ! ಪರಸ್ತ್ರೀಯೆಂದು ಭಾವಿಸದಿದ್ದರೆ ಮುಂದೆ?...........

ತರುಣಿ:-ಇದಕ್ಕೂ ಸ್ಪಷ್ಟವಾಗಿ ಹೇಳುವದಿನ್ನೇನು? ಮೊದಲು ನನ್ನ ಸಂಗತಿಯನ್ನು ದಯಮಾಡಿ ಕೇಳಿಕೊಳ್ಳಿರಿ. ಹೇಳೆಂದು ಅಪ್ಪಣೆ ಕೊಟ್ಟರೆ ಹೇಳುವೆನು.

ಸಮ್ರಾಟ: —ಅವಶ್ಯವಾಗಿ ಹೇಳಬಹುದು.

ತರುಣಿ: — ನಾನು ಈಗ ನಿಮ್ಮ ಸೆರೆಯಲ್ಲಿ ಸಿಕ್ಕಿರುವ ದುರ್ಗಾಧಿಪತಿಗಳ ನಾಲ್ಕನೆಯ ರಾಣಿಯು; ಅವರು ತೀರ ವೃದ್ಧಾಪ್ಯದಲ್ಲಿ ನನ್ನ ಪಾಣಿಗ್ರಹಣ ಮಾಡಿದರು. ಪಿತನಿಗೆ ಸದೃಶನಾದವನು ಪತಿಯಾದರೆ ಹೇಗೆಂಬದನ್ನು ನಿಮ್ಮಂಥ ಸೂಜ್ಞರಿಗೆ ಹೇಳುವ ಕಾರಣವಿಲ್ಲ. ನಾನು ಹೆಸರಿಗೆ ಮಾತ್ರ ಲಗ್ನವಾಗಿ ಕನ್ಯಾವಸ್ಥೆಯನ್ನು ಕಳಕೊಂಡಂತಾಗಿರುವದು; ಆದರೆ ಮಹಾಪ್ರಭುಗಳೇ, ಈ ವೃದ್ಧ ವಿವಾಹದಿಂದ ನನ್ನ ಪ್ರೇಮವು ಇದುವರೆಗೂ ಹೊಸಲಾಗಿ ಉಳಿದಿತ್ತು; ಆದರೆ ಯಾವ ದಿವಸ ನಾನು ದುರ್ಗದ ಮುತ್ತಿಗೆಯನ್ನು ನೋಡಬಂದಿದ್ದೆನೋ, ಆ ದಿವಸ ನಿಮ್ಮ ಮನೋಹರ ಮೂರ್ತಿಯನ್ನು ನೋಡಿದ ಮಾತ್ರದಿಂದ ನನ್ನ ಪಂಚಪ್ರಾಣವು ನಿಮ್ಮನ್ನೇ ಅನುಸರಣ ಮಾಡಿತು. ಅಂದಿನಿಂದ ನಿಮ್ಮ ಮನೋಹರ ಮೂರ್ತಿಯು ನನ್ನ ಹೃದಯದಲ್ಲಿ ಸ್ಥಿರವಾಗಿ ನೆಲೆಸಿರುವದು. ನಾನು ಮನಸಾ ನಿಮ್ಮನ್ನೇ....ಭಾವಿಸಿದ್ದೇನೆ; ಆದರೆ ಹೀಗೆ ನಾನು ನಿಮ್ಮನ್ನು ಮನಸಾ ಪ್ರೀತಿಸುತ್ತಿರಲು, ಒಂದು ದಿನ ದುರ್ಗಾಧಿಪತಿಗಳು ನನ್ನ ಅಂತಃಪುರಕ್ಕೆ ಒಂದು, ನಿಮ್ಮ ಅಪಮಾನವಾಗುವಂಥ ಸಂಗತಿಗಳನ್ನು ಹೇಳಿ, ಇನ್ನು ಮುಂದೆ ಸಮ್ರಾಟನು ಮುತ್ತಿಗೆಯನ್ನೆಬ್ಬಿಸಿಕೊಂಡು ಹೋಗುವನೆಂದು ಹೇಳಿದರು. ನಿಮ್ಮನ್ನು ಪ್ರೀತಿಸುತಲಿದ್ದ ನನಗೆ ಅವರ ಮಾತಿನಿಂದ ಬಹಳ ವಿಷಾದವಾಯಿತು. ನಿಮ್ಮ ಸಾನ್ನಿಧ್ಯವನ್ನು ಪಡೆಯುವದಕ್ಕೋಸ್ಕರ ನಾನು ನನ್ನ ದಾಸಿಗೆ ಪುರುಷವೇಷವನ್ನು ತೊಡಿಸಿ, ರಾಜಧಾನಿಯ ಚೋರ ಮಾರ್ಗದಿಂದ ನಿಮ್ಮ ಬಳಿಗೆ ಕಳಿಸಿ, ನಿಮ್ಮ ಸಮ್ಮತಿಯನ್ನು ಸಂಪಾದಿಸಿದೆನು. ದುರ್ಗಾಧಿಪತಿಗಳ ಮನಸ್ಸನ್ನು ಒಲಿಸಿಕೊಂಡದ್ದರಿಂದ, ನನಗೆ ರಾಜಮುದ್ರಿಗಳು ಸಹಜವಾಗಿ ಸಿಕ್ಕಿದ್ದವು. ಈ ದಿನ ರಾತ್ರಿ ಎಂಟು ಗಂಟೆಗೆ ನಿಮಗೆ ಬರಲಿಕ್ಕೆ ತಿಳಿಸಿದ್ದರಿಂದ, ನಾನು ದುರ್ಗದ ಹೆಬ್ಬಾಗಿಲ ರಕ್ಷಕರಿಗೆ ತೀವ್ರ ಮಾದಕಪದಾರ್ಥಗಳನ್ನು ಹಾಲಿನಲ್ಲಿ ಮಿಶ್ರ ಮಾಡಿಸಿ ಕುಡಿಸಿಸಿದೆನು; ಮತ್ತು ನನ್ನ ವಿಶ್ವಾಸಿಕ ದಾಸಿಯನ್ನು ನೀವು ಬಂದ ಕೂಡಲೆ ಪೂಲನ್ನು ಕೆಡವಲಿಕ್ಕೂ, ದಾಗಿಲವನ್ನು ತೆರೆಯಲಿಕ್ಕೂ ಕಾದುಕೊಂಡಿರೆಂದು ನಿಯಮಿಸಿದ್ದೆನು. ನೀವು ಒಮ್ಮೆ ದುರ್ಗವನ್ನು ಪ್ರವೇಶಿಸಿದ ಬಳಿಕ, ಮುಂದೆ ಇಲ್ಲಿಯ ಅಲ್ಪ ಸಂಖ್ಯಾಕ ದಂಡಾಳುಗಳನ್ನು ಗೆಲ್ಲುವದು ನಿಮಗೆ ಅಸಾಧ್ಯವಲ್ಲೆಂದು

ನಾನು ತರ್ಕಿಸಿದ್ದೆನು. ಅದರಂತೆಯೇ ಇಲ್ಲಿಯ ವರೆಗೆ ಕಾರ್ಯವು ಜರುಗಿರು ವದು. ಇನ್ನು ಮುಂದಿನ ಕೆಲಸವು............

ಸಮ್ರಾಟ:— ಇನ್ನು ಮುಂದಿನ ಕೆಲಸವೇನು?

ತರುಣಿ:— ನಾನು ಯಾವ ಉದ್ದೇಶದಿಂದ ನಿಮಗೆ ದುರ್ಗವು ಕೈಸೇರು ವಂತೆ ಮಾಡಿರುವೆನೋ, ಆ ಉದ್ದೇಶವನ್ನು ಪೂರ್ತಿಗೊಳಿಸಿದರಾಯಿತು.

ಸಮ್ರಾಟ(ಮನಸ್ಸಿನಲ್ಲಿ): ಈ ಸ್ತ್ರೀಯು ಸಾಮಾನ್ಯಳಿರದೆ, ಅತ್ಯಂತ ಸಾಹಸಿಯಿದ್ದಂತೆ ತೋರುತ್ತದೆ. ಅಂತೇ ಇವಳು ಇಲ್ಲಿಯ ಯಾವ ಜನ ರಿಗೂ ಸುತ್ರಾಮ ಸುದ್ದಿಯಿಲ್ಲದಂತೆ, ಇಂಥ ಭಯಂಕರ ಕೆಲಸವನ್ನು ಮಾಡಿರು ವಳು; ಆದರೆ ಈಕೆಯು ಈಗೊಂದು ಮುಂಡಿಗೆಯನ್ನು ಹಾಕಿಕೊಂಡು ಕುಳಿತಿ ರುವಳಲ್ಲ! ಈಕೆಯ ಮೋಹಜಾಲದಲ್ಲಿ ಸಿಕ್ಕರೆ, ನನ್ನ ಹಾಗು ನನ್ನ ಪೂರ್ವಜರ ಕೀರ್ತಿಗೆ ಕಲಂಕಹತ್ತೀತು. ಆದ್ದರಿಂದ ಇವಳನ್ನು ಉಪಾಯದಿಂದ್ಲ ತಿರಸ್ಕರಿ ಸುವದು ಉಕ್ತವಾಗಿದೆ. ನನ್ನ ತಿರಸ್ಕಾರದಿಂದ ಇವಳು ಒಂದುವೇಳೆ ನನಗೆ ಕೇಡು ಬಗೆಯಬಹುದು. ನನ್ನಂಥ ಸಮ್ರಾಟನು ಇಂಥ ಸ್ತ್ರೀಗೆ ಅಂಜಿ, ನೀತಿಭ್ರಷ್ಟನಾಗ ಬಹುದೆ? (ಪ್ರಕಾಶ) ಮಹಾರಾಣಿಯವರೇ, ನನ್ನ ಮೇಲೆ ನಿಮ್ಮ ಪ್ರೇಮವಿದ್ದ ದ್ದೇನೋ ನಿಜವಿರಬಹುದು; ಆದರೆ ನಿಮ್ಮ ಮೇಲೆ ನನ್ನ ಪ್ರೇಮವಿರಬೇಕಷ್ಟೆ? ಇದನ್ನು ತಿಳಿಯದೆ ನೀವು ಇಷ್ಟೊಂದು ಸಾಹಸವನ್ನು ಹೇಗೆ ಮಾಡಿದಿರಿ?

ತರುಣಿ(ನಿಶ್ಚಯಸೂಚಕ ಸ್ವರದಿಂದ):— ದುರ್ಗವು ಕೈವಶವಾಗದೆ ನೀವು ಹತಾಶರಾಗಿರುವಾಗ ನಾನು ಈ ಪರಿ ಸಹಾಯ ಮಾಡಿ ನಿಮಗೆ ದುರ್ಗವನ್ನು ವಶ ಮಾಡಿಕೊಡುವದರಿಂದ, ಕೃತಜ್ಞಬುದ್ಧಿಯುಳ್ಳ ಸಮ್ರಾಟರು ನನ್ನ ಮೇಲೆ ಪ್ರೇಮಮಾಡುವರೆಂಬ ನಂಬಿಗೆಯಿದ್ದದರಿಂದಲೇ ಈ ಸಾಹಸಕ್ಕೆ ಕೈ ಹಾಕಿದೆನು.

ಸಮ್ರಾಟ:— ಆ ನಿಮ್ಮ ನಂಬಿಗೆಯು ನಿರರ್ಥಕವಾದದ್ದು. ಚಾಲುಕ್ಯ ಸಮ್ರಾಟನು ಅಷ್ಟೊಂದು ಅಧಮನಿರುವದಿಲ್ಲ. ಆತನು ಹತಾಶನಾಗಿ ಎಂದೂ ಕೂಡುವದಿಲ್ಲ; ಮತ್ತು ನಿಮ್ಮಂಥ ಪತಿದ್ರೋಹಿಣಿಯರನ್ನು ಪ್ರೀತಿಸುವಷ್ಟು ವಿಷಯ ಲಂಪಟನಿರುವದಿಲ್ಲ. ನೀನು ಪ್ರತ್ಯಕ್ಷ ಪತಿಯ ಹಿತವನ್ನು ಕೂಡ ನೋಡದೆ, ಅಪರಿಚಿತನಾದ ನನ್ನ ಮೇಲೆ ಕೇವಲ ವಿಷಯಸುಖದ ಹಂಬಲದಿಂದ ಪಾಪಕರ ವಾದ ಪ್ರೇಮವನ್ನಿರಿಸಿದೆಯಾದುದರಿಂದ, ನಿಮ್ಮಂಥವರು ನನ್ನೆದುರಿಗೆ ಬರಲಿಕ್ಕೆ ಕೂಡ ಯೋಗ್ಯರಿರುವದಿಲ್ಲ. ಆದ್ದರಿಂದ ಈ ಹುಚ್ಚನ್ನು ಬಿಟ್ಟು ನೀವು ನಿಮ್ಮ ಸ್ಥಳಕ್ಕೆ ಹೋಗುವದು ಲೇಸು. ನಾಳಿಗೆ ಬೆಳಗಾದ ಮೇಲೆ ಗಿರಿಸಿಂಹನನ್ನು ಕರೆ ಯಿಸಿ, ಅವನು ನನಗೆ ಮಾಂಡಲಿಕನಾಗಲೊಪ್ಪಿದರೆ, ಅವನನ್ನು ಪುನಃ ಈ ದುರ್ಗದ ಮೇಲೆ ನಿಯಮಿಸುವೆನು. ಆ ನಿಮ್ಮ ಪತಿಯ ಸೇವೆಯಲ್ಲಿರುವದೇ

ನಿಮಗೆ ಭೂಷಣವು.

ಈ ಮೇರೆಗೆ ಸಮ್ರಾಟನು ತರುಣಿಯನ್ನು ತಿರಸ್ಕರಿಸಲು, ಆಕೆಯು ಸಂತಾಪಗೊಂಡು ನುಡಿದಳೇನಂದರೆ:- "ನಾನು ದಕ್ಷಿಣದ ಸಾರ್ವಭೌಮನಿದ್ದು, ಈ ಕ್ಷುದ್ರ ಸ್ತ್ರೀಯಿಂದೇನಾದೀತೆಂದು ತಿಳಿಯಬಾರದು. ಈ ದುರ್ಗವನ್ನು ನಿಮ್ಮ ಸ್ವಾಧೀನ ಪಡಿಸಿದ್ದಕ್ಕೆ ನಿಮ್ಮಿಂದ ಉಪಕೃತಳಾದೆನು ಇರಲಿ. ನಿಮ್ಮಂಥ ಕೃತಘ್ನರಿಗೆ ತಕ್ಕ ಪ್ರಾಯಶ್ಚಿತ್ತವನ್ನು ಮಾಡಿಸಿಯೇ ತೋರಿಸುವೆನು." ಬಳಿಕ ತರುಣಿಯು ಅಲ್ಲಿ ನಿಲ್ಲದೆ, ಕ್ರೂರದೃಷ್ಟಿಯಿಂದ ಒಮ್ಮೆ ಸಮ್ರಾಟನನ್ನು ನೋಡಿ, ತನ್ನ ಅಂತಃಪುರದ ಕಡೆಗೆ ಸಾಗಿದಳು. ಇತ್ತ ಸಮ್ರಾಟನು ಸ್ತ್ರೀಯರ ಕಾರಸ್ಥಾನದ ವಿಷಯವಾಗಿ ಕೌತುಕಪಡುತ್ತ, 'ದುರ್ಗವು ಕೈಸೇರಿತು. ಮುಂದೇನು?' ಎಂದು ಯೋಚಿಸುತ್ತ ಕುಳಿತುಕೊಂಡನು.

---

## ೬ ಮಹತ್ವಾಕಾಂಕ್ಷೆಯು ಕುಡಿಯಿಟ್ಟಿತು.

ಮರುದಿನ ಬೆಳಗಾಯಿತು. ಭಗವಾನ್ ಸೂರ್ಯನು ತನ್ನ ಕೆಂಪುವರ್ಣದ ಕಿರಣಗಳನ್ನು ಪಾವಗಡದ ಕಿಲ್ಲೆಯ ಮೇಲೆ ಹರಡಿ, ಅಲ್ಲಿದ್ದ ಅಂಧಃಕಾರವನ್ನು ತೊಲಗಿಸಿದನು. ಗಡನಿವಾಸಿಗಳು ಬೆಳಗು ಹರಿಯುವಷ್ಟರಲ್ಲಿ ಶತ್ರುಗಳು ತಮ್ಮ ದುರ್ಗವನ್ನಾಕ್ರಮಿಸಿದ್ದಕ್ಕೆ ಭಯಗೊಂಡು, ತಮ್ಮ ವಿತ್ತ ಜೀವಿತಗಳು ಇನ್ನು ಮುಂದೆ ಹೇಗೆ ಸುರಕ್ಷಿತವಾಗಿ ಉಳಿಯುವವೋ ಎಂದು ಮನೆಯೊಳಕ್ಕೆ ಕುಳಿತುಕೊಂಡೇ ಯೋಚಿಸುತ್ತಿದ್ದರು. ಕದವನ್ನು ಕೂಡಾ ತೆರೆಯಲಿಕ್ಕೆ ಅವರಿಗೆ ಧೈರ್ಯವಿರಲಿಲ್ಲ. ಅಷ್ಟರಲ್ಲಿ ಹೊರಗೆ ಡಂಗುರವು ಕೇಳಬರಲು, ಜನರೆಲ್ಲರೂ ಕದಕ್ಕೆ ಕಿವಿಯಾನಿಸಿ, ಇದೇನೆಂದು ಉತ್ಸುಕತೆಯಿಂದ ಕೇಳತೊಡಗಿದರು. "ಚಾಲುಕ್ಯ ಸಾರ್ವಭೌಮರೂ ಧರ್ಮಮೂರ್ತಿಗಳೂ ಆದ ಭೂವಡ ಮಹಾಪ್ರಭುಗಳ ವಿಜಯಧ್ವಜವು ಈ ದುರ್ಗದ ಬುರುಜಿನ ಮೇಲೆ ವಿರಾಜಿಸುವದನ್ನು ಕಂಡು ಪ್ರಜೆಗಳು ಗಾಬರಿಯಾಗಬಾರದು. ಅವರ ವಿತ್ತಜೀವಿತಗಳಿಗೆ ಯಾವ ಬಗೆಯಿಂದಲೂ ಬಾಧೆಯುಂಟಾಗಲಾರದು. ಒಂದುವೇಳೆ ಸೈನಿಕರಿಂದ ಏನಾದರೂ ಅತ್ಯಾಚಾರಗಳು ಸಂಭವಿಸಿದರೆ, ಕೂಡಲೆ ಸಮ್ರಾಟರವರಿಗೆ ವರದಿಯನ್ನು ಮುಟ್ಟಿಸಬೇಕು."

ಈ ಮೇರೆಗೆ ಹೊಯ್ದ ಡಂಗುರವನ್ನು ಕೇಳಿ, ಪ್ರಜೆಗಳಿಗೆ ತುಸ ಆನಂದವೆನಿಸಿತು. ಅವರು ಮೆಲ್ಲಮೆಲ್ಲಗೆ ಕದ ತೆರೆದು ಹೊರಗೆ ಬರಲಾರಂಭಿಸಿದರು. ಹೀಗೆ ಗಡನಿವಾಸಿಗಳು ಭಯವನ್ನು ಬಿಸುಟುತ್ತಿರಲು, ಇತ್ತ ಸಮ್ರಾಟ ಭೂವ

ಡನು ಗಿರಿಸಿಂಹನ ವಿಶಾಲವಾದ ಅರಮನೆಯಲ್ಲಿ ಪ್ರಚಂಡವಾದದ್ದೊಂದು ದರ್ಬಾರವನ್ನು ನೆರೆಯಿಸಿದನು. ಸಮ್ರಾಟನ ಸಚಿವರೂ, ಸೇನಾಪತಿಯೂ, ಇನ್ನುಳಿದ ದೊಡ್ಡದೊಡ್ಡ ಸರದಾರರೂ ಬಂದು, ತಂತಮ್ಮ ಗೌರವಕ್ಕೆ ತಕ್ಕ ಉಚಿತಾಸನಗಳಲ್ಲಿ ವೀರಮಂಡಿಯನ್ನು ಹಾಕಿ ಕುಳಿತುಕೊಂಡರು. ಸೈನಿಕರಲ್ಲಿ ಪ್ರಮುಖರಾದವರು ಸರದಾರರ ಹಿಂಬದಿಯಲ್ಲಿ ಸಾಲ್ಗೊಂಡು ನಿಂತರು. ಅಷ್ಟರಲ್ಲಿ ಸಮ್ರಾಟನು ಸಭೆಗೆ ಬರಲು, ಸರ್ವರೂ ಎದ್ದು ನಿಂತು ನೆಲಮುಟ್ಟಿ ಮುಜುರೆ ಮಾಡಿ, ಆತನು ಸಿಂಹಾಸನಸ್ಥನಾದ ಬಳಿಕ ತಾವೂ ಕುಳಿತುಕೊಂಡರು. ಬಳಿಕ ಸಮ್ರಾಟನು ತಮ್ಮ ಸೆರೆಯಲ್ಲಿ ಸಿಕ್ಕ ಪಾವಗಡದ ಅಧಿಕಾರಿಗಳನ್ನೂ, ಗಿರಿಸಿಂಹನನ್ನೂ ದರ್ಬಾರಕ್ಕೆ ತರಿಸಿದನು. ಖಿನ್ನನಾದ ಗಿರಿಸಿಂಹನು ಸಿಂಹಾಸನದ ಸಮೀಪಕ್ಕೆ ಬರಲು, ಭೂಪಡನು ಆತನಿಗೆ ಯಥೋಚಿತ ಮನ್ನಣೆ ಮಾಡಿ, ತನ್ನ ಸಮೀಪದಲ್ಲಿಯೇ ಕುಳ್ಳಿರಿಸಿಕೊಂಡು ನುಡಿದನೇನಂದರೆ: "ಗಿರಿಸಿಂಹಜೀ, ನೀವು ನಮ್ಮನ್ನೇಕೆ ಮೋಸಗೊಳಿಸಿದಿರಿ?"

ಗಿರಿಸಿಂಹ(ಅತ್ಯಂತ ಕೋಪದಿಂದ):—ನೀವು ನಮಗೆ ಮೋಸ ಮಾಡಿರುವಿರೋ, ನಾನು ನಿಮಗೆ ಮಾಡಿರುವೆನೋ? ಭೇದೋಪಾಯದಿಂದ ಕೋಟೆಯನ್ನು ಪ್ರವೇಶಿಸಿ, ನನ್ನನ್ನು ಛೇಡಿಸುವದಕ್ಕಾಗಿ ಹೀಗೆ ಮಾತಾಡಬಹುದೇ?

ಸಮ್ರಾಟ:—ಛೇ, ಛೇ; ಗಿರಿಸಿಂಹಜಿ, ಇದರಲ್ಲಿ ನಿಮ್ಮನ್ನು ಛೇಡಿಸುವ ಉದ್ದೇಶವಿಲ್ಲ. ಇಕೋ, ತಕ್ಕೊಳ್ಳಿರಿ; ನಿಮ್ಮ ರಾಯಭಾರಿಗಳು ತಂದುಕೊಟ್ಟ ಪತ್ರಗಳನ್ನು! ಎಂದು ನುಡಿದು, ತನ್ನ ಬಳಿಯಲ್ಲಿದ್ದ ಪತ್ರಗಳನ್ನು ಗಿರಿಸಿಂಹನ ಕೈಯಲ್ಲಿ ಕೊಟ್ಟನು.

ಗಿರಿಸಿಂಹ (ಪತ್ರಗಳನ್ನು ನೋಡಿಕೊಂಡು ಆಶ್ಚರ್ಯ-ಸಂತಾಪಗಳಿಂದ): ಇದೇನು? ನಮ್ಮ ರಾಜಮುದ್ರಿಕೆಯಿಂದ ಯುಕ್ತವಾದ ಈ ಬಗೆಯ ಪತ್ರವನ್ನು ಯಾರು ಬರೆದಿರುವರು? ಹಾಯ್! ಹಾಯ್ ಯಾವ ಚಾಂಡಾಲರು ಈ ಸಾಹಸ ಮಾಡಿರಬಹುದು? ನನ್ನ ಕಾರ್ಯದಕ್ಷತೆಗೆ ಧಿಃಕಾರ! ಧಿಃಕಾರವು!! ಎಲಾ ಗಿರಿಸಿಂಹಾ, ನೀನು ಬಲು ಕಾರ್ಯದಕ್ಷನೆಂದು ಹೊಗಳಿಕೊಳ್ಳುತ್ತಿದ್ದೆಯಲ್ಲ! ನೋಡು, ಕಣ್ದೆರೆದು ನೋಡು. ನಿನ್ನ ದುರ್ಗವನ್ನೇ ಬುಡಮೇಲು ಮಾಡುವಂಥ ಕಾರಸ್ಥಾನಗಳು ನಡೆದರೂ, ಅದರ ಸುತರಾಂ ಸುದ್ದಿಯು ಕೂಡ ನಿನಗೆ ಗೊತ್ತಿಲ್ಲವಲ್ಲ? ಎಂದು ಉಸಿರ್ಗಳೆದು, ಅಧೋವದನನಾಗಿ ಕುಳಿತನು.

ಬಳಿಕ ಸಮ್ರಾಟನು ಗಿರಿಸಿಂಹನನ್ನು ಕುರಿತು:—ಗಿರಿಸಿಂಹಜೀ, ಪತ್ರವಾಚನದಿಂದ ನಿಜ ಸಂಗತಿಯು ವಿದಿತವಾಯಿತಷ್ಟೇ; ಇದರಲ್ಲಿ ನಮ್ಮ ಮೋಸವೇನೂ ಇಲ್ಲೆಂಬದು ತಿಳಿಯಿತಲ್ಲವೇ? ಸಮ್ರಾಟ ಭೂಪಡನು ಮೋಸದಿಂದ

ದುರ್ಗವನ್ನು ತಕ್ಕೊಂಡನು, ಎಂಬ ಅಪವಾದವನ್ನು ಹೊರಿಸಲಿಕ್ಕೆ ಆಸ್ಪದವಿಲ್ಲ ದಂತಾಯಿತಲ್ಲವೆ? ಇನ್ನು ಮುಂದೆ ನಿಮ್ಮ ಅಂಬೋಣವೇನೆಂಬದನ್ನು ಸ್ಪಷ್ಟ ವಾಗಿ ಹೇಳಿರಿ, ಎಂದು ಕೇಳಲು, ಗಿರಿಸಿಂಹನು:—

ಗಿರಿಸಿಂಹ:—ಸಮ್ರಾಟರೇ, ನನಗೆ ಮಾತಾಡಲಿಕ್ಕೆ ಬಾಯಿಯೇ ಇಲ್ಲ ದಾಯಿತು ಈ ದ್ರೋಹವನ್ನು ಯಾರು ಎಸಗಿರುವರೋ ಎಂಬದು ನನಗೆ ತಿಳಿಯದಾಯಿತು. (ಉದಾಸೀನತೆಯಿಂದ)ತಿಳಿದಾದರೂ ಇನ್ನೇನು ಮಾಡುವದು? ಆಗುವ ಶಿಷ್ಟಾಚಾರವೆಲ್ಲ ಆಗಿ ಹೋಯಿತು. ಇನ್ನು ಮುಂದೆ ನಿಮ್ಮ ಇಚ್ಛೆಗೆ ಹೇಗೆ ಬರುತ್ತದೋ ಹಾಗೆ ಮಾಡಿರಿ.

ಸಮ್ರಾಟ:—ನೀವು ನಮ್ಮ ಮಾಂಡಲಿಕರಾಗಿರಲಿಕ್ಕೆ ಒಪ್ಪಿದರೆ, ನಿಮಗೇ ಈ ದುರ್ಗಾಧಿಪತ್ಯವನ್ನು ಕೊಟ್ಟು ಬಿಡುವೆವು. ಅದಕ್ಕೋಸ್ಕರವಾಗಿಯೇ ಈಗ ನಿಮ್ಮನ್ನು ಕರೆಯಿಸಿರುತ್ತದೆ.

ಗಿರಿಸಿಂಹ (ಔದಾಸೀನ್ಯದಿಂದ):— ಬೇಡ, ನನಗೆ ಇನ್ನು ದುರ್ಗಾಧಿ ಪತ್ಯವು ಬೇಡ; ವೃದ್ಧನಾದ ನನಗೆ ಮಾಂಡಲಿಕತ್ವವೂ ಬೇಡ; ರಾಜ್ಯವೂ ಬೇಡ. ನನಗೆ ಹಿತ ಮಾಡಬೇಕೆಂದು ನೀವು ಇಚ್ಛಿಸುತ್ತಿದ್ದರೆ, ನನ್ನನ್ನು ಮನಬಂದತ್ತ ಹೋಗಗೊಡಿರಿ. ನಾನು ಯಾವದಾದರೊಂದು ವನವನ್ನು ಸೇರಿ, ಅಲ್ಲಿ ಏಕಲಿಂಗ ಜಿಯ ಧ್ಯಾನದಲ್ಲಿ ಕಾಲಕ್ರಮಣ ಮಾಡುವೆನು.

ಸಮ್ರಾಟ:—ಗಿರಿಸಿಂಗಜೀ, ನಿಮ್ಮ ಇಚ್ಛೆಗೆ ಬಂದಂತೆ ಮಾಡಬಹುದು. ನಿಮಗೆ ಯಾವ ಬಗೆಯ ಪ್ರತಿಬಂಧವನ್ನೂ ಮಾಡುವದಿಲ್ಲ. ಬೇಕಾದರೆ ಮಾಂಡ ಲಿಕರಾಗಿ ದುರ್ಗಾಧಿಪತ್ಯವನ್ನು ಕೈಕೊಳ್ಳಬಹುದು; ಬೇಡವಾದರೆ ನಿಮ್ಮ ಜೀವ ಮಾನವಿರುವ ವರೆಗೆ ಈ ದುರ್ಗದಲ್ಲಿಯಾದರೂ ವಾಸ ಮಾಡಬಹುದು; ಇಲ್ಲವೆ ಯಾವದಾದರೊಂದು ಸುಂದರವನಕ್ಕೆ ದಯಮಾಡಿಸಬಹುದು.

ಗಿರಿಸಿಂಹ:—ಸಮ್ರಾಟರೇ, ನಿಮ್ಮ ಉದಾರಬುದ್ಧಿಯನ್ನು ನೋಡಿ ನನಗೆ ಸಂತೋಷವಾಯಿತು. ನೀವು ನನಗೆ ಶತ್ರುಗಳಾದರೂ ಈಗ ನಾನು ನಿಮಗೆ ಸಂತೋಷದಿಂದ ಆಶೀರ್ವದಿಸಿ, ಅಡವಿಗೆ ಪ್ರಯಾಣ ಬೆಳೆಯಿಸುತ್ತೇನೆ; ಆದರೆ ಈ ಪತ್ರಗಳನ್ನು ತಂದ ರಾಯಭಾರಿಯು ಯಾರೆಂಬದನ್ನು ನೀವು ಗುರ್ತಿಸುವಿ ರೇನು? ಹಾಗಿದ್ದರೆ ನಿಮ್ಮ ಸೆರೆಯೊಳಕ್ಕೆ ಸಿಕ್ಕ ಎಲ್ಲ ರಾಯಭಾರಿಗಳನ್ನು ಇಲ್ಲಿಗೆ ಕರೆತರಿಸಿರಿ. ಕೆಲಸವು ಕೈ ಮೀರಿ ಹೋಗಿದ್ದರೂ ನಿಜ ಸಂಗತಿಯು ತಿಳಿದರೆ, ಒಂದು ಬಗೆಯ ಸಮಾಧಾನವಾಗುವದು.

ಸಮ್ರಾಟ:—ಗಿರಿಸಿಂಹಜಿ, ಆ ಸುದ್ದಿಯನ್ನು ತೆಗೆಯಬೇಡಿರಿ. ಅದರಿಂದ ನಿಮಗೆ ಯಾವ ಪ್ರಯೋಜನವೂ ಇಲ್ಲ. ಆದರ ಶ್ರವಣದಿಂದ ನಿಮಗೆ ಮತ್ತಿಷ್ಟು

ವ್ಯಥೆಯೂ ಸಂತಾಪವೂ ಮಾತ್ರ ಹೆಚ್ಚುವದು.

ಗಿರಿಸಿಂಹ:—ಸಮ್ರಾಟ, ಇನ್ನು ವ್ಯಥೆ ಸಂತಾಪಗಳನ್ನು ಹೆಚ್ಚಿಸಿಕೊಂಡು ಮಾಡುವದೇನು? ಸುಮ್ಮನೆ ಕೇಳಬೇಕೆಂದು ಕೇಳಿದೆನು; ನಿಮ್ಮ ಇಚ್ಛೆಗೆ ಬಾರದಿದ್ದರೆ ಉಪಾಯವಿಲ್ಲ.

ಸಮ್ರಾಟ:—ಇದಕ್ಕೆ ನನ್ನದೇನೂ ಅಡ್ಡಿಯಿಲ್ಲ; ನಾನು ನಿನ್ನೆ ರಾತ್ರಿಯಲ್ಲಿಯೇ ನಿಜ ಸಂಗತಿಯನ್ನು ಕಂಡು ಹಿಡಿದಿರುತ್ತೇನೆ. ಆ ಸಂಗತಿಯನ್ನು ಸಭೆಯಲ್ಲಿ ಮಾತ್ರ ಹೇಳುವ ಹಾಗಿಲ್ಲ; ನಿಮಗೆ ಏಕಾಂತದಲ್ಲಿ ತಿಳಿಸುವೆನು.

ಗಿರಿಸಿಂಹ:—ಅಷ್ಟೊಂದು ರಹಸ್ಯವಾಗಿಟ್ಟರೆ ನನಗೆ ಬರತಕ್ಕ ಐಶ್ವರ್ಯವಾದರೂ ಯಾವದು? ಸಭೆಯಲ್ಲಿಯೇ ಹೇಳಿ ಬಿಡಿರಿ. ಸ್ವಾಮಿದ್ರೋಹಿಗಳಾದ ಅಂಥ ನೀಚರು ಸಾವಗಡದಲ್ಲಿ ಯಾರಿರುವರೆಂಬದು ಒಮ್ಮೆ ಗೊತ್ತಾಗಿಹೋಗಲಿ.

ಸಮ್ರಾಟ(ಮನಸ್ಸಿನಲ್ಲಿ):— ಈ ವೃದ್ಧನಿಗೆ ಹುಚ್ಚೂ ಮುಪ್ಪೂ ಕೂಡಿದೆ. ಈತನು ಹೇಳಿದ ಹೊರತು ಬಿಡುವದಿಲ್ಲ; ಆದ್ದರಿಂದ ಆ ಸಂಗತಿಯನ್ನು ಹೀಗೆಯೇ ಈ ತುಂಬಿದ ದರ್ಬಾರದಲ್ಲಿ ಹೇಳುವದು ಅಪ್ರಶಸ್ತವು; ಆದರೂ ಇದೆಲ್ಲ ಪರಿವಾರವು ನಮ್ಮದೇ ಇರುವದರಿಂದ, ಅವರಿಗೂ ಈ ವಿಷಯವು ತಿಳಿಯಬೇಕಾದದ್ದೇ. (ಪ್ರಕಾಶ)ಗಿರಿಸಿಂಹಜೀ, ನನ್ನ ಮಾತನ್ನು ಕೇಳಿರಿ, ಎಂದು ನುಡಿದು, ಎಲ್ಲ ಸಂಗತಿಗಳನ್ನು ಹೇಳಿದನು; ಮತ್ತು ತನ್ನ ಸೈನಿಕರನ್ನು ಕುರಿತು ನುಡಿದನೇನಂದರೆ— "ಸರದಾರರೇ ಹಾಗು ದಂಡಾಳುಗಳೇ, ಅನೀತಿಯ ಜನರಿಂದ ಲೋಕದಲ್ಲಿ ಎಷ್ಟು ಅನರ್ಥವಾಗುತ್ತೆಂಬದನ್ನು ಪ್ರಸ್ತುತದ ಉದಾಹರಣೆಯಿಂದ ಧ್ಯಾನದಲ್ಲಿಡುವ ಹಾಗಿರುತ್ತದೆ. ಗಿರಿಸಿಂಹನ ತರುಣರಾಣಿಯು ದುರ್ಮಾರ್ಗ ಪ್ರವರ್ತಳಾಗಗದಿದ್ದರೆ, ಈತನಿಗೆ ಇಷ್ಟು ಬೇಗನೆ ಹೀಗೆ ಪರಾಧೀನನಾಗುವ ಪ್ರಸಂಗವು ಬರುತ್ತಿದ್ದಿಲ್ಲ. ಸ್ತ್ರೀಯರಾಗಲಿ, ಪುರುಷರಾಗಲಿ ನೀತಿಯ ಮಾರ್ಗದಿಂದ ನಡೆದರೆ, ಲೋಕದಲ್ಲಿ ಅವರ ಅಪ್ರತಿಷ್ಠೆಯು ಎಂದಿಗೂ ಆಗದು. ನಮ್ಮ ಯಶಸ್ಸು ಸ್ಥಿರವಾಗಿ ಉಳಿಯಬೇಕಾದರೆ, ನಾವು ನೀತಿಯನ್ನನುಸರಿಸಿ ನಡೆಯಲೇಬೇಕು. ಅದರಂತೆ ನಮ್ಮಲ್ಲಿ ಶೌರ್ಯವು ಜಾಗ್ರತವಾಗಿರಬೇಕಾದರೆ, ನಾವು ಪರಸ್ತ್ರೀಯರನ್ನು ಪಾಪದೃಷ್ಟಿಯಿಂದ ನೋಡಬಾರದು. ಈ ಬಗ್ಗೆ ನಾನು ನಿಮಗೆ ಮೇಲಿಂದ ಮೇಲೆ ನೆನಪು ಕೊಡುವದರ ಕಾರಣವನ್ನು ನೀವು ತಿಳಿದುಕೊಂಡಿರಬಹುದು. ಈ ದುರ್ಗದಲ್ಲಿ ನಮ್ಮ ಸೈನಿಕರಲ್ಲಿ ಯಾರಾದರೂ ಅತ್ಯಾಚಾರಗಳನ್ನು ನಡಿಸದಂತೆ, ಪ್ರತಿಯೊಬ್ಬರೂ ಜಾಗರೂಕರಾಗಿರಬೇಕು."

ಈ ಮೇರೆಗೆ ಸಮ್ರಾಟನು ಮಾತಾಡಿದ್ದನ್ನು ಕೇಳಿ, ಮಂತ್ರಿಮಂಡಲಕ್ಕೂ ಸರದಾರ ವರ್ಗಕ್ಕೂ ಆಶ್ಚರ್ಯವಾಯಿತು. ಯಾಕೆಂದರೆ ಪ್ರಸ್ತುತದ ಕೋಟೆಯು

ಕೈವಶವಾಗಲಿಕ್ಕೆ ಗಿರಿಸಿಂಹನ ತರುಣ ರಾಣಿಯು ಪಾಪಬುದ್ಧಿಯು ಕಾರಸ್ಥಾನವೇ ಕಾರಣವಾಯಿತೆಂಬದು ಅವರಿಗೆ ಈಗ ಗೊತ್ತಾಯಿತು. ಹೀಗೆ ಭೂವಡ ಸಮ್ರಾಟನ ಪರಿವಾರವು ಆಶ್ಚರ್ಯದಿಂದ ಸ್ತಂಭಿತವಾಗಿರಲು, ಗಿರಿಸಿಂಹನು ದುಃಖ-ಸಂತಾಪಗಳಿಂದ ನುಗ್ಗುನುಗ್ಗಾಗಿ ದನಿಯು ನಡುಗುತ್ತಿರಲು, ನುಡಿದನೇನಂದರೆ: "ಸಮ್ರಾಟನೇ, ನೀನು ನಿಜವಾಗಿಯೂ ದೈವಶಾಲಿಯಿರುತ್ತೀ; ಹಾಗಿಲ್ಲದಿದ್ದರೆ ದುರ್ವಿಚಾರಗಳು ಆವರಿಸಿ, ಸ್ವಲ್ಪ ದಿವಸಗಳಲ್ಲಿಯೇ ನಿನ್ನನ್ನು ತೇಜೋಹೀನನನ್ನಾಗಿ ಮಾಡಿ ಬಿಡುತ್ತಿದ್ದವು. ನಿನ್ನ ಉದಾತ್ತ ವಿಚಾರಗಳನ್ನೂ, ವಿಚಾರದಂತಿರುವ ಆಚರಣೆಗಳನ್ನೂ ತಿಳಿದು, ನಾನು ದುರ್ಗವನ್ನು ಕಳೆದುಕೊಂಡು ನಿನ್ನ ಮೇಲೆ ರುಷ್ಟನಾಗಿದ್ದರೂ, ಆ ರುಷ್ಟತೆಯನ್ನು ನೀಗಲಾಡಿ, ನಿನಗೆ ಸಂತೋಷದಿಂದ ಮಂಗಲಾಶೀರ್ವಾದವ ಮಾಡುತ್ತೇನೆ. ಇನ್ನು ನನ್ನ ದುರ್ದೈವದಿಂದ ದುರ್ಗವು ಕೈ ಬಿಡುವದಕ್ಕೆ ನನ್ನ ರಾಣಿಯೇ ಕಾರಣಳಾದಳೆಂಬದನ್ನು ಕೇಳಿ, ನನಗೆ ಅಪರಿಮಿತ ಸಂತಾಪವಾಗುತ್ತಿದ್ದರೂ, ಅದರ ಪ್ರಾಯಶ್ಚಿತ್ತವನ್ನು ನಾನೇ ಹೊಂದಬೇಕಲ್ಲದೆ, ಆ ಸ್ತ್ರೀಯ ಮೇಲೆ ಸಿಟ್ಟಾಗಿ ಪ್ರಯೋಜನವಿಲ್ಲ. ಯಾಕಂದರೆ ಆಕೆಯನ್ನು ಲಗ್ನವಾಗಿ ನಾನೇ ದಡ್ಡತನ ಮಾಡಿರುವೆನು. ಸಭಿಕರೇ, ನೋಡಿದಿರಾ, ನನ್ನ ಮೂರ್ಖತನವನ್ನು! ವೃದ್ಧಾಪ್ಯದಲ್ಲಿ ಯಾರಾದರೂ ಲಗ್ನ ಮಾಡಿಕೊಂಡರೆ, ನನ್ನ ಹಾಗೆ ವಿಪತ್ತಿಗೆ ಗುರಿಯಾಗುವದೇ ಸರಿ! ಇದರಲ್ಲಿ ಗಂಡಸರಾದ ನಮ್ಮ ತಪ್ಪೇ ಹೊರತು, ಸ್ತ್ರೀಯರ ತಪ್ಪಿಲ್ಲೆಂದು ಹೇಳಬಹುದು. ನಾನು ಆ ವಿಮಲೆಯನ್ನು ಈ ರೀತಿಯಾಗಿ ನರಕಭಾಜನಳನ್ನಾಗ ಮಾಡಿ ಮಹತ್ಪಾಪವ ಕಟ್ಟಿಕೊಂಡೆನು. ನಾನೇ ಅವಳ ಪಾಣಿಗ್ರಹಣ ಮಾಡದಿದ್ದರೆ, ಇಂಥ ಪಾಪ ಕೃತ್ಯಕ್ಕೆ ಅವಳಾದರೂ ಎಲ್ಲಿ ಮನಸ್ಸು ಮಾಡುತ್ತಿದ್ದಳು? ಹಾಯ್-ಹಾಯ್! ಎಂಥ ಮೂರ್ಖತನ ಮಾಡಿದೆನಲ್ಲ? ಶಿವ-ಶಿವ! ಇನ್ನು ಮಿಡುಕಿ ಫಲವಿಲ್ಲ...."

ಈ ಮೇರೆಗೆ ವೃದ್ಧ ಗಿರಿಸಿಂಹನು ಮಾತಾಡುತ್ತಿರಲು, ಅವನಿಗೆ ಅನಿವಾರವಾದ ದುಃಖವಾಯಿತು. ಕಂಠವು ಬಿಗಿದು ಬರಲು, ಅವನು ಮುಂದೆ ಮಾತನಾಡುವದನ್ನು ನಿಲ್ಲಿಸಿ ಅಧೋವದನನಾಗಿ ಕುಳಿತನು. ಬಳಿಕ ಸಮ್ರಾಟನು ಅವನನ್ನು ಸಂತೈಸುವದಕ್ಕಾಗಿ ಸಭೆಯನ್ನು ಬರಖಾಸ್ತಗೊಳಿಸಿ, ಆತನೊಡನೆ ದಿವಾಣಖಾನೆಗೆ ನಡೆದನು ಆಗ ವಂದಿಗಳು ಸಮ್ರಾಟನ ಜಯ-ಜಯಕಾರವನ್ನು ಮಾಡಿದರು.

ಬಳಿಕ ಮಧ್ಯಾಹ್ನದಲ್ಲಿ ಸಮ್ರಾಟನು ಗಿರಿಸಿಂಹನ ಅಂತಃಪುರದ ಜನರ ಯೋಗಕ್ಷೇಮವನ್ನು ವಿಚಾರಿಸಿದನು; ಮತ್ತು ಗಿರಿಸಿಂಹನ ಮುಖಾಂತರವಾಗಿಯೇ ಅವರ ಸಮಾಧಾನವನ್ನು ಮಾಡಿದನು; ಆದರೆ ವಿಮಲೆಯು ಮಾತ್ರ ಎತ್ತ ಹೋದ

ಳೆಂಬುದು ಗೊತ್ತಾಗಲಿಲ್ಲ. ಗಿರಿಸಿಂಹನೂ ಸಮ್ರಾಟನೂ ಸೇರಿ ರಾಣೀವಾಸವನ್ನೆಲ್ಲ ಶೋಧಿಸಿ ನೋಡಿ ಆಶ್ಚರ್ಯಚಕಿತರಾದರು. ವಿಮಲೆಯು ಮಹಾಸಾಹಸಿಯಿರುವಳೆಂಬ ಮಾತಿನ ಅನುಭವವು ಗಿರಿಸಿಂಹನಿಗೂ ಬಂದು ಹೋಯಿತು. ಅನಂತರ ಗಿರಿಸಿಂಹನನ್ನು ರಾಣೀವಾಸದಲ್ಲಿಯೇ ಬಿಟ್ಟುಕೊಟ್ಟು, ಸಮ್ರಾಟನು ತನ್ನ ದಿವಾಣಖಾನೆಗೆ ಬಂದು, ಮುಂದಿನ ವಿಚಾರವನ್ನು ಮನಸ್ಸಿನಲ್ಲಿ ಯೋಚಿಸುತ್ತ ಕುಳಿತುಕೊಂಡನು. ಗಿರಿಸಿಂಹನು ಮಾಂಡಲಿಕನಾಗಿ ಪಾವಗಡದ ಕಿಲ್ಲೆಯ ಮೇಲೆ ಆಧಿಪತ್ಯವನ್ನು ನಡಿಸಿಕೊಂಡಿರಲು ಒಪ್ಪಿಕೊಳ್ಳದ್ದರಿಂದ, ಆ ಕೆಲಸಕ್ಕೆ ಯಾರನ್ನು ನಿಯಮಿಸಬೇಕೆಂದೂ, ಮುಂದೆ ಯಾವ ದುರ್ಗಕ್ಕೆ ಮುತ್ತಿಗೆ ಹಾಕಬೇಕೆಂದೂ ಸಮ್ರಾಟನು ಯೋಚಿಸಿ ನೋಡಿದನು. ಈಗಿನಂತೆ ಆಗಿನ ಕಾಲದಲ್ಲಿ ನಕ್ಷೆ ಮೊದಲಾದ ಸಾಧನಗಳಿಲ್ಲದ್ದರಿಂದ, ಇಂಥ ಕಿಲ್ಲೆಯು ಇಂಥಲ್ಲಿಯೇ ಇರುವದೆಂಬುದೂ, ಇಂತಿಷ್ಟೇ ಅಂತರದ ಮೇಲಿರುವದೆಂಬುದೂ ತಿಳಿಯುವದಕ್ಕೆ ಸಾಧ್ಯವಿದ್ದಿಲ್ಲ. ಈ ಎಲ್ಲ ಸಂಗತಿಗಳು ಗುಪ್ತಚಾರರನ್ನೇ ಅವಲಂಬಿಸಿಕೊಂಡಿದ್ದವು. ಚರರೇ ನೇತ್ರಗಳಾಗಿದ್ದರು; ಅವರೇ ಮಂತ್ರಾಲೋಚಕರಾಗಿದ್ದರು; ಚರರು ಸೂಚಿಸಿದ ಮೇರೆಗೆ ರಾಜರು ತಮ್ಮ ಯೋಜನೆಯನ್ನು ತಿರುಗಿಸಬೇಕಾಗುತ್ತಿತ್ತು. ಇಂಥ ಜವಾಬದಾರಿಯನ್ನು ಹೊರುವದಕ್ಕೆ ಚರರಾದರೂ ಸಮರ್ಥರಿರುತ್ತಿದ್ದರು. ಅವರಿಗೆ ರಾಜಕಾರಣಗಳೆಲ್ಲವೂ ಅವಗತವಿರುತ್ತಿದ್ದವು. ಶತ್ರುಗಳ ಹೊಟ್ಟೆಯಲ್ಲಿ ಹೊಕ್ಕು, ಬೆನ್ನಲ್ಲಿ ಹೇಗೆ ಬಿರಿಯಬೇಕೆಂಬ ತಂತ್ರವಿದ್ಯೆಗಳಲ್ಲಿ ಅವರು ನಿಷ್ಣಾತರಿರುತ್ತಿದ್ದರು. ಬಹಳ ಹೇಳುವದೇನು? ಅವರು ಚಿಕ್ಕ ಮುತ್ಸದ್ದಿಗಳೋಪಾದಿಯಲ್ಲಿರುತ್ತಿದ್ದರು. ಇರಲಿ. ಈ ದಿನ ಭೂವಡನು ಯೋಚಿಸಿ ಬೇಸತ್ತು, ಗುರ್ಜರ ದೇಶದಲ್ಲಿಯ ವೃತ್ತಾಂತವನ್ನು ತಿಳಿದುಕೊಂಡು ಬರುವದಕ್ಕೆ ಹೋದ ಚಾರರು ಇನ್ನೂ ಏಕೆ ತಿರುಗಿ ಬಂದಿರಲಿಕ್ಕಿಲ್ಲ? ಎಂದು ಚಿಂತಿಸಲಾರಂಭಿಸಿದನು. ಯಾಕಂದರೆ ಚಾರರಿಂದ ಸುದ್ದಿಗಳನ್ನು ತಿಳಿಯದ ಹೊರತು, ಮುಂದೇನು ಮಾಡಬೇಕೆಂಬದನ್ನು ನಿರ್ಧರಿಸುವ ಹಾಗಿದ್ದಿಲ್ಲ. ಹೀಗೆ ಸಮ್ರಾಟನು ಚಿಂತೆಗೊಳಗಾಗಿರಲು, ದ್ವಾರರಕ್ಷಕನು ಬಂದು ನೆಲಮುಟ್ಟಿ ಮುಜುರೆ ಮಾಡಿ: "ಸರಕಾರ! ಉತ್ತರ ದಿಕ್ಕಿಗೆ ಹೋದ ಚಾರರಿಬ್ಬರು ಅವಸರ ಕೆಲಸವಿದೆಯೆಂದು ನುಡಿಯುತ್ತ, ದರ್ಶನ ಸಮಯವನ್ನು ಕಾಯುತ್ತಿರುವರು" ಎಂದು ಬಿನ್ನೈಸಿಕೊಂಡನು. ಅದೇ ವಿಷಯವನ್ನೇ ಯೋಚನೆ ಮಾಡುತ್ತಿದ್ದ ಸಮ್ರಾಟನಿಗೆ ಆ ಮಾತಿನಿಂದ ಅತ್ಯಂತ ಆನಂದವಾದದ್ದರಲ್ಲಿ ಆಶ್ಚರ್ಯವಿಲ್ಲ. ಆತನು ಆ ಕೂಡಲೆ ಆ ದ್ವಾರರಕ್ಷಕನಿಗೆ ಚಾರರನ್ನು ಒಳಗೆ ಬಿಡಲು ಅಪ್ಪಣೆ ಮಾಡಿದನು.

ಪರಕ್ಷಣದಲ್ಲಿ ಚರರು ಒಳಗೆ ಬಂದು, ಸಮ್ರಾಟನ ಆನಂದವನ್ನು

ಹೆಚ್ಚಿಸಿದರು. ಅವರನ್ನು ಸಮೀಪಕ್ಕೆ ಕುಳ್ಳಿರಿಸಿಕೊಂಡ ಭೂವರನು ಯಾವ ಯಾವ ದುರ್ಗದಲ್ಲಿ ಹೇಗೆ-ಹೇಗೆ ರಾಜಕಾರಣವಿರುವದೆಂದು ಪ್ರಶ್ನೆ ಮಾಡತೊಡಗಿದನು. ಆಗ ಒಬ್ಬ ಚರನು ಅತ್ಯಂತ ಉತ್ಸಾಹದಿಂದ: "ಸಾರ್ವಭೌಮನೇ, ಇನ್ನು ಮುಂದೆ ವಿಶೇಷ ಆಯಾಸವಿಲ್ಲದೆ ಇಡಿ ಗುರ್ಜರ ರಾಷ್ಟ್ರವೇ ನಮ್ಮ ಕೈವಶವಾಗುವ ಹಾಗಿದೆ. ಮುಖ್ಯವಾಗಿ ರಾಷ್ಟ್ರದಲ್ಲಿ ಪರಸ್ಪರರಲ್ಲಿ ಐಕ್ಯವಿಲ್ಲ. ಯಾರಲ್ಲಿಯೂ ನೀತಿಯಿಲ್ಲ. ಇಲ್ಲಿಯ ದುರ್ಗಾಧಿಪತಿಗಳ ಅನನ್ವಿತ ಕೃತ್ಯಗಳಿಂದ ಎಷ್ಟೋ ಜನ ಪತಿವ್ರತೆಯರು ಗೋಳಿಡುತ್ತಿರುವರು. ಅವರು ಹಲವು ಬಗೆಯಿಂದ ಶಾಪವ ಕೊಡುತ್ತಿರುವರು. ಅವರ ಶಾಪದಿಂದ ದಗ್ಧರಾದ ಆ ಸಂಸ್ಥಾನಿಕ ಹಾಗು ದುರ್ಗಾಧಿಪತಿಗಳು ನಿಸ್ತೇಜರಾಗಿರುವರು. ಅವರಲ್ಲಿ ಸ್ವಜನ ಬಲವಿಲ್ಲ; ದೈವೀಬಲವಿಲ್ಲ. ಇಂಥ ಸ್ಥಿತಿಯಲ್ಲಿ ಪ್ರಬಲ ಶತ್ರುವು ಗಂಟು ಬಿದ್ದರೆ, ಅವರು ಕ್ಷಣದಲ್ಲಿ ಹೇಳಹೆಸರಿಲ್ಲದೆ ಹೋಗುವರು. ಇದಂತಿರಲಿ. ಈಗ ಮುಖ್ಯವಾಗಿ ಹೇಳತಕ್ಕ ಇನ್ನೊಂದು ಮಹತ್ವದ ಸಂಗತಿಯೆಂದರೆ: ಕಿರುಮಂಜೀ ಎಂಬ ದುರ್ಗದಲ್ಲಿ ಅಲ್ಲಿಯ ವಿಷಯಲಂಪಟನಾದ ಅಧಮ ಸಂಸ್ಥಾನಿಕನೊಬ್ಬನು ಒಬ್ಬ ತರುಣಿಯನ್ನು ಸೆರೆಯಲ್ಲಿರಿಸಿರುವನು. ಆ ತರುಣಿಯ ಅಪೇಕ್ಷೆಯನ್ನು ಇನ್ನೂ ಎಷ್ಟೋ ಜನ ಸಂಸ್ಥಾನಿಕರು ಮಾಡುತ್ತಿರುವದರಿಂದ, ಅವರೆಲ್ಲರೂ ಆಕೆಯನ್ನು ಸೆರೆಯಲ್ಲಿರಿಸಿದ ಸಂಸ್ಥಾನಿಕನ ಮೇಲೆ ವಿಷವನ್ನು ಕಾರುತ್ತಿರುವರು. ಇನ್ನೊತ್ತಿನಿಂದ ೧೫ ದಿವಸಗಳಲ್ಲಿ ಕಿರುಮಂಜೆಕಿಲ್ಲೆಯ ಮೇಲೆ ಸ್ವಾರೀಮಾಡಿ, ಆ ತರುಣಿಯನ್ನು ಬಿಡಿಸಬೇಕೆಂದು ಇಲ್ಲಿಯ ಸಂಸ್ಥಾನಿಕರೂ ನಿಶ್ಚಯ ಮಾಡಿರುವರೆಂದು ಕೇಳಿರುತ್ತೇನೆ. ಒಂದುವೇಳೆ ಆ ತರುಣಿಯ ಬಿಡುಗಡೆಯನ್ನು ಅವರು ಮಾಡಿದರೂ, ಮುಂದೆ ಅವಳ ವಿಷಯವಾಗಿ ಪರಸ್ಪರರಲ್ಲಿ ಕದನವೆಸಗುವದು ಸ್ವಾಭಾವಿಕವಾಗಿದೆ. ಆದ್ದರಿಂದ ಈ ಸಮಯವನ್ನು ಸಾಧಿಸಿ ನಾವು ಕಿರುಮಂಜಿಕೋಟೆಯನ್ನು ಮುತ್ತಿದರೆ, ಅನಾಯಾಸವಾಗಿ ಗುರ್ಜರಭೂಪತಿಗಳೆಲ್ಲರೂ ಹಸ್ತಗತರಾಗುವದರಿಂದ, ನಮ್ಮ ಕೆಲಸವು ಒಮ್ಮೆಲೆ ಕೈಗೂಡುವದು. ತಿಳಿದ ಸಂಗತಿಯನ್ನು ಸನ್ನಿಧಿಯಲ್ಲಿ ಬಿನ್ನೈಸಿಕೊಂಡಿದ್ದೇನೆ. ದಿವ್ಯಚಿತ್ತಕ್ಕೆ ತೋಚಿದಂತೆ ಅಪ್ಪಣೆ ಕೊಡಿಸುವದಾಗಬೇಕು." ಎಂದು ನುಡಿದು ಸುಮ್ಮನಾದನು. ಬಳಿಕ ಸಮ್ರಾಟನು ಅವರಿಂದ ತಿಳಕೊಳ್ಳತಕ್ಕ ಸಂಗತಿಗಳನ್ನು ತಿಳಿದುಕೊಂಡು ಅವರಿಗೆ ಅಪ್ಪಣೆ ಕೊಟ್ಟು, ಚರರು ಹೇಳಿದ ಅಂಶವನ್ನು ವಿಚಾರಿಸತೊಡಗಿದನು. ಆಗ ಅವನಿಗೆ ಒಂದು ಯುಕ್ತಿಯು ತೋಚಿತು. ಅಕಸ್ಮಾತ್ತಾಗಿ ಹೊಳೆದ ಆ ಯುಕ್ತಿಯಿಂದ ಆತನ ಮಹತ್ವಾಕಾಂಕ್ಷೆಯು ಕುಡಿಯಿಟ್ಟಿತು. ಅದೇ ಯೋಚನೆಯಲ್ಲಿಯೇ ಅವನು ಬಹಳ ಹೊತ್ತು ಕಳೆದನು.

## ೭ ಆಶ್ಚರ್ಯಕರ ನೋಟ!

ನಿರಭ್ರವಾದ ಆಕಾಶವು; ಚಂದ್ರನ ಪ್ರಕಾಶವು ಧರಿತ್ರಿಯನ್ನು ಬೆಳಗುತ್ತಲಿದೆ. ಪಶ್ಚಿಮದಿಕ್ಕಿನ ತಂಗಾಳಿಯು ಬೀಸಹತ್ತಿದ್ದರಿಂದ, ಶ್ರಾಂತಗೊಂಡ ಪ್ರಾಣಿಗಳು ಸುಖಹೊಂದುತ್ತಲಿವೆ. ರಾತ್ರಿಯು ಬಹಳವಾದ್ದರಿಂದ, ಸರ್ವತ್ರದಲ್ಲಿಯೂ ಶಾಂತತೆಯ ಸಾಮ್ರಾಜ್ಯವು ನೆಲೆಗೊಂಡಿರುತ್ತದೆ. ಈ ಅತಿಪ್ರಶಾಂತತೆಯಿಂದ ಸೃಷ್ಟಿಯಲ್ಲಿ ಒಂದುಬಗೆಯ ರೌದ್ರತೆಯು ಉತ್ಪನ್ನವಾಗಿತ್ತು; ಅದರಲ್ಲಿಯೂ ವಿಶೇಷವಾಗಿ ಗಂಗಕಾಸಾರದಲ್ಲಿಯ ರೌದ್ರತೆಯು ವರ್ಣನೆಯನ್ನು ಮೀರಿತ್ತು. ಆ ಸರೋವರದ ಸುತ್ತುಮುತ್ತು ದಟ್ಟವೃಕ್ಷಗಳು ಗಗನಚುಂಬಿತವಾಗಿ ಬೆಳೆದಿದ್ದು, ಅವುಗಳ ಪಡಿನೆಳಲು ಸರೋವರದ ಅಂತರಂಗವನ್ನು ಕೂಡಾ ಈ ವೃಕ್ಷಸಮೂಹವು ವ್ಯಾಪಿಸಿರುವದೇನೋ ಎಂಬ ಹಾಗೆ ನೀರಿನಲ್ಲಿ ಬಿದ್ದಿತ್ತು; ಹಾಗು ದಂಡೆಗುಂಟ ಇರುವ ಆ ವೃಕ್ಷಗಳ ನೆಳಲಿನಿಂದ ಸರೋವರದ ಸುತ್ತಲೂ ಕಪ್ಪು ಬಣ್ಣವನ್ನು ಚಲ್ಲಿದಂತೆ ಭಾಸವಾಗುತ್ತಿತ್ತು. ಮಧ್ಯದಲ್ಲಿ ವಿಶಾಲವಾದ ನೀರಿನಲ್ಲಿ ಚಂದ್ರನ ಕಿರಣಗಳು ಬಿದ್ದದರಿಂದ, ಮಿಂಚುವ ತೆರೆಗಳೂ ಸುತ್ತಲಿನ ಕಪ್ಪುಛಾಯೆಯೂ ನೋಡುವವರಲ್ಲಿ ಭಯವನ್ನುಂಟು ಮಾಡುತ್ತಿದ್ದವು. ಆ ನಿರ್ಜನಪ್ರದೇಶದಲ್ಲಿ ಹಗಲು ಹೊತ್ತಿನಲ್ಲಿ ಕೂಡಾ ಮಾನವ ಪ್ರಾಣಿಗಳು ಸಂಚರಿಸುತ್ತಿದ್ದಿಲ್ಲ; ಅದರಲ್ಲಿಯೂ ಆ ಪ್ರದೇಶದಲ್ಲಿ ಭೂತ-ಪಿಶಾಚಿಗಳಿರುವವೆಂದು ಸುದ್ದಿ ಹಬ್ಬಿದ್ದರಿಂದ, ಎಂಥ ಪ್ರಸಂಗ ಬಂದರೂ ಒಂದು ನರಪ್ರಾಣಿಯೂ ಅಲ್ಲಿ ಸುಳಿಯುತ್ತಿದ್ದಿಲ್ಲ; ಬಹಳ ಹೇಳುವದೇನು? ಅಡವಿಯ ಕಾಡುದನಗಳ ಹಾಗು ವನ್ಯಕ್ರೂರ ಪಶುಗಳ ಹೊರತು, ಮಿಕ್ಕ ಯಾವ ಪ್ರಾಣಿಗಳೂ ಅಲ್ಲಿಗೆ ಬರುತ್ತಿದ್ದಿಲ್ಲ. ಇದರಿಂದ ಆ ಪ್ರದೇಶವು ವಿಶೇಷ ರೌದ್ರತೆಯನ್ನು ತಳೆದಿತ್ತು.

ಇಂಥ ರೌದ್ರತೆಯ ಆ ಪ್ರದೇಶದಲ್ಲಿ, ಅದರಲ್ಲಿಯೂ ಆ ಸರೋವರದ ಸೊಗಸಾದ ಪಾವಟಿಗೆಗಳ ಮೇಲೆ ಒಂದು ವ್ಯಕ್ತಿಯು ನಿಶ್ಶಂಕೆಯಿಂದ ಕುಳಿತುಕೊಂಡಿತ್ತು. ಆ ವ್ಯಕ್ತಿಯು ತೀರ ನೀರ ಸಮೀಪಕ್ಕೆ ಕುಳಿತುಕೊಂಡಿದ್ದು, ಎರಡೂ ಕಾಲುಗಳು ನೀರಲ್ಲಿ ಇಳಿಬಿಡಲ್ಪಟ್ಟಿದ್ದವು. ತಾವರೆ ಹಾಗು ಕಮಲಗಳ ಬಳ್ಳಿಗಳು ಆ ನೀರಿನಲ್ಲಿ ದಟ್ಟವಾಗಿ ಬೆಳೆದದ್ದರಿಂದ, ಪಾವಟಿಗೆಯ ಮೇಲೆ ಕುಳಿತ ಆ ವ್ಯಕ್ತಿಯು ಕಾಲುಗಳನ್ನು ಚಾಚಿ, ಆ ಬಳ್ಳಿಗಳನ್ನು ತನ್ನ ಕಡೆಗೆ ಜಗ್ಗಿಕೊಂಡು, ಬಳಿಕ ಎರಡೂ ಕೈಗಳಿಂದ ಬಳ್ಳಿಯನ್ನು ಮೇಲಕ್ಕೆತ್ತಿ ಅದರಲ್ಲಿ ಅದೇ ಅರಳಿ ಗಂಧವನ್ನು ಬೀರುವ ಪುಷ್ಪಗಳನ್ನು ಕಿತ್ತುಕೊಂಡು ಬಳ್ಳಿಯನ್ನು

ಹರಿದೊಗೆಯುತ್ತಿತ್ತು. ಹಾ-ಹಾ ಅನ್ನುವಷ್ಟರಲ್ಲಿ ಆ ವ್ಯಕ್ತಿಯ ಬಳಿಯಲ್ಲಿ ಕಮಲ-ಪುಷ್ಪಗಳ ರಾಶಿಗೆ-ರಾಶಿಯೇ ಬಿದ್ದಿತು. ಪುಷ್ಪಗಳನ್ನು ಹರಿದುಕೊಳ್ಳುವದೂ, ಬಳ್ಳಿಯನ್ನು ಹರಿದೊಗೆಯುವದೂ ಆ ವ್ಯಕ್ತಿಯ ಕೆಲಸಗಳಾಗಿದ್ದವು. ಇವುಗಳಲ್ಲಿಯೇ ಆ ವ್ಯಕ್ತಿಯು ತಲ್ಲೀನವಾಗಿ ಹೋಗಿತ್ತು. ಸರೋವರದ ಆ ಭೀಕರ ಸ್ಥಿತಿಯಾಗಲಿ, ಬೇರೆ ಯಾವ ಭೀತಿಯ ಕಾರಣಗಳಾಗಲಿ ಆ ವ್ಯಕ್ತಿಯ ಮನಸ್ಸಿಗೆ ಸ್ವಲ್ಪಾದರೂ ಅಂಟಿಕೊಂಡಿದ್ದಿಲ್ಲವೆಂದು ಆ ಕಾಲದ ಆ ವ್ಯಕ್ತಿಯ ಈ ಸ್ವಚ್ಛಂದವೃತ್ತಿಯ ಕ್ರೀಡೆಯಂ ನೋಡುವವರಿಗೆ ತಟ್ಟನೆ ಹೊಳೆಯಬಹುದಾಗಿತ್ತು.

ನೋಡನೋಡುವಷ್ಟರಲ್ಲಿ ಆ ವ್ಯಕ್ತಿಯು ಕುಳಿತ ಸ್ಥಳದಿಂದೆದ್ದು ನಿಂತು ಸುತ್ತಲೂ ನೋಡಿ, ಪುನಃ ಪೂರ್ವವತ್ ಕುಳಿತುಕೊಂಡಿತು. ಈಗ ಮಾತ್ರ ಆ ವ್ಯಕ್ತಿಯು ಕಮಲದ ಬಳ್ಳಿಯನ್ನು ಹರಿದೊಗೆಯುವ ಉದ್ಯೋಗವನ್ನು ಬಿಟ್ಟು, ಒಂದು ಸೊಗಸಾದ ಮೃಣಾಲತಂತುವಿನಿಂದ ಹರಿದ ಪುಷ್ಪಗಳ ಮಾಲೆಯನ್ನು ಕಟ್ಟಲಾರಂಭಿಸಿತು. ಕೆಲವು ನಿಮಿಷಗಳು ಕಳೆಯುತ್ತಿರಲು, ಮಾಲೆಯೂ ಕಟ್ಟಿ ಸಿದ್ಧವಾಯಿತು. ಬಳಿಕ ವ್ಯಕ್ತಿಯು ಮಾಲೆಯು ಹೇಗಾಗಿರುವದೆಂದು ಚನ್ನಾಗಿ ಹಿಡಿದು ನೋಡಿ, ಅದನ್ನೊಂದು ವಿಶಾಲವಾಗ ಕಮಲಪತ್ರದಲ್ಲಿರಿಸಿ, ಒಮ್ಮೆಲೆ ನೀರಲ್ಲಿ ಸಾಗರ ಬಿದ್ದಿತು. ನೋಡನೋಡುವಷ್ಟರಲ್ಲಿ ವ್ಯಕ್ತಿಯು ನೀರಲ್ಲಿ ಮುಳುಗಿತು. ಕೆಲ ನಿಮಿಷಗಳವರೆಗೆ ಮುಳುಗಿದ ಆ ವ್ಯಕ್ತಿಯು ಮೇಲಕ್ಕೇಳಲೇ ಇಲ್ಲ. ಅಷ್ಟರಲ್ಲಿ ನೀರಲ್ಲಿ ತೊಯ್ದು ತಪ್ಪಡಿಯಾದ ಆ ವ್ಯಕ್ತಿಯು ಮೇಲಕ್ಕೆದ್ದು, ಮೆಟ್ಟಿಲುಗಳ ವರೆಗೆ ಬಂದು, ವಿಶಾಲವಾದ ಒಂದು ಪರಸುಗಲ್ಲಿನ ಮೇಲೆ ಎದ್ದು ನಿಂತಿತು; ಮತ್ತು ಉಟ್ಟುಕೊಂಡಿದ್ದ ವಸ್ತ್ರದಲ್ಲಿಯ ನೀರು ಹಾಗೇ ಇಳಿಯುತ್ತಿರಲು, ಬೊಗ್ಗಿ ಮಾಲೆಯನ್ನು ತಕ್ಕೊಂಡು ಒತ್ತರದಿಂದ ಪಾವಟಿಗೆಗಳನ್ನೇರಿ ಮೇಲಕ್ಕೆ ಬಂದಿತು. ಆ ಸರೋವರದ ದಂಡೆಯ ಮೇಲೆ ಒಂದು ವಿಶಾಲವಾದ ದುರ್ಗಾಂಬಿಕೆಯ ದೇವಾಲಯವಿತ್ತು. ಜನರು ಸುಳಿಯದ್ದರಿಂದಲೂ, ಪೂಜಾಪುನಸ್ಕಾರಗಳು ಇಲ್ಲದ್ದರಿಂದಲೂ, ಕಣ್ಣುಕಪ್ಪಡಿಗಳ ಮಲದ ವಾಸನೆ ಮೊದಲಾದವುಗಳಿಂದಲೂ ಆ ಗುಡಿಯು ದುರ್ಗಂಧಮಯವಾಗಿತ್ತು. ಗುಡಿಯು ಭವ್ಯವೂ ಸುಂದರವೂ ಆಗಿದ್ದು, ಒಂದಾನೊಂದು ಕಾಲದಲ್ಲಿ ಅನುಭವಿಸಿದ ವೈಭವದ ಗುರುತನ್ನು ಬೈಲಿಗಿಡುತ್ತಿತ್ತು. ಅದರ ಸುತ್ತಲೂ ವಿಶಾಲವಾದ ಬೈಲು ಪ್ರದೇಶವಿದ್ದು, ಈಗ ಕಿರಿಗಂಟಿಗಳು ಬೆಳೆದು ನೋಡುವವರಿಗೆ ಭಯವನ್ನುಂಟು ಮಾಡುತ್ತಿದ್ದವು. ಸರೋವರದಿಂದ ಮೇಲೆ ಬಂದ ಆ ವ್ಯಕ್ತಿಯು, ನೆಟ್ಟಗೆ ಆ ಗುಡಿಗೆ ಬಂದಿತು. ಗುಡಿಯಲ್ಲಿ ದೀಪವಿಲ್ಲ; ಧೂಪವಿಲ್ಲ. ಕತ್ತಲುಗವಿದಿತ್ತು. ಬಾಗಿಲಫಡಕುಗಳು ಮುರಿದು ಹೋದದ್ದರಿಂದ ಸರ್ವದಾ ಮುಕ್ತದ್ವಾರವಾಗಿತ್ತು.

ವ್ಯಕ್ತಿಯು ಗುಡಿಯಲ್ಲಿ ಪ್ರವೇಶ ಮಾಡಲು, ಒಳಗೆ ಯಾರೋ ಗುಣು-ಗುಣು ಮಾತಾಡುತ್ತಿರುವದು ಕೇಳಿಸಿತು. ಕೂಡಲೆ ಆ ವ್ಯಕ್ತಿಯು ಬೆಟ್ಟಿಬಿದ್ದು, ಸುತ್ತಲೂ ಕಿವಿಗೊಟ್ಟು ಕೇಳಿತು. ಬಳಿಕ ಆ ವ್ಯಕ್ತಿಯು ಧೈರ್ಯವನ್ನು ತಂದು ಕೊಂಡು: "ಯಾರವರು ಒಳಗೆ? ಇಂಥ ಕಟ್ಟಡವಿಯ ಗುಡಿಯಲ್ಲಿ, ಅದರಲ್ಲಿಯೂ ಇಷ್ಟು ರಾತ್ರಿಯಲ್ಲಿ ಇಲ್ಲಿ ನಿಮ್ಮ ಕೆಲಸವೇನು?" ಎಂದು ಒಮ್ಮೆಲೆ ನುಡಿಯಲು, ಮೊದಮೊದಲು ಒಳಗಿನವರು ಅಂಜಿದರು; ಆದರೂ ಧ್ವನಿಯು ಮಂಜುಳವಾಗಿ ಇದ್ದದರಿಂದಲೂ, ಅದರಲ್ಲಿ ದನಿಯು ಗುರುತು ಚನ್ನಾಗಿ ಹತ್ತಿದ್ದರಿಂದಲೂ ಅವರು ಭೀತಿಯನ್ನು ತೊರೆದು, ಕುಳಿತ ಸ್ಥಳದಿಂದ ಎದ್ದು ಬಂದು:— "ಯಾರು? ವಿಮಲೆ, ಇಷ್ಟು ರಾತ್ರಿಯಲ್ಲಿ ನೀನೆಲ್ಲಿಂದ ಬಂದೆ?" ಎನಲು, ವಿಮಲೆಯು ಗೊಂದಲದಲ್ಲಿ ಬಿದ್ದಳು. ಆ ಗಾಢಾಂಧಃಕಾರದಲ್ಲಿ ಒಬ್ಬರ ಮೋರೆಯು ಮತ್ತೊಬ್ಬರಿಗೆ ಕಾಣಿಸುತ್ತಿರಲಿಲ್ಲ. ಆದ್ದರಿಂದ ನನ್ನ ಗುರುತು ಹಿಡಿದು ಹೆಸರುಗೊಂಡು ಕರೆದ ಇವರು ಯಾರಾಗಿರಬಹುದೆಂದು ಅವಳು ಬಹಳ ಯೋಚಿಸಿ ನೋಡಿದಳು. ಆದರೂ ಅವಳಿಗೆ ಅದರ ಅಂತವು ಹತ್ತಡಾಯಿತು. ಆಗ ಅವಳು ವಿಸ್ಮಯಸೂಚಕ ಸ್ವರದಿಂದ ನುಡಿದಳೇನಂದರೆ:— "ಕೇವಲ ದನಿಯು ಗುರುತಿನಿಂದಲೇ ನೀವು ನನ್ನ ಹೆಸರುಗೊಂಡು ಕರೆದಿರಿ; ಆದರೆ ನಿಮ್ಮ ಗುರುತು ಮಾತ್ರ ನನಗೆ ಹತ್ತಲಿಲ್ಲ ನನ್ನನ್ನು ಇಷ್ಟು ಸಲಿಗೆಯಿಂದ ಮಾತಾಡಿಸುವ ನೀವಾರು?"

ಈ ಪ್ರಕಾರ ವಿಮಲೆಯು ಮಾತಾಡುತ್ತಿರಲು ಒಬ್ಬನು ಚಕಮಕಿಯನ್ನು ಕಟಿದು ಬೆಂಕಿಯನ್ನು ಸಿದ್ಧಗೊಳಿಸಿ, ಅದರಿಂದ ಸ್ವಲ್ಪ ಬೆಳಕನ್ನುಂಟುಮಾಡಿದನು. ಆ ಬೆಳಕಿನಲ್ಲಿ ವಿಮಲೆಯ ಮೈಮೇಲಿನ ಸೀರೆಕುಪ್ಪಸಗಳು ತೊಯ್ದು ತಪ್ಪಡಿಯಾಗಿ, ಅವುಗಳಿಂದ ನೆಲದಮೇಲೆ ನೀರಿಳಿಯುತ್ತಿರುವದೆಂದು ಕಂಡು ಬರಲು, ಅವರು ಮತ್ತಿಷ್ಟು ಉತ್ಸುಕತೆಯಿಂದ: 'ವಿಮಲಾ, ಪ್ರಿಯ ವಿಮಲಾ, ಗಾಬರಿಯಾಗುವಿಯೇನು? ನಮ್ಮ ವಿಷಯವಾಗಿ ಅನ್ಯಥಾ ತಿಳಿಯಬೇಡ. ಈಗ ನಮ್ಮ ಪರಿಚಯವನ್ನು ಮಾಡಿಕೊಳ್ಳುವದರಿಂದ ನಿನಗಾವ ಪ್ರಯೋಜನವೂ ಇಲ್ಲ. ಮುಖ್ಯವಾಗಿ ತಿಳಿಸತಕ್ಕದ್ದೇನಂದರೆ: ನಾವು ನಿನ್ನ ಆಪ್ತಕೋಟಿಯಲ್ಲಿ ಸೇರಿದವರಿರುತ್ತೇವೆ. ನಮ್ಮಿಂದ ನಿನಗೆ ಅನುಕೂಲವೇ ಹೊರತು ಪ್ರತಿಕೂಲವಿಲ್ಲ; ಆದರೆ ನಿನ್ನ ವಿಷಯವಾಗಿ ನಮಗೆ ಏನೂ ತಿಳಿಯದಾಗಿದೆ. ನೀನು ಗಿರಿಸಿಂಹನ ಪ್ರಿಯಮಡದಿಯಾಗಿ ಪಾವಗಡಕ್ಕೆ ಹೋಗಿದ್ದೆಯಷ್ಟೇ; ಹೀಗಿದ್ದು ಇಲ್ಲಿಗೇಕೆ ನಿನ್ನ ಆಗಮನವಾಯಿತು? ಮತ್ತು ನಿನ್ನನ್ನು ನೋಡಿದರೆ, ನೀನು ಅನಾಥೆಯೂ ವೈರಾಗಿಣಿಯೂ ಆದಂತೆ ತೋರುವಿ; ಯಾಕೆ, ಆ ವೃದ್ಧನ ಕೂಡ ಸಂಸಾರವ ಮಾಡಲಾರದೆ, ಹೀಗೆ ಮನೆ ಬಿಟ್ಟು ತಿರುಗುತ್ತಿರುವಿಯೇನು? ಎಂದು ಕೇಳಿದರು.

ವಿಮಲೆಯು ಕ್ರುದ್ಧಳಾದಳು. ಅವಳ ತುಟಿಗಳು ನಡುಗಹತ್ತಿದವು. ಅವಳು ನೀರಿಳಿಯುತ್ತಿರುವಂಥ ಒಸ್ತ್ರೆಯನ್ನುಟ್ಟಿದ್ದರೂ ಅವಳ ಮೈ ಕಾದು ತಪ್ತವಾಯಿತು. ಅವಳ ಮೂಗಿನಿಂದ ಬಿಸಿಯಾದ ಉಸಿರು ಒಳ್ಳೇ ಒತ್ತರದಿಂದ ಹೊರಬೀಳಲಾರಂಭಿಸಿತು. ಅವಳು ಹೆಸರಿಗೆ ಮಾತ್ರ ಅಬಲೆಯಾಗಿದ್ದರೂ ಆ ಕಾಲಕ್ಕೆ ಅವಳು ಕಾಲಿ ಇಲ್ಲವೆ ಮಹಾಮಾರಿಯಂತೆ ಉಗ್ರಳಾಗಿ ತೋರಹತ್ತಿದಳು. ಈ ಮೇರೆಗೆ ಅವಳು ಕೆರಳಿದ ಕೃಷ್ಣನಾಗಿಣಿಯಂತೆ ಭುಸುಗುಟ್ಟುತ್ತಿರಲು, ಆಕೆಯನ್ನು ಕೆಣಕಿದ ಆಗಂತುಕನು ಮನಸ್ಸಿನಲ್ಲಿ ಏನೋ ಭಾವಿಸಿಕೊಂಡು ಆಕೆಯನ್ನು ಕುರಿತು ನುಡಿದನೇನಂದರೆ:—"ವಿಮಲಾದೇವೀ, ನಾವು ತಿಳಿಯದೆ ಹೀಗೆ ಮಾತಾಡಿದ್ದಕ್ಕೆ ನಿನ್ನ ಅಗೌರವವಾಗಿ ನಿನಗೆ ಸಿಟ್ಟು ಬಂದಿರಬಹುದು; ಆದರೆ ನಾವು ನಿನ್ನಲ್ಲಿ ಕ್ಷಮೆಯನ್ನು ಬೇಡಿಕೊಳ್ಳುತ್ತೇವೆ. ಇನ್ನಾದರೂ ಆಯಿತೇ? '

ವಿಮಲೆಯು ಪಿಟ್ಟೆಂದು ಮಾತಾಡದೆ ಅಷ್ಟಕ್ಕೇ ತನ್ನ ಏರಿಕೆಯ ಸಿಟ್ಟನ್ನು ನುಂಗಿಕೊಂಡು, ಮಾತಿಗೆ ಮಾತು ಬೆಳೆದು ಅನರ್ಥವಾದೀತೆಂದು ತಿಳಿದು, ಗರ್ಭಗುಡಿಯೊಳಗೆ ಪ್ರವೇಶ ಮಾಡಿದಳು. ಅಲ್ಲಿ ಹೊರಗಿನಗಿಂತಲೂ ಅತ್ಯಧಿಕವಾಗಿ ಅಂಧಃಕಾರ ಸಾಮ್ರಾಜ್ಯವು ಪಸರಿಸಿತ್ತೆಂಬದನ್ನು ಹೇಳಲೇಬೇಕಿಲ್ಲ; ವಿಮಲೆಯು ತನ್ನ ಬಳಿಯಲ್ಲಿರುವ ಚಕಮುಕಿಯ ಕಲ್ಲನ್ನು ತೆಗೆದು, ಅದರಿಂದ ಬೆಂಕಿಯನ್ನು ಮಾಡಿ, ಒಂದು ಪಣತಿಯನ್ನು ಹಚ್ಚಿದಳು. ಗರ್ಭಗುಡಿಯಲ್ಲಿ ಸ್ವಚ್ಛವಾದ ಪ್ರಕಾಶವು ಬೀಳಲು, ನಮ್ಮ ಆಗಂತುಕರು ಅತ್ತ ಉತ್ಸುಕತೆಯಿಂದ ನೋಡಲಾರಂಭಿದರು. ಗುಡಿಯು ದೇವಿಯದಾಗಿದ್ದು, ಸಿಂಹಾರೂಢದೇವಿಯ ಭವ್ಯಮೂರ್ತಿಯು ಅವರ ದೃಷ್ಟಿಗೆ ಬಿದ್ದಿತು. ಆಗ ದೇವಿಯ ಮೈಮೇಲೆ ಅಲಂಕಾರಗಳಾಗಲಿ, ವಸ್ತ್ರಾಲಂಕಾರಗಳಾಗಲಿ ಯಾವವೂ ಇದ್ದಿಲ್ಲ. ಒಣಗಿದ ಹೂ ಮಾಲೆಗಳ ಸರಗಳು ಮಾತ್ರ ಸ್ಪಷ್ಟವಾಗಿ ಕಾಣುತ್ತಿದ್ದವು. ವಿಮಲೆಯು ದೀಪ ಹಚ್ಚಿದ್ದೊಂದೇ ತಡ; ತಾನು ಸರೋವರದಲ್ಲಿ ಕಟ್ಟಿ ತಂದಿದ್ದ ಮಾಲೆಯನ್ನು ದೇವಿಯ ಕೊರಳಿಗೆ ಹಾಕಿ, ಫರಸುಗಲ್ಲಿನ ಮೇಲೆ ದಂಡವತ್ ಬಿದ್ದುಬಿಟ್ಟಳು. ಬಳಿಕ ಕೆಲಹೊತ್ತಿನ ಮೇಲೆ ಅವಳು ಎದ್ದು, ಅಲ್ಲಿಂದ ಹೊರಹೊರಟಳು. ಆಕೆಯು ಎಲ್ಲಿಗೆ ಹೋಗುವಳೆಂಬದನ್ನು ಆ ಆಗಂತುಕರು ನೋಡುತಲಿದ್ದರು. ಗುಡಿಯ ಸಮೀಪದಲ್ಲಿರುವದೊಂದು ಗುಹೆಯಲ್ಲಿ ಪ್ರವೇಶ ಮಾಡಿದಳು. ಆದ್ದರಿಂದ ಆ ಗುಹೆಯಲ್ಲಿಯೇ ಅವಳು ವಾಸ ಮಾಡುತ್ತಿರಬಹುದೆಂದು ಅವರು ತರ್ಕಿಸಿದರು.

ಹೀಗೆ ಅಕಸ್ಮಾತ್ತಾಗಿ ವಿಮಲೆಯು ಭೆಟ್ಟಿಯಾದ್ದರಿಂದ, ನಮ್ಮ ಆ ಆಗಂತುಕರಿಗೆ ಒಂದು ಬಗೆಯಿಂದ ಕೌತುಕವಾಗಿ, ಅವರು ಒಂದು ದೊಡ್ಡ ಆಲೋಚನೆ

ಯಲ್ಲಿಯೇ ಬಿದ್ದರು. ಅವರು ಆಕೆಯು ವಿಷಯವಾಗಿ ತಮ್ಮೊಳಗೆ ಹೀಗೆ ಆಲೋಚಿಸತೊಡಗಿದರು; "ಇವಳು ಇತ್ತ ಹೀಗೇಕೆ ಬಂದಿರಬಹುದು? ನಾವು ಇವಳ ಎದುರಿಗೆ ಅಂದಂತೆಯೇ ಆತಿರಬಹುದೇನು? ಛೇ; ಹಾಗಾಗಿರಲಿಕ್ಕಿಲ್ಲ. ಮತ್ತೇನಾದರೂ ಕಾರಣವುಂಟಾಗಿರಬಹುದು. ಚಾಲುಕ್ಯ ಸಮ್ರಾಟರ ಸುಂಟರಗಾಳಿಯು ಪಾವಗಡಕ್ಕೆ ಉಚ್ಚಾಟಣೆ ಕೊಟ್ಟಿರಬಹುದೇನು? ಹಾಗಿದ್ದರೆ ಇವಳೊಬ್ಬಳೇ ತಪ್ಪಿಸಿಕೊಂಡು ಹೇಗೆ ಬರುವಳು?"

ಈ ಮೇರೆಗೆ ಎಷ್ಟು ವಿಧವಾಗಿ ತರ್ಕಿಸಿದರೂ ಬೇರೆ ಪ್ರಮಾಣಗಳಿಲ್ಲದ್ದರಿಂದ, ಅವರ ತರ್ಕವು ನಿಜವೆಂದು ಸಿದ್ಧವಾಗದೆ ಹೋಯಿತು. ಬಳಿಕ ಅವರು ವಿಮಲೆಗೆ ಭೆಟ್ಟಿಯಾಗಿ ಅವಳಿಂದಲೇ ನಿಜ ಸಂಗತಿಯನ್ನು ತಿಳಿದುಕೊಳ್ಳಬೇಕೆಂದು ಗೊತ್ತು ಮಾಡಿಕೊಂಡರು; ಆದರೆ ವಿಮಲೆಯು ಬಳಿಗೆ ಯಾವಾಗ ಹೋಗಬೇಕು, ಹೋದ ಮೇಲೆ ಹೇಗೆ ಮಾತಾಡಬೇಕು, ಎಂಬ ವಿಚಾರಗಳು ಅವರಲ್ಲಿ ಉಂಟಾಗಿ, ಹೀಗೆ-ಹೀಗೇ ಮಾತಾಡಬೇಕೆಂದು ನಿರ್ಧರಿಸಿಕೊಂಡರು. ದೀಪ-ಧೂಪವಿಲ್ಲದ ಗುಹೆಯಲ್ಲಿ ಇಂಥ ಅಂಧಃಕಾರದೊಳಗೆ ವಿಮಲೆಯನ್ನು ಕಾಣುವದು ಅಶಕ್ಯವಾದುದರಿಂದ, ಮರುದಿನ ಬೆಳಗಾದ ಮೇಲೆ ಆಕೆಯ ಕಡೆಗೆ ಹೋಗುವದು ಸಯುಕ್ತಿಕವೆಂದು ಅವರು ನೆನೆಸಿದರು.

ವಿಮಲೆಯ ಭೆಟ್ಟಿಯಾದಾಗಿನಿಂದ ಆಗಂತುಕರಲ್ಲೊಬ್ಬನಿಗೆ ವಿಶೇಷವಾಗಿ ಮನಸ್ಸಿಗೆ ಸಮಾಧಾನವಿಲ್ಲದಾಗಿತ್ತು. ಯಾಕಂದರೆ ಅವನು ಈ ಪೂರ್ವದಲ್ಲಿಯೇ ಅಂದರೆ ವಿಮಲೆಯು ಲಗ್ನವಾಗುವ ಮೊದಲೇ ಆಕೆಯ ಸೌಂದರ್ಯಾತಿಶಯಕ್ಕೆ ಲುಬ್ಧನಾಗಿ ಅವಳನ್ನು ಪ್ರೀತಿಸುತ್ತಿದ್ದನು. ಆತನು ಗುಜರಾಥದೊಳಗಿನ ಒಂದು ಸಂಸ್ಥಾನಕ್ಕೆ ಅಧಿಪತಿಯಾಗಿದ್ದನು. ಅವನು ಧೈರ್ಯಶಾಲಿಯೂ ಶೂರನೂ ಆಗಿದ್ದರೂ ಸಾಂಕರ್ಯ ದೋಷವು ಅವನ ಪೂರ್ವಜರಿಗೆ ತಗಲಿಕೊಂಡದ್ದರಿಂದ-ಜಾತಿದೃಷ್ಟಿಯಿಂದ ಅವನಿಗೆ ಅಚ್ಚ ಗುಜರಾಥಿಗಳಿಗಿದ್ದಷ್ಟು ಗೌರವವಿದ್ದಿಲ್ಲ. ಇದೇ ಕಾರಣದ ಸಲುವಾಗಿ ವಿಮಲೆಯ ತಂದೆಯು ಆತನಿಗೆ ತನ್ನ ಮಗಳನ್ನು ಕೊಡಲು ನಿರಾಕರಿಸಿದ್ದನು. ಆದರೂ ವಿಮಲೆಯ ರೂಪಾತಿಶಯದಲ್ಲಿ ನಟ್ಟ ಆ ಮಾಲೋಜಿಸಿಂಗನ ಮನಸ್ಸು ಅವಳಿಂದ ಪರಾಙ್ಮುಖವಾಗಲು ಅಸಮರ್ಥವಾಗಿತ್ತು. ಅವನ ವಿಷಯತೃಪ್ತಿಗೆ ವಿಮಲೆಯ ಹೊರತು ಗತಿಯಿಲ್ಲವೆಂಬಂತೆ ಇದ್ದಿಲ್ಲ. ಆಕೆಯ ರೂಪವನ್ನು ಹೀಯಾಳಿಸುವಂಥ ಸುಂದರಿಯರು ಅವನ ಅಂತಃಪುರದಲ್ಲನೇಕ ಜನರಿದ್ದರು; ಆದರೆ ಮನುಷ್ಯನ ಮನಸ್ಸು ಒಮ್ಮೆ ಯಾವದೊಂದು ಸಂಗತಿಯಲ್ಲಿ ಹೆಚ್ಚು ಆಸಕ್ತಿಯನ್ನು ತಾಳಿತೆಂದರೆ, ಆ ಸಂಗತಿಯು ಮನಸ್ಸಿನಂತೆ ಆದ ಹೊರತು ಅದು ತೃಪ್ತಿಯನ್ನು ಹೊಂದುವದಿಲ್ಲ. ಅದರಂತೆ ಮಾಲೋಜಿಸಿಂಗನ ಅವಸ್ಥೆಯೂ

ಆಗಿತ್ತು. ವಿಮಲೆಯು ಲಗ್ನವಾಗಿ ಗಂಡನ ಮನೆಗೆ ಹೋದರೂ ಅವನ ಮನಸ್ಸಿನಲ್ಲಿದ್ದ ಪ್ರೇಮವು ಕಡಿಮೆಯಾಗಿದ್ದಿಲ್ಲ. ಅವರಿಬ್ಬರ ಸಂಬಂಧವು ಈ ರೀತಿಯಾಗಿರಲು ಈ ದಿನ ಅಕಸ್ಮಾತ್ತಾಗಿ ತನ್ನ ಪ್ರೇಮಪಾತ್ರವು ದರುಶನ ಕೊಟ್ಟದ್ದರಿಂದ, ಅವನ ಆ ಪ್ರೇಮವು ಪ್ರಜ್ವಲಿಸಿದ್ದರಲ್ಲಿ ಆಶ್ಚರ್ಯವಿಲ್ಲ.

ಇತ್ತ ದೇವಿಯ ಗುಡಿಯಲ್ಲಿ ಮಾಲೋಜಿಯು ಹೀಗೆ ಆಕೆಯ ವಿಷಯವಾಗಿ ಯೋಚಿಸುತ್ತಿರಲು, ಅತ್ತ ಗುಹೆಯಲ್ಲಿ ವಿಮಲೆಯು ಈ ಪ್ರಕಾರ ಯೋಚಿಸುತ್ತಿದ್ದಳು:—"ಈ ದಿನ ಗುಡಿಯಲ್ಲಿ ನನ್ನ ಗುರುತು ಹಿಡಿದು ಮಾತಾಡಿಸಿದ ಆ ಪುರುಷರು ಯಾರಾಗಿರಬಹುದು? ನನಗೆ ಅವರು 'ಪ್ರಿಯ ವಿಮಲಾ' ಎಂದು ಸಂಬೋಧಿಸಿದರಲ್ಲಾ! ಇದರ ಅರ್ಥವೇನು? ನನ್ನ ಇರವು ಯಾರಿಗೂ ತಿಳಿಯಬಾರದೆಂದು ಇಂಥ ಕಟ್ಟಡವಿಯಲ್ಲಿ ನಾನಿರುತ್ತಿರಲು, ನನ್ನ ದುರ್ದೈವವು ನನ್ನ ಪರಿಚಿತರನ್ನು ಇಲ್ಲಿಗೂ ಕರೆದುಕೊಂಡು ಬರಬೇಕೆ? ಆದರೂ ಚಿಂತೆಯಿಲ್ಲ; ಇನ್ನು ಮುಂದೆ ಏನಾಗುವದೋ ನೋಡೋಣ; ಇಂಥ ಅಮಾನುಷ ಸ್ಥಳಕ್ಕೆ ಬರಬೇಕಾದರೆ ನನ್ನಂತೆ ಅವರೂ ದುರ್ದೈವಿಗಳಾಗಿಯೇ ಬಂದಿರಬೇಕು. ಕಣ್ಣು ಕಪ್ಪಡಿಗಳ ಮಲದ ವಾಸನೆಯನ್ನು ತಕ್ಕೊಳ್ಳುತ್ತ ಅವರು ಆ ಅಂಧಃಕಾರದಲ್ಲಿ ಬಿದ್ದುಕೊಂಡದ್ದನ್ನು ನೋಡಿದರೆ, ಅವರು ನಿಜವಾಗಿಯೂ ವಿಪದ್ಗ್ರಸ್ತರು!"

ಹೀಗೆ ಉಭಯತರೂ ಯೋಚನೆಯಲ್ಲಿ ಮುಳುಗಿರಲು, ಬೆಳ್ಳಗೆ ಬೆಳಗಾಯಿತು. ರಾತ್ರಿಯಲ್ಲಿ ಧರಿತ್ರಿಯನ್ನು ಮುಸುಕು ಹಾಕಿದ್ದ ಕಗ್ಗತ್ತಲೆಯು ಎತ್ತೋ ಮಾಯವಾಯಿತು. ಕಣ್ಣುಕಪ್ಪಡಿಗಳು ಮೂಲೆಯನ್ನು ಸೇರಿದವು; ಪಕ್ಷಿಗಳು ಕಿಲಿಬಿಲಿ ಶಬ್ದಗೈಯುತ್ತ ಸೃಷ್ಟಿಯ ಸಚೇತನತೆಯನ್ನು ವ್ಯಕ್ತಗೊಳಿಸಲಾರಂಭಿಸಿದವು. ಅಷ್ಟರಲ್ಲಿ ಭಗವಾನ್ ಸೂರ್ಯನು ಕ್ಷಿತಿಜದ ಮೇಲೆ ಬಂದು, ಧರಿತ್ರಿಯನ್ನು ನಿರ್ಭಯವಾಗ ಮಾಡಿದನು. ಗುಡಿಯಲ್ಲಿ ಯೋಚನೆಯನ್ನು ಮಾಡುತ್ತ ಮಲಗಿಕೊಂಡಿದ್ದ ಮಾಲೋಜಿಸಿಂಗನೂ ಅವನ ಸಂಗಡಿಗನೂ ಕಾಲ್ಪನಿಕ ಸೃಷ್ಟಿಯನ್ನು ಲಯಗೊಳಿಸಿ, ಚಟ್ಟನೆ ಎದ್ದು ಕುಳಿತರು. ಮಾಲೋಜಿಯ ಕಣ್ಣಿಗೆ ವಿಮಲೆಯ ಸೌಂದರ್ಯವು ಕಟ್ಟಿದಂತಾದ್ದರಿಂದ, ಅವನು ಗುಹೆಗೆ ಹೋಗಿ ಆಕೆಯ ವಿಷಯವಾಗಿ ಎಲ್ಲ ಸಂಗತಿಗಳನ್ನು ತಿಳಿದುಕೊಂಡೇ ಬಿಡಬೇಕೆಂದು ಆತುರಪಟ್ಟನು. ಸಂಗಡಿಗನೂ ಅದಕ್ಕೆ ಸಮ್ಮತಿಸಲು ಆತನು ಗುಹೆಗೆ ನಡೆದನು.

ವಿಮಲೆಗೂ ಇದೇ ಯೋಚನೆಯ ಮೂಲಕವಾಗಿ ಬೆಳತನಕ ನಿದ್ದೆಯಿದ್ದಿಲ್ಲಾದ್ದರಿಂದ, ಅವಳಿಗೆ ಬೆಳಗು ಮುಂಜಾವಿನ ಜಂಪುಹತ್ತಿತ್ತು. ಮಾಲೋಜಿಯು ಗುಹೆಯ ಬಳಿಗೆ ಹೋಗಿ ನೋಡಲು, ಅದರ ಮುಖಕ್ಕೊಂದು ಸಾಧಾರಣವಾದ ಬಂಡೆಗಲ್ಲು ಆನಿಸಲ್ಪಟ್ಟಿತ್ತು. ಅದನ್ನವನು ಯುಕ್ತಿಯಿಂದ ಮೆಲ್ಲಗೆ ಬದಿಗೆ ಸರಿಸಿ

ಒಳಗೆ ನುಸುಳಿದನು. ಅವನ ಸಂಗಡಿಗನೂ ಒಳಹೊಕ್ಕನು. ಆ ಗುಹೆಯಲ್ಲಿ ಮೂರು ಚೌಕುಗಳಿದ್ದು, ಒಂದೊಂದು ಚೌಕಿನಲ್ಲಿ ನಾಲ್ನಾಲ್ಕು ಕೋಣೆಗಳಿದ್ದವು. ಮಾಲೋಜಿಯು ಆ ಮೂರೂ ಚೌಕುಗಳಲ್ಲಿಯ ಕೋಣೆಗಳನ್ನು ನೋಡಿದನು; ಆದರೆ ಅವನಿಗೆ ವಿಮಲೆಯು ಸಿಗಲಿಲ್ಲ. ಅವನು ಹತಾಶನಾಗಿ ಅವಳು ಮತ್ತೆಲ್ಲಿ ಹೋಗಿರಬಹುದೆಂದು ಆ ಎಲ್ಲ ಕೋಣೆಗಳನ್ನೂ ಮತ್ತೊಮ್ಮೆ ಸೂಕ್ಷ್ಮವಾಗಿ ನೋಡಿದನು. ಅದರಿಂದಲೂ ಪ್ರಯೋಜನವಾಗದೆ ಹೋಯಿತು. ಕಡೆಗೆ ಆತನು ಅವಳು ಇಲ್ಲಿರುವದಿಲ್ಲೆಂದು ನಿರ್ಧರಿಸಿ, ಬೇರೆ ಕಡೆಗೆ ಹುಡುಕಿ ನೋಡಬೇಕೆಂದು ತನ್ನ ಸಂಗಡಿಗನನ್ನು ಕುರಿತು ನುಡಿದನು. ಅವನ ಸಂಗಡಿಗನೂ ವಿಚಾರದಲ್ಲಿ ಬಿದ್ದಿದ್ದನು. ಗುಹೆಯ ಮುಖಕ್ಕೆ ಆನಿಸಿದ ಕಲ್ಲು ಒಳಗಿನಿಂದಲೇ ಆನಿಸಲ್ಪಟ್ಟಿದ್ದರಿಂದ, ಒಳಗೆ ಯಾರಾದರೂ ಇರಲಿಕ್ಕೆಬೇಕೆಂದು ಅವನು ಮಾಲೋಜಿಗೆ ಹೇಳಿದನು. ಆ ಮಾತು ಆತನಿಗೆ ನಿಜವೆಂದು ಕಂಡುಬಂದಿತು. ಮತ್ತೆ ಅವರು ಕೋಣೆಗಳನ್ನು ಶೋಧಿಸಲಿಕ್ಕೆ ಪ್ರಾರಂಭಿಸಿದರು. ಈ ಸಾರೆ ಮಾತ್ರ ಅವರಿಗೆ ನಿರಾಶೆಯಲ್ಲಿ ಆಶೆಯುಂಕುರಿಸಿತು. ಮೂರನೆಯ ಚೌಕಿನ ಒಂದು ಕೋಣೆಯಲ್ಲಿ ಒಂದು ಸಣ್ಣ ಮಾಡವು ಕಂಡುಬಂದಿತು. ಒಬ್ಬ ಮನುಷ್ಯನು ಕುಳಿತರೆ ತಲೆಗೆ ಬಡಿಯುವಷ್ಟು ಅದು ಚಿಕ್ಕದಾಗಿತ್ತು. ಮಾಲೋಜಿಯು ಆ ಮಾಡದಲ್ಲಿ ಕುಳಿತು ಒಳಗೆ ನೋಡಲು, ಅದರಲ್ಲಿ ಬರತಕ್ಕ ಸುಳಿಗಾಳಿಯ ಮೇಲಿಂದ ಇನ್ನೊಂದು ಕೋಣೆಯಿರಬಹುದೆಂದು ಅನುಮಾನವಾಯಿತು. ಆಗ ಅವನು ಸಂಗಡಿಗನ ಅನುಮತಿಯಂತೆ ಮಾಡದೊಳಗೆ ಕಾಲು ಸರಿಸುತ್ತ ಕುಳಿತುಕೊಂಡೇ ನಾಲ್ಕಾರು ಮೊಳ ಹೋದನು ಅಷ್ಟರಲ್ಲಿ ಮುಂದೆ ಒಂದು ಅಡ್ಡಗೋಡೆಯು ಬಂದಿತು. ದಾರಿಯು ಇಲ್ಲಿಗೆ ಕಟ್ಟಾಯಿತೆಂದು ಆತನು ಆ ಕತ್ತಲೆಯಲ್ಲಿಯೇ ಸುತ್ತಲೂ ಕೈಯಾಡಿಸಿದನು. ಎಲ್ಲಿಯೂ ದಾರಿ ಇದ್ದದ್ದು ಕಂಡುಬಾರದಾಯಿತು. ಬಳಿಕ ಅವನು ಮೇಲೆ ನೋಡಲು ಒಂದು ಕಿಂಡಿಯು ಕಾಣಿಸಿತು; ಕೂಡಲೆ ಅವನು ಎದ್ದು ನಿಂತನು. ಆಗ ಅವನಿಗೆ ಕೋಣೆಯೊಂದು ಕಂಡುಬಂದಿತು; ಇಷ್ಟೇ ಅಲ್ಲ, ಆ ಕೋಣೆಯೊಳಗೇ ಸುಂದರಿಯಾದ ವಿಮಲೆಯು ನಿದ್ರಾವಶಳಾಗಿರುವಳೆಂಬದು ಕಾಣಿಸಿತು. ಅದರಿಂದ ಅವನು ತುಂಬಾ ಸಂತೋಷಬಟ್ಟು ಎದೆಯ ವರೆಗೆ ಎತ್ತರವಿರುವ ಆ ಗೋಡೆಯನ್ನು ಹತ್ತಿ ಆ ಕೋಣೆಯಲ್ಲಿ ಹೋದನು. ವಿಮಲೆಯು ಹುಲ್ಲುಚಾಪೆಯ ಮೇಲೆ ಒಂದು ಸೀರೆಯನ್ನು ಹೊದ್ದುಕೊಂಡು ಮಲಗಿದ್ದಳು. ಕೇತಕಿಯ ಬಣ್ಣವನ್ನು ನಾಚಿಸುವ ಅವಳ ಮೈಕಾಂತಿಯು ಅಸ್ಪಷ್ಟವಾಗಿ ತೋರುತಲಿತ್ತು. ಮಾಲೋಜಿಯು ತಾನೊಬ್ಬನೇ ಅಲ್ಲಿ ಕುಳಿತು, ತನ್ನ ಸಂಗಡಿಗನಿಗೆ ಹೊರಗಿನ ಚೌಕಿನಲ್ಲಿರ ಹೇಳಿ

ದನು. ಒಂದು ತಾಸಾಯಿತು, ಎರಡು ತಾಸಾಯಿತು, ವಿಮಲೆಯು ನಿದ್ರೆಯಿಂದ ಎಚ್ಚರಿಯಲಿಲ್ಲ. ಕೂತು-ಕೂತು ಮಾಲೋಜಿಗೆ ಬೇಸರವಿಟ್ಟಿತು. ಒದರಿ ಎಬ್ಬಿಸಬೇಕೆಂಬ ಹವಣಿಕೆಯು ಅವನಲ್ಲಿ ಉತ್ಪನ್ನವಾಯಿತು. ಇನ್ನು ಅವನು ಒದರಬೇಕೆನ್ನುವಷ್ಟರಲ್ಲಿ ವಿಮಲೆಯೇ ಎಚ್ಚತ್ತಳು. ಅವಳು ಕಣ್ಣುಗಳನ್ನೊರಿಸುತ್ತ ಚಾಪೆಯ ಮೇಲೆ ಎದ್ದು ಕುಳಿತಳು. ಆ ಕೂಡಲೆ ಮಾಲೋಜಿಯು ಆಕೆಯ ಸಮೀಪಕ್ಕೆ ಹೋಗಿ: "ಏನು, ವಿಮಲಾರಾಣಿಯವರೇ, ನನ್ನ ಪರಿಚಯವು ತಮಗೆ ಹತ್ತುವದೋ?'' ಎಂದು ನುಡಿದನು. ಆಗ ಅವಳು ಹೊರಳಿ ಅವನನ್ನು ದಿಟ್ಟಿಸಿ ನೋಡಿದಳು. ಅವನ ಗುರುತು ಆಕೆಗೆ ಹತ್ತಿತು. ತತ್‍ಕ್ಷಣದಲ್ಲಿ ಅವಳ ಮುಖವು ತುಸ ಲಜ್ಜಾಯುಕ್ತವಾಯಿತು; ಆದರೂ ಅವಳು ದಿಟ್ಟತನದಿಂದ:— ನೀವು ಜಂಬುಖೇಡದ ಸಂಸ್ಥಾನಿಕರಲ್ಲವೆ? ನಿಮ್ಮ ಹೆಸರು ಮಾಲೋಜಿರಾಯರೆಂದಿರಬೇಕೆಂದು ತೋರುತ್ತದೆ. ಬಹಳ ಹೇಳುವದೇನು? ನೀವು ನನ್ನನ್ನು ಕೇಳುವದಕ್ಕೋಸ್ಕರ ನನ್ನ ತಂದೆಯ ಬಳಿಗೆ ನಿಮ್ಮ ರಾಯಭಾರಿಯನ್ನು ಕಳಿಸಿದ್ದಿರಿ; ಒಂದೆರಡು ಸಾರೆ ನಿಮ್ಮನ್ನು ನಾನೂ ನೋಡಿರುವೆನು. ಬ್ರಹ್ಮಸಂಕಲ್ಪವಿಲ್ಲದ್ದರಿಂದ, ನನ್ನ-ನಿಮ್ಮ ವಿವಾಹವಾಗುವ ಯೋಗವು ಒದಗಿ ಬರಲಿಲ್ಲ. ನಿನ್ನೆ ಗುಡಿಯಲ್ಲಿ ಮಲಗಿಕೊಂಡವರು ನೀವೇ ಏನು? ಹೀಗೆ ನೀವು ನಿಮ್ಮ ರಾಜಧಾನಿಯನ್ನು ಬಿಟ್ಟು ಬರಲಿಕ್ಕೆ ಕಾರಣವೇನು? ನಿಮ್ಮ ಈಗಿನ ಇರವನ್ನು ನೋಡಿದರೆ, ನಿಮ್ಮನ್ನು ಆವುದೋ ಒಂದು ವಿಪತ್ತು ಆವರಿಸಿದಂತೆ ತೋರುತ್ತದೆ, ಎಂದಂದಳು.

ವಿಮಲೆಯ ಈ ಸರಳ ಹಾಗು ತರ್ಕಯುಕ್ತವಾದ ಮಾತನ್ನು ಕೇಳಿ ಮಾಲೋಜಿಯು ಚಕಿತನಾದನು. ಅವನಿಗೆ ಆ ಸ್ತ್ರೀಯ ದಿಟ್ಟತನ, ಸ್ವಾಭಾವಿಕ ಸರಳ ವೃತ್ತಿ, ಮಾತಾಡುವಾಗ್ಗೆ ತೋರಿಸಿದ ವಾಕ್‍ಚಪಲತೆ, ಮಂಜುಳ ಸ್ವರ ಇವುಗಳನ್ನು ನೋಡಿ ತುಂಬಾ ಸಂತೋಷವಾಯಿತು. ಆಗ ಅವನು ಆಕೆಯನ್ನು ಕುರಿತು ನುಡಿದನೇನಂದರೆ:—"ವಿಮಲಾದೇವೀ, ನೀನು ನನ್ನ ಗುರುತನ್ನು ಹಿಡಿದಿರುತ್ತೀ; ನೀನು ಹೇಳಿದ್ದೆಲ್ಲ ಅಕ್ಷರಶಃ ನಿಜವಿರುತ್ತದೆ. ನಿನ್ನ ತಂದೆಯು ಮನಸ್ಸಿನಲ್ಲಿ ಆವುದೋ ಒಂದು ಗೂಢ ಸಂಶಯವನ್ನಿಟ್ಟುಕೊಂಡು ನಿನ್ನ ಪಾಣಿಗ್ರಹಣದ ಸುಯೋಗವನ್ನು ನನಗೆ ತಂದು ಕೊಡಲಿಲ್ಲ; ಇದ್ದರಿಂದ ನನ್ನ ಪಾಲಿಗೆ ನೀನು ಪರಸ್ತ್ರೀಯಾಗಿ ಪರಿಣಮಿಸಿದೆ; ಇದಕ್ಕೆ ಯಾರ ಯತ್ನವೂ ಇಲ್ಲ. ಇರಲಿ; ನನ್ನಂತೆ ಈಗ ನೀನೂ ಒಂದು ಸಂಕಟಕ್ಕೆ ಗುರಿಯಾದಂತೆ ತೋರುತ್ತೀ. ಅದು ಯಾವ ಸಂಕಟವು? ನೀನು ನನ್ನವಳಾಗಿರದಿದ್ದರೂ ನಿನ್ನ ಹಿತವನ್ನು ಸಾಧಿಸುವದು ನನ್ನ ಕರ್ತವ್ಯವಾಗಿರುತ್ತದೆ. ಸ್ತ್ರೀಯರು ಸಂಕಟದಲ್ಲಿ ಬಿದ್ದಾಗ ಅವರನ್ನು ಹಲವು ಪ್ರಯತ್ನಗಳಿಂದ ರಕ್ಷಿಸಬೇಕೆಂದು ಸ್ಮೃತಿಕಾರರ ವಚನವಿರುತ್ತದೆ.

ಧರ್ಮದೃಷ್ಟಿಯಿಂದಲೂ, ನೀತಿ ದೃಷ್ಟಿಯಿಂದಲೂ ಮತ್ತು ಪ್ರೇಮದೃಷ್ಟಿಯಿಂದಲೂ ನನ್ನಿಂದ ರಕ್ಷಿಸಲ್ಪಡಲು ನೀನು ಅರ್ಹಳಿರುತ್ತೀ; ನಾನಾದರೂ ಈ ಕಾಲಕ್ಕೆ ವಿಪತ್ತಿನಲ್ಲಿರುವೆನೆಂಬದೇನೋ ನಿಜ; ಆದರೂ ನನ್ನ ಪೌರುಷವು ನನ್ನ ಸ್ವಾಧೀನವಿರುವದರಿಂದ, ಎಂಥ ಹೊತ್ತು ಬಂದರೂ ಅದಕ್ಕೆ ಈ ಮಾಲೋಜಿಯು ಸೊಪ್ಪು ಹಾಕುವವನಲ್ಲ.''

ಮಾಲೋಜಿಯ ಈ ಮಾತುಗಳನ್ನು ಕೇಳಿ ವಿಮಲೆಯು:- ಮಾಲೋಜಿ ರಾಯರೇ, ನಿಮ್ಮ ಧರ್ಮಬುದ್ಧಿಯನ್ನು ಹೊಗಳುತ್ತೇನೆ. ನೀವು ಹೇಗೆ ವಿಪತ್ತಿಗೆ ಅಂಜದೆ ತಲೆ ಕೊಡುವಿರೋ, ಹಾಗೆ ನಾನೂ ವಿಪತ್ತನ್ನು ಅನುಭವಿಸಲಿಕ್ಕೆ ಸಿದ್ಧಳಿರುತ್ತೇನೆ.

ಮಾಲೋಜಿ:—ನೀವು ಇಂಥ ಘೋರಾರಣ್ಯದಲ್ಲಿ ಇರುವದನ್ನೂ, ಸರಿ ರಾತ್ರಿಯಲ್ಲಿ ಆ ಭಯಂಕರವಾದ ಗುಡಿಯಲ್ಲಿ ಬಂದದ್ದನ್ನೂ ನೋಡಿದರೆ, ನಿಮ್ಮ ಧೈರ್ಯದ ವಿಷಯವಾಗಿ ಯಾರಿಗೂ ಸಂಶಯ ಬರುವ ಹಾಗಿಲ್ಲ; ಆದರೆ ನನ್ನ ಕರ್ತವ್ಯವೆಂದು ನಾನು ನಿಮ್ಮ ಸಂಕಟವೇನೆಂಬದನ್ನು ಕೇಳುತ್ತೇನೆ. ಹೇಳುವ ಇಚ್ಛೆಯಿದ್ದರೆ ಹೇಳಬಹುದು.

ವಿಮಲೆ:—ಹೇಳಲಿಕ್ಕೆ ಯಾವ ಅಂದೇಶವೂ ಇಲ್ಲ; ಆದರೆ—

ಮಾಲೋಜಿ:—'ಆದರೆ' ಎಂಬ ಪ್ರಯೋಗವೇಕೆ?

ವಿಮಲೆ:— ನಿಮ್ಮ ಮುಂದೆ ನನ್ನ ಎಲ್ಲ ಸಂಗತಿಗಳನ್ನು ತೋಡಿಕೊಳ್ಳಬೇಕೋ-ಬೇಡವೋ? ಎಂಬದೇ ನನ್ನ 'ಆದರೆ' ಎಂಬ ಪ್ರಯೋಗಕ್ಕೆ ಕಾರಣವು.

ಮಾಲೋಜಿ: ಹೇಳಲಿಕ್ಕೆ ಅನುಮಾನವಿದ್ದರೆ ನನ್ನದೇನೂ ಆಗ್ರಹವಿಲ್ಲ.

ವಿಮಲೆ: — ನಿಮ್ಮ ಆಗ್ರಹವಿದ್ದರೆ ಹೇಳುವೆನು; ಇಲ್ಲವಿದ್ದರೆ ಯಾಕೆ ಹೇಳಲಿ?

ಮಾಲೋಜಿ: —ನಿಮ್ಮ ಸಂಕಟಕ್ಕೆ ಕಾರಣವೇನೆಂಬದನ್ನು ಕೇಳುವದಕ್ಕೆ ನನ್ನ ಆಗ್ರಹವುಂಟು; ಆದರೆ ನಿಮ್ಮ ಇಚ್ಛೆಯ ವಿರುದ್ಧವಾದ ಆಗ್ರಹವಿಲ್ಲ.

ವಿಮಲೆ:—ನಾನು ಯಾರೆಂಬದಂತೂ ನಿಮಗೆ ಗೊತ್ತಿರುವದಷ್ಟೇ; ಪಾವಗಡದಲ್ಲಿ ನಾನಿರುವಾಗ ಚಾಲುಕ್ಯ ಸಮ್ರಾಟನು ಮೋಸದಿಂದ ಕೋಟೆಯನ್ನು ಕೈವಶ ಮಾಡಿಕೊಂಡು ನನ್ನ ವೃದ್ಧಪತಿಯನ್ನು ಸೆರೆ ಹಿಡಿದನು. ಆಗ ನಾನು ಆ ನೀಚರ ಕೈಯಲ್ಲಿ ಸಿಗದೆ ಯುಕ್ತಿಯಿಂದ ಚೋರಮಾರ್ಗದಿಂದ ಪಾರಾಗಿ ಬಂದಿರುತ್ತೇನೆ. ಯಾವ ದಿವಸ ಆ ನೀಚನಾದ ಚಾಲುಕ್ಯ ಸಮ್ರಾಟನು ಮೋಸದಿಂದ ನಮ್ಮ ಕೋಟೆಯನ್ನು ಕೈವಶ ಮಾಡಿಕೊಂಡನೋ, ಆ ದಿವಸವೇ ನಾನು ಅವನ ಪಾರುಪತ್ಯ ಮಾಡದೆ ಬಿಡೆನೆಂದು ಪ್ರತಿಜ್ಞೆ ಮಾಡಿರುತ್ತೇನೆ. ಹೀಗೆ ಪ್ರತಿಜ್ಞೆ

ಮಾಡಿದ ನಾನು ನನ್ನ ಕಾರ್ಯಸಾಧನೆಗಾಗಿ ಹೊರಟಿರಲು, ದಾರಿಯಲ್ಲಿ ನನ್ನ ಚತುರದಾಸಿಯೊಬ್ಬಳು ಕ್ರೂರಮೃಗಗಳ ಬಾಧೆಗೀಡಾದಳು. ನಾನೊಬ್ಬಳೇ ಉಳಿದುಕೊಂಡಿರುವೆನು. ಅಕಸ್ಮಾತ್ ಈ ಕಟ್ಟಡವಿಯಲ್ಲಿ ಈ ಗುಡಿಯು ಸಿಕ್ಕದ್ದರಿಂದ, ಇಲ್ಲಿ ಕೆಲವು ದಿನ ಇರಬೇಕೆಂದು ನನಗೆ ಅನಿಸಿದ್ದರಿಂದ, ಇಲ್ಲಿ ನಿಂತುಕೊಂಡಿರುತ್ತೇನೆ. ನಮ್ಮ ಗುಜರಾಥದ ಹೊಸಹೊತ್ತ ಸಂಸ್ಥಾನಿಕರು ಸೊಕ್ಕಿದ ಆ ದಕ್ಷಿಣೀಸಮ್ರಾಟನ ಮದವನ್ನು ಇಳಿಸುವರೋ ಅಥವಾ ಕೈಯಲ್ಲಿ ಬಳೆಯಿಟ್ಟುಕೊಂಡು ಅವನ ಪಾದಸೇವಕರಾಗುವರೋ ನೋಡಬೇಕಾಗಿದೆ!........ಇಷ್ಟು ಮಾತನ್ನಾಡುತ್ತಿರಲು, ವಿಮಲೆಯ ಸಿಟ್ಟು ಅನಿವಾರವಾಯಿತು. ಅವಳ ಮುಖವು ಅತ್ಯಂತ ಕ್ರೂರವಾಗಿ ತೋರಿತು. ಆಗ ಮಾಲೋಜಿಯು ನಡುವೇ ಬಾಯಿಹಾಕಿ:

ಮಾಲೋಜಿ:—ದೇವೀ, ಚಾಲುಕ್ಯ ಸಮ್ರಾಟನು ಇಷ್ಟೊಂದು ನೀಚನಿರುವನೇನು? ಅವನು ಮೇಲಾದ ರಾಜನೀತಿಯ ಪುರುಷನಿರುವನೆಂದು ಕೇಳಿದ್ದೆನಲ್ಲ?

ವಿಮಲೆ:—ಸುಟ್ಟಿತು, ಆತನ ರಾಜನೀತಿಯು! ಒಡಂಬಡಿಕೆಯ ಸಂಧಾನ ನಡಿಸಿ, ನಡುವೇ ಮೋಸ ಮಾಡುವದು ಎಂಥ ರಾಜನೀತಿಯದು? ಇದಲ್ಲದೆ ಅವನ ಸೈನಿಕರೂ ಅತ್ಯಂತ ನೀಚರಿರುವರು. ಗುಜರಾಥದ ಸ್ತ್ರೀಯರೆಂದರೆ ಅವರಿಗೆ ಆಟಿಗೆಯ ಒಡವೆಗಳಾಗಿದ್ದಾರೆ. ಮೋಸದಿಂದ ದುರ್ಗಗಳನ್ನು ಕೈವಶ ಮಾಡಿಕೊಳ್ಳುವದೂ, ಅಲ್ಲಿದ್ದ ಪತಿವ್ರತೆಯರಾದ ಸುಂದರಿಯರ ಮಾನಭಂಗ ಮಾಡುವದೂ ಅವರ ಪವಿತ್ರಕರ್ತವ್ಯಗಳಾಗಿವೆ.

ಮಾಲೋಜಿ (ಮನಸ್ಸಿನಲ್ಲಿ): - ಇದೇನು ವಿಪರೀತ ಪ್ರಸಂಗವು? ನಾನು ಕೇಳಿದ ಸಂಗತಿಗೂ ಇವಳು ಹೇಳುವದಕ್ಕೂ ಪೂರ್ವ-ಪಶ್ಚಿಮಗಳಷ್ಟು ಅಂತರ ಇರುವದು. ನಾನು ಆತನ ಕಡೆಗೆ ಹೋಗಬೇಕೆಂದು ಹೊರಟಿರುವೆನಲ್ಲ. ಇದಕ್ಕೆ ಹೇಗೆ? ಈಕೆಯ ಮುಂದೆ ಆ ಸುದ್ದಿಯನ್ನು ತೆಗೆಯುವ ಹಾಗಿಲ್ಲ. ಒಂದುವೇಳೆ ಇವಳ ಅಭಿಪ್ರಾಯದಂತೆ ಭೂವಡನು ಅಧಮನಾಗಿದ್ದರೆ, ಅವನ ಒಳಿಗೆ ನಮ್ಮಂಥವರು ಹೋಗುವದು ಲಾಂಛನಾಸ್ಪದವೇ! ನಾವೆಲ್ಲರೂ ಒಕ್ಕಟ್ಟಾಗಿ ಅವನಿಗೆ ಪ್ರತಿಸ್ಪರ್ಧಿಗಳಾಗಿ ನಿಲ್ಲಬೇಕು. ಈಗ ನಮ್ಮಲ್ಲಿ ಒಕ್ಕಟ್ಟು ಇಲ್ಲವಿದ್ದರೂ ಅದಕ್ಕಾಗಿ ಪ್ರಯತ್ನ ಮಾಡಲೇಬೇಕು. ಇಂಥ ಹೆಂಗಸರಿಗೇ ಇಷ್ಟೊಂದು ಸಿಟು ಇದ್ದ ಬಳಿಕ, ನಮ್ಮಂಥವರಿಗೆ ಇರಬಾರದೆಂದರೆ ಲಾಂಛನವು! (ಪ್ರಕಾಶ): ವಿಮಲಾ, ಆ ಚಾಂಡಾಲನ ಪಾರುಪತ್ಯಕ್ಕಾಗಿ ನಾನೂ ವೀಳ್ಯವನ್ನು ಎತ್ತುತ್ತೇನೆ; ಆದರೆ ನೀನು ಅವನ ಪಾರುಪತ್ಯಕ್ಕಾಗಿ ಏನೇನು ಯೋಜನೆ ಮಾಡಿರುವೆ?

ವಿಮಲೆ:—ಅವನ ಕಿವಿಯಲ್ಲಿ ಏನೇನೋ ಹೇಳಿದಳು.

ಆಕೆಯ ಆ ಗುಪ್ತಸಂಗತಿಗಳನ್ನು ಕೇಳಿ, ಮಾಲೋಜಿಗೆ ಒಂದು ಬಗೆಯ

ಹುರುಪುಬಂದಿತು. ಅವನು ಆಕೆಯನ್ನು ಅಭಿನಂದಿಸಿ, ನಿನ್ನ ಕಾರ್ಯದಲ್ಲಿ ಸಹಾಯ ಮಾಡುತ್ತೇನೆಂದು ಅವಳಿಗೆ ವಚನ ಕೊಟ್ಟನು. ತಾನು ಅಬಲೆಯಾಗಿದ್ದರೂ, ಸಮ್ರಾಟನೊಡನೆ ಪ್ರತಿಸ್ಪರ್ಧಿನಿಯಾಗ ಹವಣಿಸುವ ವಿಮಲೆಯು, ತನಗೆ ಹೀಗೆ ಈ ಸಹಾಯಸಂಪತ್ತು ದೊರಕಿದ್ದಕ್ಕೆ ಬಹು ಆನಂದಪಟ್ಟಳು. ಅವರಿಬ್ಬರು ಪರ ಸ್ಪರರ ಗುಟ್ಟನ್ನು ಅನ್ಯರಿಗೆ ತಿಳಿಯಗೊಡದಂತೆ, ದೇವಿಯ ಮುಂದೆ ಆಣೆಯನ್ನು ಮಾಡಿದರು. ಮುಂದೆ ಒಂದೆರಡು ದಿನಗಳು ಕಳೆದವು. ಒಂದು ದಿನ ರಾತ್ರಿ ಯಲ್ಲಿ ವಿಮಲೆಯು ಸರೋವರಕ್ಕೆ ಹೋಗಿ, ನಿತ್ಯಕ್ರಮದಂತೆ ದೇವಿಯ ಗುಡಿಗೆ ಬರಲು, ಅಲ್ಲಿಯೊಂದು ವಿಚಿತ್ರ ಸಂಗತಿಯು ವರ್ತಿಸಿತ್ತು. ಗರ್ಭಗುಡಿಯಲ್ಲಿ ಬಹು ದೊಡ್ಡದಾದದೊಂದು ಕಕ್ಕಡವು ಉರಿಯುತ್ತಿದ್ದು, ದೇವಿಯ ಕೊರಳಲ್ಲಿ ಐದು ನರರುಂಡಗಳಿಂದ ಕಟ್ಟಿಸಿದ್ಧವಾದ ಮಾಲೆಯು ಭಯಂಕರವಾಗಿ ತೋರು ತ್ತಿತ್ತು; ನಿರ್ಜನಪ್ರದೇಶದ ಆ ಗುಡಿಯಲ್ಲಿ ಇಂಥ ಆಶ್ಚರ್ಯಕರನೋಟವು ಕಣ್ಣಿಗೆ ಬೀಳಲು, ವಿಮಲೆಯು ಬೆಪ್ಪಾಗಿ ನಿಂತಳು.

---

## ೮ ಮೂವರ ಹಾಳು ಕಲ್ಪನೆ.

ಮಾಲೋಜಿಯು ಜಂಬುಖೇಡ ಸಂಸ್ಥಾನದ ಅಧಿಪತಿಯೆಂಬದನ್ನು ಹಿಂದಿನ ಪ್ರಕರಣದಲ್ಲಿ ನಮ್ಮ ವಾಚಕರು ಓದಿ ತಿಳಿದಿರುವರಷ್ಟೇ? ಕಿರುಮಂಜೆಯ ದುರ್ಗದಲ್ಲಿ ಯಾವ ವಿಷಯಾಂಧ ಸಂಸ್ಥಾನಿಕನು ಓರ್ವ ಸುಂದರತರುಣಿಯನ್ನು ಸೆರೆಯಿರಿಸಿದ್ದನೋ, ಆ ಸಂಸ್ಥಾನಿಕನ ಪಾರುಪತ್ಯ ಮಾಡಬೇಕೆನ್ನುವವರಲ್ಲಿ ಈ ಮಾಲೋಜಿಯೂ ಒಬ್ಬನಾಗಿದ್ದನು. ಕಿಂಬಹುನಾ, ಇವನೇ ಅಗ್ರಗಣ್ಯನೆಂದು ಹೇಳಬಹುದು. ಆದ್ದರಿಂದ ಆ ವಿಷಯಾಂಧ ಸಂಸ್ಥಾನಿಕನು ಮಾಲೋಜಿಯ ಮೇಲೆ ವಿಷವನ್ನು ಕಾರುತ್ತಿದ್ದನೆಂಬದು ಸ್ವಾಭಾವಿಕವು. ಹೀಗಿರಲು ಮಾಲೋ ಜಿಯು ಸೈನ್ಯಭರತಿಗಾಗಿ ಬೇರೊಂದು ಸಂಸ್ಥಾನಕ್ಕೆ ಹೋಗಿರಲು, ಅವನ ಶತ್ರು ಗಳು ಜಂಬುಖೇಡವನ್ನು ಮುತ್ತಿ ಅದನ್ನು ಕೈವಶ ಮಾಡಿಕೊಂಡದ್ದಲ್ಲದೆ, ಕರ್ಮ-ಧರ್ಮ ಸಂಯೋಗದಿಂದ ಹಾದಿಯಲ್ಲಿ ಸಿಕ್ಕ ಮಾಲೋಜಿಯ ಮೇಲೆ ಸಾಗಿ ಹೋದರು. ಈ ಕಾಳಗದಲ್ಲಿ ಮಾಲೋಜಿಯ ಚಿಕ್ಕ ದಂಡು ಧಾರಾ ತೀರ್ಥದಲ್ಲಿ ಪತನ ಹೊಂದಿತು. ವಿಶ್ವಾಸುಕನಾದ ಒಬ್ಬ ಸೇವಕನೊಂದಿಗೆ ಮಾಲೋಜಿಯು ಪಲಾಯನಸೂಕ್ತವನ್ನು ಪಠಿಸಿದನು!

ಈ ಮೇರೆಗೆ ರಾಜ್ಯಭ್ರಷ್ಟನಾದ ಮಾಲೋಜಿಯು ತನ್ನ ದೋಸ್ತ ಸಂಸ್ಥಾ ನಿಕರಲ್ಲಿ ತಾಳವಿಲ್ಲದ್ದನ್ನು ಕಂಡು, ಇಲ್ಲಿದ್ದರೆ ಪ್ರಯೋಜನವಾಗದೆಂದು ತಿಳಿದು,

ಅನಿವಾರ ಸಂತಾಪದಿಂದ ಶತ್ರುಗಳ ಪಾರುಪತ್ಯಕ್ಕಾಗಿ ಏನು ಮಾಡಬೇಕೆಂದು ಯೋಚಿಸುತ್ತಿರಲು, ಗುರ್ಜರ ಅನ್ಯಾಯಿ ಸಂಸ್ಥಾನಿಕರನ್ನು ದಂಡಿಸ ಬಂದ ಧರ್ಮದೇವತೆಯೋ ಎಂಬಂತೆ ತೋರುವ ಚಾಲುಕ್ಯ ಸಮ್ರಾಟನು ಅವನ ಲಕ್ಷ್ಯದಲ್ಲಿ ಬಂದನು. ಸಮ್ರಾಟನು ಗುರ್ಜರ ರಾಷ್ಟ್ರಕ್ಕೆ ಸಾಮಾನ್ಯ ಶತ್ರುವಾಗಿದ್ದರೂ ನ್ಯಾಯಪದ್ಧತಿಯು ಉತ್ತಮವಾದದ್ದೆಂದು ಕೇಳಿದ್ದರಿಂದ, ಆತನಿಗೆ ಸಮ್ರಾಟನ ಆಗಮನವು ಒಂದು ಬಗೆಯಿಂದ ಯುಕ್ತವೆಂದೇ ತೋರುತ್ತಿತ್ತು. ಆದ್ದರಿಂದ ಅವನು ಅನಾಯಾಸವಾಗಿ ಬಂದಿರುವ ಸಮ್ರಾಟನ ಸಹಾಯ ಪಡೆದು, ತನ್ನ ಶತ್ರುಗಳ ಸೊಲ್ಲು ಅಡಗಿಸಬೇಕೆಂದು ಹವಣಿಸುತ್ತಿದ್ದನು. ಇದಕ್ಕಾಗಿ ಅವನು ಸಮ್ರಾಟನು ಎಲ್ಲಿರುವನೆಂಬನ್ನು ಗೊತ್ತುಹಚ್ಚುವದಕ್ಕಾಗಿ ಹೊರಟಿದ್ದನು. ಶತ್ರುಗಳಿಂದ ತನಗೆ ಯಾವ ಬಗೆಯ ಅಪಾಯವೂ ತಟ್ಟಬಾರದೆಂದು ಅವನು ತನ್ನ ಪಯಣವನ್ನು ಕಟ್ಟಡವಿಯ ಮಾರ್ಗದಿಂದಲೇ ಸಾಗಿಸಿದ್ದನು. ಹೀಗೆ ಅವನು ಸಾಗಿರುವಾಗ ಹಿಂದಿನ ಪ್ರಕರಣದಲ್ಲಿ ಹೇಳಿದಂತೆ ದೇವಿಯ ಗುಡಿಯು ಹತ್ತಲು ಅದರಲ್ಲಿ ಅವನು ವಸ್ತಿಯನ್ನು ಮಾಡಿದನು. ಈ ವಸತಿಯೇ ಹಿಂದೆ ಹೇಳಿದಂತೆ ಅವನಿಗೆ ವಿಮಲೆಯ ಭೆಟ್ಟಿಯನ್ನು ಒದಗಿಸಿಕೊಟ್ಟಿತು. ಇರಲಿ.

ಮಾಲೋಜಿಯು ಕೈಗೆ ಸಿಗದೆ ಓಡಿಹೋಗಲು, ಅವನ ಶತ್ರುಗಳಿಗೆ ಬಹು ವಿಷಾದವಾಯಿತೆಂಬದನ್ನು ಬರೆಯುವ ಕಾರಣವಿಲ್ಲ. ಅವರು ಅವನ ಶೋಧದಲ್ಲಿದ್ದರು. ಮಾಲೋಜಿಯನ್ನು ಹುಡುಕುವದಕ್ಕೋಸ್ಕರ ನೂರು ಜನರದೊಂದು ಪಥಕವು ಹೊರಟಿತು. ಆ ದಂಡಾಳುಗಳು ಗುಡ್ಡ-ಗಂಹ್ವರಗಳನ್ನು ತಿರುಗುತ್ತ ಯಾವ ದೇವಿಯ ಗುಡಿಯಲ್ಲಿ ಅವನು ವಾಸಿಸುತ್ತಿದ್ದನೋ ಆ ಅಡವಿಗೆ ಬಂದರು. ಅಷ್ಟರಲ್ಲಿ ಮಾಲೋಜಿಯ ಪಕ್ಷದ ಐವರು ಅಶ್ವಾರೂಢರು ಅವರ ದೃಷ್ಟಿಗೆ ಬಿದ್ದರು. ಆ ಅಶ್ವಾರೂಢರು ತಮ್ಮ ಯಜಮಾನನನ್ನು ಹುಡುಕುವದಕ್ಕೆಂದು ಹೊರಟಿದ್ದರು; ಆದರೆ ಅವರು ತಮ್ಮ ಒಡೆಯನನ್ನು ಕಾಣುವದರ ಬದಲು, ತಾವೇ ಶತ್ರುಗಳಿಗೆ ಕೊರಳು ಕೊಟ್ಟು, ಭೂಲೋಕದ ಯುದ್ಧಪದ್ಧತಿಯನ್ನು ತಿಳಿಸುವದಕ್ಕಾಗಿ ಅನ್ಯಲೋಕಕ್ಕೆ ತೆರಳಿದರು. ಮಾಲೋಜಿಯ ಮದೋನ್ಮತ್ತರಾದ ಶತ್ರುಗಳು ಆ ಐವರ ಚಂಡುಗಳನ್ನು ಕೊಯ್ದು ಭಲ್ಲೆಗಳಿಗೆ ಚುಚ್ಚಿಕೊಂಡು ವಿನೋದದಿಂದ ಸಾಗಿರಲು, ಅವರಿಗೆ ದೇವಿಯ ಗುಡಿಯು ಹತ್ತಿತು. ವಿಜಯದಿಂದ ಕೊಬ್ಬಿದ ಆ ಮೂರ್ಖರು, ಧರ್ಮಭೀತಿಯನ್ನು ತೊರೆದು, ದೇವಲಂಡರಾಗಿ ಆ ರುಂಡಗಳ ಮಾಲೆಯನ್ನು ಕಟ್ಟಿ ದೇವಿಯ ಕೊರಳಿಗೆ ಹಾಕಿ ನಡೆದರು. ಈ ಮೇರೆಗೆ ಅವರು ಹೀಗೆ ಅನಾಹೂತ ಕಾರ್ಯಗಳನ್ನು ಮಾಡಿ, ತಮ್ಮ ಚಾಂಡಾಲತನವನ್ನು ಜಗತ್ತಿಗೆ ತೋರಿಸಿಕೊಟ್ಟರು!

ಹೀಗೆ ಮಾಲೋಜಿಯು ಶತ್ರುಗಳು ಹಾಕಿದ ರುಂಡಮಾಲೆಯನ್ನೇ ನೋಡಿ, ಹಿಂದಿನ ಪ್ರಕರಣದ ಕೊನೆಯಲ್ಲಿ ಹೇಳಿದಂತೆ ವಿಮಲೆಯು ಬೆಪ್ಪಳಾಗಿ ನಿಂತಳು. ಅವಳ ಕೆಚ್ಚೆದೆಯು ಆ ರಾತ್ರಿಯಲ್ಲಿ ದೇವಿಯ ಆ ಭಯಂಕರ ಸ್ವರೂಪವನ್ನು ನೋಡಿ ನಡುಗದೆ ಇರಲಿಲ್ಲ. ಬಹಳ ಹೇಳುವದೇನು? ಅವಳಿಗೆ ಅಲ್ಲಿ ಒಂದು ಕ್ಷಣ ಸಹ ನಿಲ್ಲಲಿಕ್ಕಾಗಲಿಲ್ಲ. ಕೂಡಲೆ ಅವಳು ಗುಹೆಯ ವರೆಗೆ ಓಡುತ್ತ ಹೋದಳು. ಅವಳು ಗುಹೆಯಲ್ಲಿ ಪ್ರವೇಶ ಮಾಡಿ ಎರಡನೆಯ ಚೌಕಿನಲ್ಲಿ ನಿಂತು ಕೊಂಡಳು. ಆಗ ಅವಳು ಚಳಿ ಬಂದವರಂತೆ ನಡಗುತ್ತಿದ್ದಳು. ಮಾತಾಡ ಬೇಕೆಂದರೆ ಬಾಯಿಂದ ಅಕ್ಷರಗಳೇ ಹೊರಡದಾದವು. ಆಕೆಯ ಸ್ಥಿತಿಯು ಹೀಗೆ ಶೋಚನೀಯವಾಗಿರಲು, ಅಲ್ಲಿಯೇ ಸಮೀಪದ ಕೋಣೆಯೊಳಗೆ ಮಲಗಿದ ಮಾಲೋಜಿಯು ಅಕಸ್ಮಾತ್ತಾಗಿ ಎಚ್ಚತ್ತನು. ಬಾಗಿಲ ಬಳಿಯಲ್ಲಿ ಮನುಷ್ಯಾ ಕೃತಿಯು ಕಂಡು ಬಂದದ್ದರಿಂದ, ಅವನು ಎದ್ದು ಕುಳಿತು ದಿಟ್ಟಿಸಿ ನೋಡಿದನು. ನಿಂತ ವ್ಯಕ್ತಿಯು ವಿಮಲೆಯೇ ಇರಬಹುದೆಂದು ಕಂಡು ಬಂದಿತು. ಬಳಿಕ ಅವನು:—ವಿಮಲಾದೇವೀ, ಎಂದು ಮಾತಾಡಿಸಿದನು. ವಿಮಲೆಗೆ ಉತ್ತರ ಕೊಡುವದಕ್ಕೆ ಬಾಯಿ ಬಾರದ್ದರಿಂದ, ಅವಳು 'ಕ್ಕ-ಕ್ಕ' ಎಂದು ಮಾಡುತ್ತ, ಸುಮ್ಮನೆ ನಿಂತಳು. ಇದೇನು ಸೋಜಿಗವೆಂದು ಮಾಲೋಜಿಯು ಎದ್ದು ಬಂದು ನೋಡಲು, ವಿಮಲೆಯು ನಡುಗುತ್ತಿದ್ದುದು ಕಂಡು ಬಂದಿತು. ಇಷ್ಟೇ ಅಲ್ಲ; ಅವಳ ಮುಖಲಕ್ಷಣವು ಹೆದರಿಕೆಯ ಚಿಹ್ನವನ್ನು ಹೊಂದಿತ್ತು. ಅವಳು ಮಾತಾ ಡಲಿಕ್ಕೆ ಆತುರಪಡುತ್ತಿದ್ದು, ಶಬ್ದಗಳನ್ನುಚ್ಚರಿಸಲಿಕ್ಕೆ ತಡೆಯಾಗುತ್ತದೆಂಬದು ಸ್ಪಷ್ಟವಾಗಿ ತಿಳಿಯುತ್ತಿತ್ತು. ಇದೆಲ್ಲ ಪ್ರಕಾರವನ್ನು ನೋಡಿ ಇವಳು ಎಲ್ಲಿಯೋ ಹೆದರಿರುವಳೆಂದು ಮಾಲೋಜಿಯು ತರ್ಕಿಸಿ, ಅವಳಿಗೆ ನಾಲ್ಕು ಧೈರ್ಯೋಕ್ತಿ ಗಳನ್ನು ಹೇಳಿದನು. ವಿಮಲೆಯ ಹೆದರಿಕೆಯು ಮೆಲ್ಲಮೆಲ್ಲನೆ ಕಡಿಮೆಯಾದ್ದರಿಂದ, ಅವಳು ಗುಡಿಯಲ್ಲಿ ನೋಡಿದ ಪ್ರಕಾರವನ್ನೆಲ್ಲ ಅವನ ಮುಂದೆ ಹೇಳಿದಳು. ಈ ಅಡವಿಯಲ್ಲಿ ಹನ್ನೆರಡು ದಿನಗಳ ವರೆಗೆ ಅಂಜದೆ ಕಾಲಹರಣ ಮಾಡಿದ ವಿಮಲೆಗೆ ಈ ದಿನ ಇಷ್ಟು ಭಯವುಂಟಾಗಬೇಕಾದರೆ, ನಡೆದ ಪ್ರಸಂಗವು ಅತಿ ಭಯಂಕರ ವಿರಬೇಕೆಂಬದು ಮಾಲೋಜಿಗೆ ಹೊಳೆಯದೆ ಇರಲಿಲ್ಲ. ಇಂಥ ಅಜ್ಞಾತ ಅಡವಿ ಯಲ್ಲಾದರೂ ಮನುಷ್ಯರ ಸುಳಿದಾಟವಿರುತ್ತದೆಂಬದನ್ನು ತಿಳಿದು, ಅವನು ವಿಸ್ಮ ಯಪಟ್ಟನು; ಆದರೆ ಇಂಥ ಘೋರ ಕೃತ್ಯವನ್ನು ಯಾರು ಮಾಡಿರಬಹುದೆಂಬ ಯೋಚನೆಯು ಅವನ ಕಲ್ಪನೆಯಲ್ಲಿ ಮುಖ್ಯಸ್ಥಾನವನ್ನು ಹೊಂದಿತು. ಆಗ ಅವನು ಗುಡಿಗೆ ಹೋಗಿ ಬರಬೇಕೆಂಬ ಇಚ್ಛೆಯನ್ನು ತೋರಿಸಿದನು. ತನ್ನ ಶತ್ರುಗಳು ಇಲ್ಲಿಗೆ ಬರುವದು ಅಸಂಭವವೆಂದು ಅವನು ಖಂಡಿತವಾಗಿ ತಿಳಿದಿ

ದ್ದನು. ಆದ್ದರಿಂದ ಅವನು ತನ್ನ ಸೇವಕನನ್ನು ಎಬ್ಬಿಸಿ ಅವನಿಗೆ ಎಲ್ಲ ಸಂಗತಿಗಳನ್ನು ಹೇಳಿದನು. ಬಳಿಕ ಅವರಿಬ್ಬರೂ ಗುಡಿಯ ಕಡೆಗೆ ಹೊರಟರು. ವಿಮಲೆಯು ಒಬ್ಬಳೇ ಆ ಸ್ಥಿತಿಯಲ್ಲಿ ಆ ಗುಹೆಯೊಳಗೆ ಇರಲಾರದೆ, ಸಂಗಡಿಗರಿದ್ದದರಿಂದ ಧೈರ್ಯವನ್ನು ತಂದುಕೊಂಡು, ತಾನೂ ಅವರನ್ನು ಹಿಂಬಾಲಿಸಿ ನಡೆದಳು.

ಮಾಲೋಜಿಯು ಗುಡಿಗೆ ಹೋದಾಗ ದೇವಿಯ ಮುಂದಿನ ಕಕ್ಕಡವು ಶಾಂತವಾಗುತ್ತ ಬಂದಿತ್ತು. ಅದರ ಮಂದಪ್ರಕಾಶವು ಗುಡಿಯ ತುಂಬ ಪಸರಿಸಿತ್ತು; ದೇವಿಯ ಮೈಮೇಲೆ ವಿಶೇಷ ಪ್ರಕಾಶವಿಲ್ಲದ್ದರಿಂದ, ಅವರಿಗೆ ಆ ದೃಶ್ಯವು ಅಷ್ಟು ಭಯಂಕರವಾಗಿ ಕಂಡು ಬರಲಿಲ್ಲ. ವಿಮಲೆಯು ಹೆದರುತ್ತ-ಹೆದರುತ್ತ ಗರ್ಭಗುಡಿಯೊಳಗೆ ಕಾಲಿಟ್ಟು ದೇವಿಯ ಮುಂದೆ ಹಚ್ಚುವದಕ್ಕಾಗಿ ತಂದಿದ್ದ ಕಪ್ಪುರದ ಒಡೆಗಳನ್ನು ಆ ಕಕ್ಕಡದೊಳಗೆ ಹಾಕಿದಳು. ಬಳಿಕ ಕೇಳುವದೇನು? ಜ್ಯೋತಿಯು ಹೆಚ್ಚಿ ದೇವಿಯ ಕೊರಳೊಳಗಿನ ರುಂಡಮಾಲೆಯು ನಿಚ್ಚಳವಾಗಿ ಕಾಣಿಸಹತ್ತಿತು. ಮಾಲೋಜಿಯೂ ಅವನ ಸಂಗಡಿಗನೂ ಅಂಜದೆ ತೀರ ದೇವಿಯ ಹತ್ತರ ಹೋಗಿ ನೋಡಿದರು. ಆ ಮಾಲೆಯನ್ನು ನೋಡಿ-ನೋಡಿದಂತೆ ಅವರ ದುಃಖ-ಸಂತಾಪಗಳು ಹೆಚ್ಚತೊಡಗಿದವು. ಆಗ ಮಾಲೋಜಿಯು ತನ್ನ ಸಂಗಡಿಗನನ್ನು ಕುರಿತು:—ಖೇಮಾಜೀ, ಏನು ಅನರ್ಥವಿದು? ನಮ್ಮ ಪ್ರೀತಿಯ ಸರದಾರನಾದ ಹರಿಸಿಂಗನು ತನ್ನ ಸಂಗಡಿಗರೊಡನೆ ಇಂಥ ಅನಾಹೂತಕ್ಕೆ ಗುರಿಯಾದನೆ? ಹಾಯ್ ಹಾಯ್! ಈತನ ಈ ರುಂಡವನ್ನು ನಾನು ಹೇಗೆ ನೋಡಲಿ? ಖೇಮಾಜಿ, ಇವರು ಇಲ್ಲಿಗೇಕೆ ಬಂದಿರಬಹುದು? ಇಲ್ಲಿಯೇ ಇವರ ರುಂಡಗಳು ಕಡಿಯಲ್ಪಟ್ಟಿದ್ದರೆ, ಇವರ ದೇಹಗಳು ಇರಬೇಕಲ್ಲವೆ? ಮೋಲಾಗಿ ಇವರನ್ನು ಇಲ್ಲಿ ಸಂಹರಿಸುವವರಾರು? ಎಂದು ನುಡಿದನು. ಖೇಮಾಜಿಯು ಬಹು ಧೂರ್ತನಿದ್ದನು. ಅವನು ಕೂಡಲೆ ತರ್ಕದಿಂದ ನಿಜಸ್ಥಿತಿಯನ್ನು ಕಂಡು ಹಿಡಿದು ನುಡಿದನೇನಂದರೆ: "ಮಹಾರಾಜ, ಈ ನಮ್ಮ ಸರದಾರನು ನಮ್ಮನ್ನು ಹುಡುಕುವದಕ್ಕಾಗಿ ಹೊರಟು ಶತ್ರುಗಳ ಕೈಗೆ ಸಿಕ್ಕಿರಬಹುದು. ಬಹುಶಃ ಶತ್ರುಗಳು ನಮ್ಮ ಶೋಧಾರ್ಥವಾಗಿ ತಿರುಗುತ್ತಿರುವರೆಂಬಂತೆ ತೋರುತ್ತದೆ. ಅವರ ಆಗಮನವು ಇಲ್ಲಿಗೇ ಆಗಿರಬಹುದು. ಅವರೇ ಈ ರುಂಡಗಳ ಮಾಲೆಯನ್ನು ಕಟ್ಟಿ, ದೇವಿಗೆ ಸಮರ್ಪಿಸಿರುವರು. ಸುದೈವದಿಂದ ನಾವಿರತಕ್ಕ ಗುಹೆಯೇ ಅವರಿಗೆ ಗೊತ್ತಾಗಿಲ್ಲ. ಗುಹೆಯು ಬೈಲಿಗೆ ಕಾಣುತ್ತಿದ್ದರೆ ಅವರು ಒಳಸೇರದೆ ಬಿಡುತ್ತಿದ್ದಿಲ್ಲ. ಇದೇ ನಮ್ಮ ಮೇಲೆ ದೇವಿಯ ಅನುಗ್ರಹವೆಂದು ತಿಳಿಯಬೇಕು.'

ಖೇಮಜಿಯ ಈ ತರ್ಕವು ಮಾಲೋಜಿಗೆ ಸಮರ್ಪಕವಾಗಿ ತೋರಿತು.

ಬಳಿಕ ಆತನು ಖೇಮಜಿಯೊಡನೆ ದೇವಿಯ ಕೊರಳೊಳಗಿನ ಆ ಮಾಲೆಯನ್ನು ತೆಗೆದು, ಆ ರಾತ್ರಿಯಲ್ಲಿಯೇ ಅವುಗಳ ವಿಧಿಯನ್ನು ಮುಗಿಸಿಬಿಟ್ಟರು. ಅನಂತರ ಅವರಿಬ್ಬರು ಸರೋವರದೊಳಗೆ ಸ್ನಾನ ಮಾಡಿ ತಾವರೆಯ ದೊಡ್ಡ ದೊಡ್ಡ ಎಲೆಗಳಲ್ಲಿ ನೀರು ತಂದು ಬಹು ದಿವಸಗಳಿಂದ ನೀರು ಕಾಣದೆ ಇದ್ದ ದೇವಿಯನ್ನು ಸ್ವಚ್ಛವಾಗಿ ತೊಳೆದದ್ದಲ್ಲದೆ, ಗರ್ಭಗುಡಿಯನ್ನೆಲ್ಲ ಶುದ್ಧ ಮಾಡಿದರು. ಬಳಿಕ ಅವರು ದೇವಿಯ ಮುಂದೆ ಕರ್ಪೂರದ ಒಡೆಗಳನ್ನು ಸುಟ್ಟು, ತಿರುಗಿ ಗುಹೆಗೆ ಬಂದರು. ಇಷ್ಟೆಲ್ಲ ವಿಧಿ ಮುಗಿಯುವದರೊಳಗೆ ಸೂರ್ಯೋದಯವಾಗಿ ಎಲ್ಲ ಕಡೆಗೆ ಸ್ವಚ್ಛಪ್ರಕಾಶವು ಬಿದ್ದಿತ್ತು. ಗುಡಿಯ ಮುಂದಿನ ಬೈಲಿನಲ್ಲಿ ಬಹು ಜನರ ಹೆಜ್ಜೆಗಳು ಮೂಡಿದ್ದರಿಂದಲೂ, ಕುದುರೆಗಳ ಖುರಗಳು ಮಣ್ಣಿನೊಳಗೆ ಸ್ವಚ್ಛವಾಗಿ ಕಾಣುತ್ತಿದ್ದುದರಿಂದಲೂ ಖೇಮಜಿಯ ತರ್ಕವು ನಿಜವೆಂದು ಕಂಡು ಬಂದಿತು.

ಮಾಲೋಜಿಗೆ ತನ್ನ ಶತ್ರುಗಳ ದೌರ್ಜನ್ಯದ ವಿಷಯವಾಗಿ ಬಹು ಸಂತಾಪವಾಗಿತ್ತು. ಗುರ್ಜರಭೂಮಿಯಲ್ಲಿ ಅಂಥ ಯೋಗ್ಯರಾದವರು ತನಗೆ ಈ ಕಾಲಕ್ಕೆ ಯಾರು ಸಹಾಯ ಮಾಡುವರೆಂಬುದು ಅವನಿಗೆ ತೋಚದಾಯಿತು. ಚಾಲುಕ್ಯ ಸಮ್ರಾಟನನ್ನು ನಂಬಿ ತನ್ನ ಶತ್ರುಗಳ ಸೇಡು ತೀರಿಸಿಕೊಳ್ಳಬೇಕೆಂದರೆ ನಡುವೇ ವಿಮಲೆಯು ಗಂಟುಬಿದ್ದದರಿಂದ, ಅವಳ ಪ್ರೀತ್ಯರ್ಥವಾಗಿ ಅವನ ಮನಸ್ಸು ಆ ಸಮ್ರಾಟನನ್ನು ತಿರಸ್ಕರಿಸುತ್ತಿತ್ತು. ಹೀಗಾಗಿ ಅವನು ಧಡವನ್ನು ಕಾಣದೆ ತಿರುಗುವ ನೌಕೆಯಂತೆ ಬಹಳ ಗಾಸಿಯಾಗತೊಡಗಿದನು. ಅವನ ಮನಸ್ಸು ಎರಡು ಬಗೆಯ ಸುಖವನ್ನು ಬಯಸುತ್ತಿತ್ತು. ತನ್ನ ಶತ್ರುಗಳ ಪೂರ್ಣ ಪರಾಭವವಾಗುವದು ಅವನ ಸೌಖ್ಯಕ್ಕೆ ಮೊದಲನೆಯ ಕಾರಣವಾಗಿತ್ತು. ವಿಮಲೆಯ ಪ್ರೇಮವನ್ನು ಸಂಪಾದಿಸುವದು ಅವನ ಎರಡನೆಯ ಸೌಖ್ಯವಾಗಿತ್ತು. ಈ ಎರಡೂ ಸೌಖ್ಯಗಳು ಒಂದಕ್ಕೊಂದು ವಿರುದ್ಧವಾಗಿದ್ದವು; ಯಾಕಂದರೆ ಶತ್ರುಗಳನ್ನು ನಾಶ ಮಾಡಬೇಕಾದರೆ, ಅವನು ಚಾಲುಕ್ಯ ಸಮ್ರಾಟನನ್ನು ಆಶ್ರಯಿಸಬೇಕಾಗಿತ್ತು; ಸಮ್ರಾಟನನ್ನು ಆಶ್ರಯಿಸಿದರೆ ವಿಮಲೆಯ ಪ್ರೇಮವು ತಪ್ಪುತ್ತಿತ್ತು.

ಮನುಷ್ಯನಿಗೆ ಸ್ತ್ರೀ ವ್ಯಾಮೋಹವು ಮೀರಲಶಕ್ಯವಾದ ಬಂಧನವೆಂದು ಹೇಳಬಹುದು. ಯಾಕಂದರೆ ಅದಕ್ಕೊಳಗಾದ ಮನುಷ್ಯನು ಎಂಥ ಉಚ್ಚಧ್ಯೇಯವಿದ್ದರೂ ಮರೆತು ಬಿಡುವನು; ಮತ್ತು ಎಂಥ ಸುಖವನ್ನಾದರೂ ತುಚ್ಛೀಕರಿಸುವನು. ಇತಿಹಾಸವನ್ನಾಗಲಿ ಪುರಾಣವನ್ನಾಗಲಿ ನಿರೀಕ್ಷಿಸಿದರೆ, ಅದರಲ್ಲಿಯ ವಿಷಯಾಂಧಪಾತ್ರಗಳು ಸ್ತ್ರೀವ್ಯಾಮೋಹದಿಂದ ಧರ್ಮ-ವೈಭವ-ಕೀರ್ತಿ ಮೊದಲಾದವುಗಳನ್ನು ಬಿಸುಟಿ ಬಿಟ್ಟದ್ದು ಕಂಡು ಬರುವದು. ಒಟ್ಟಿಗೆ ಹೇಳತಕ್ಕದ್ದೇ

ನಂದರೆ:—ಸ್ತ್ರೀ ವ್ಯಾಮೋಹವೆಂಬದು ಅತ್ಯಂತ ಮಾದಕವಿರುವದು. ಅದರ ಸಂಸರ್ಗದಿಂದ ಮನುಷ್ಯನ ಸದಸದ್ವಿವೇಕವು ನಷ್ಟವಾಗಿ ಹೋಗುವದು.

ಮಾಲೋಜಿಯು ವಿಮಲೆಯ ಮೋಹಪಾಶದಲ್ಲಿ ಸಿಕ್ಕದ್ದರಿಂದ ಕರ್ತವ್ಯ ಮೂಢನಾದನು. ಚಾಲುಕ್ಯ ಸಮ್ರಾಟನ ಕಡೆಗೆ ಹೋಗಿ ಶತ್ರುಗಳನ್ನು ಬಗ್ಗು ಬಡಿಯುವ ಅವನ ಉತ್ಕಟೇಚ್ಛೆಯು, ವಿಮಲೆಯ ಪ್ರೇಮವು ತಪ್ಪುವದೆಂಬ ಭಯ ದಿಂದ ಕುಗ್ಗಿಹೋಯಿತು. ವಿಮಲೆಯ ನಿಕಟ ಸಾನ್ನಿಧ್ಯವು ದೊರೆತ ಮಾತ್ರಕ್ಕೇ ಅವನು, ಆಕೆಯು ತನಗೆ ಪ್ರಾಪ್ತಳಾಗುವಳೆಂಬ ಭ್ರಾಂತಿಮಯ ಕಲ್ಪನೆಗಳನ್ನು ಮಾಡಹತ್ತಿದನು. ಅವನು ಚಾತ್ಯಾ ಪಾಪಭೀರುವಿದ್ದರೂ. ವಿಮಲೆಯ ಅಮೋಘವಾದ ರೂಪಲಾವಣ್ಯವು ಅವನನ್ನು ಬಲಾತ್ಕರಿಸಿ, ಪಾಪಯೋಚನೆಯಲ್ಲಿ ತೊಡಗಿಸಿತು. ಈ ಯೋಚನೆಯು ಅವನ ಮನಸ್ಸನ್ನು ವ್ಯಾಪಿಸಿಬಿಟ್ಟಿತು. ಅನುಕೂಲ ಕಾಲ ಬರುವವರೆಗೆ, ಅಂದರೆ ವೈಭವದಿಂದ ವಿಮಲೆಯನ್ನು ಲಗ್ನವಾಗುವ ವರೆಗೆ ಆಕೆಯನ್ನು ಮುಟ್ಟಬಾರದೆಂದು ಅವನು ಸಂಕಲ್ಪಮಾಡಿದ್ದರೂ, ಅವನ ಮನಸ್ಸು ವಿಮಲೆಯ ಕಾಲ್ಪನಿಕ ಸುಖೋಪಭೋಗವನ್ನು ಯಥೇಷ್ಟವಾಗಿ ಹೊಂದುತ್ತಿತ್ತು.

ಈ ಮೇರೆಗೆ ಮಾಲೋಜಿಯು ಶತ್ರುಗಳ ಉಪಟಳವನ್ನು ಪ್ರತ್ಯಕ್ಷ ಕಂಡರೂ, ಅವರು ತಮ್ಮನ್ನು ಹಿಡಿಯುವದಕ್ಕೆ ತಿರುಗುತ್ತಿರುವರೆಂಬದನ್ನು ಅರಿತರೂ ಅವರ ಪ್ರತೀಕಾರೋಪಾಯಗಳನ್ನು ಕಲ್ಪಿಸಿದೆ, ಯಾವನೊಬ್ಬ ಮೂರ್ಖನಂತೆ ವಿಮಲೆಯ ಕಾಲ್ಪನಿಕಸುಖದಲ್ಲಿ ಮುಗ್ಧನಾಗಿರಲು, ಅತ್ತ ವಿಮಲೆಯು ತಾನು ಅಚಾತುರ್ಯದಿಂದ ಚಾಲುಕ್ಯ ಸಮ್ರಾಟನಲ್ಲಿ ಅನುರಕ್ತಳಾದದ್ದಕ್ಕೆ ಬಹು ವಿಧವಾಗಿ ಪಶ್ಚಾತ್ತಾಪಪಟ್ಟು, ಒಮ್ಮೆ ಆ ಕೃತಘ್ನನ ಸೇಡುತೀರಿಸಿ, ಈ ಶರೀರವನ್ನು ನೀಗಲಾಡಿಬಿಡಬೇಕೆಂದು ಯೋಚಿಸುತ್ತಿದ್ದಳು; ಮತ್ತು ಸಮ್ರಾಟನ ಪಾರುಪತ್ಯಕ್ಕಾಗಿ ಮಾಲೋಜಿವೀರನು ವೀಳ್ಯವನ್ನು ಎತ್ತಿದ್ದಕ್ಕೆ ಸಂಭ್ರಮಪಡುತ್ತಿದ್ದಳು. ಇವರಿಬ್ಬರಲ್ಲಿ ಹೀಗೆ ಬಗೆಬಗೆಯ ಕಲ್ಪನೆಗಳು ನಾಮುಂದೆ-ನಾಮುಂದೆ ಎಂದು ಮೇಲಾಡುತ್ತಿರುವಾಗ, ಖೇಮಜಿಯಲ್ಲಿಯೂ ಕಲ್ಪನೆಗಳ ಸಾಮ್ರಾಜ್ಯವು ನೆಲೆಗೊಂಡು ಹೋಗಿತ್ತು. "ತಾನು ಈ ರೀತಿ ತನ್ನ ಒಡೆಯನಿಗೆ ಸಹಾಯ ಮಾಡುವದರಿಂದ ದೇವರ ದಯದಿಂದ ಸುದಿನಗಳು ಬಂದಾಗ ತಾನೇ ಜಂಬುಖೇಡದ ಸಚಿವನಾಗುವೆನೆ"ಂದು ಅವನು ಹವಣಿಸುತ್ತಿದ್ದನು. ಅವನು ರಾತ್ರಿಯಲ್ಲಿ ನೋಡಿದ ಪ್ರಸಂಗವನ್ನು ಸಂಪೂರ್ಣವಾಗಿ ಮರೆತುಬಿಟ್ಟು ತನ್ನ ಭಾವೀ ಸುಖಸಾಮ್ರಾಜ್ಯದಲ್ಲಿ ಮುಳುಗಿದನು. ತಾನೂ-ತನ್ನ ಒಡೆಯನೂ ಪರದೇಶಿಗಳಾಗಿ ತಿರುಗುತ್ತಿದ್ದರೂ, ಅವನಿಗೆ ಅಂದಿನ ಆ ಕಲ್ಪನೆಯು ಬಹು ರಮ್ಯವಾಗಿ ತೋರಿತು. ಇನ್ನು

ಮುಂದೆ ಮಾಲೋಜಿರಾಯರನ್ನು ಎಲ್ಲಿಗೆ ಕರೆದುಕೊಂಡು ಹೋಗಬೇಕು, ಸೈನ್ಯ ವನ್ನು ಹೇಗೆ ಕೂಡಿಸಬೇಕು, ವಿಮಲೆಗೆ ಕೊಟ್ಟ ವಚನವನ್ನು ಹೇಗೆ ನಿಸ್ತರಿಸಿ ಕೊಳ್ಳಬೇಕು? ಎಂಬ ವಿಚಾರಗಳನ್ನು ಮಾಡುತ್ತ, ಈ ವಿಚಾರಗಳಲ್ಲಿ ನಾನು ಯಶಸ್ವಿಯಾದರೆ ನಿಶ್ಚಯವಾಗಿ ಘನತೆಗೇರುವೆನು. ಯಾಕೆ? ಇಷ್ಟು ಕೆಲಸವು ನನ್ನಿಂದ ಆಗಲಿಕ್ಕಿಲ್ಲವೇ? ಎಂದು ಯೋಚಿಸಲುಪಕ್ರಮಿಸಿದನು. ಈ ರೀತಿ ಯಾಗಿ ಆ ಗವಿಯಲ್ಲಿ ಆ ಮೂವರು ಹಾಳು ಕಲ್ಪನೆಗಳಲ್ಲಿ ಮಗ್ನರಾಗಿ, ರಾತ್ರಿ ಯಲ್ಲೆಲ್ಲ ನಿದ್ದೆಗೆಟ್ಟದ್ದರಿಂದ ನಿದ್ರಾಪರವಶರಾದರು.

## ೯ ದೈವ ದುರ್ವಿಲಾಸ.

ಪ್ರಿಯವಾಚಕರೇ, ಹಾಳು ಕಲ್ಪನೆಯಲ್ಲಿ ಮಗ್ನರಾದ ಆ ತ್ರಿವರ್ಗದವರನ್ನು ಆ ಗವಿಯಲ್ಲಿಯೇ ಬಿಟ್ಟುಕೊಟ್ಟು ರೂಪಸುಂದರಿಯ ಗತಿಯೇನಾಗಿದೆಯೆಂಬದನ್ನು ನೋಡುವಾ.

ಹಿಂದೆ ಒಂದನೆಯ ಪ್ರಕರಣದ ಕೊನೆಯಲ್ಲಿ ಯಾವನೋ ಒಬ್ಬ ಪುಣ್ಯ ಪುರುಷನು ಕೇಸರಿಸಿಂಹನ ಕಾಮಾಗ್ನಿಗೆ ಆಹುತಿಯಾಗುತ್ತಿದ್ದ ರೂಪಸುಂದರಿ ಯನ್ನು ಬಿಡಿಸಿ, ಆಕೆಯನ್ನೂ ಕೇಸರಿಸಿಂಹನನ್ನೂ ಸಂಗಡ ಹೊರಡಿಸಿಕೊಂಡು ಎತ್ತಲೋ ಹೊರಟುಹೋದನೆಂದು ಹೇಳಿದೆಯಷ್ಟೇ; ಅವನು ಬೇರೆ ಕಡೆಗೆ ಲ್ಲಿಯೂ ಹೋಗದೆ, ನೆಟ್ಟಗೆ ಅಪ್ಪಾಸರಕ್ಕೆ ಹೋಗಿ ರೂಪಸುಂದರಿಯನ್ನು ವೃದ್ಧ ಲಕ್ಷ್ಮಣದಾಸನಿಗೊಪ್ಪಿಸಬೇಕೆಂದು ಅಪ್ಪಾಸರದ ಮಾರ್ಗವನ್ನು ಕ್ರಮಿಸಲಾರಂ ಭಿಸಿದನು; ಆದರೆ ರೂಪಸುಂದರಿಯ ದುರ್ದೈವದಿಂದಲೋ ಅಥವಾ ಕೇಸರಿ ಸಿಂಹನ ಸುದೈವದಿಂದಲೋ ಆ ಪುಣ್ಯಪುರುಷನ ಸೇವಕರು ಮಾರ್ಗವನ್ನು ತಪ್ಪಿದರು. ನಿಜವಾಗಿ ನೋಡಿದರೆ ಅವರು ಹೀಗೆ ದಾರಿ ತಪ್ಪಿಸಿಕೊಳ್ಳಲಿಕ್ಕೆ ಕಾರಣವಿದ್ದಿಲ್ಲ. ಯಾಕಂದರೆ ಆ ಅಡವಿಯು ಅವರಿಗೆ ಪರಿಚಿತವಾದದ್ದಿತ್ತು. ಯಾವ ಗುಹೆಯಲ್ಲಿ ಅವರಿಗೆ ರೂಪಸುಂದರಿಯು ದೊರೆತಳೋ, ಆ ಗುಹೆಯಿಂದ ಆ ಪುಣ್ಯಪುರುಷನ ವಾಸಸ್ಥಳವಾದ ರಾಧಾನಗರವು ನಾಲ್ಕು ಮೈಲು ದೂರವಿತ್ತು.

ರಾಧಾನಗರಿಯು ವೃದ್ಧ ಲಕ್ಷ್ಮಣದಾಸನ ರಾಜ್ಯದಲ್ಲಿತ್ತು. ಅದೊಂದು ಜಹಾಗಿರಿಯ ಗ್ರಾಮವಾಗಿದ್ದು, ಅಜಿತಸಿಂಹನೆಂಬೊಬ್ಬ ಸರದಾರನು ಅದಕ್ಕೆ ಅಧಿಪತಿಯಾಗಿದ್ದನು. ಅಜಿತಸಿಂಹನ ಪೂರ್ವಜರು ವೃದ್ಧ ಲಕ್ಷ್ಮಣದಾಸನ ಮನೆತನಕ್ಕೆ ಬಲು ನಂಬಿಗಸ್ಥರು; ಮತ್ತು ಅವರು ನಾಮಾಂಕಿತ ಶೂರರಿದ್ದ ದರಿಂದ, ಅಪ್ಪಾಸರದ ಸಂಸ್ಥಾನಕ್ಕೆ ಬಹಳ ಗೌರವವನ್ನುಂಟು ಮಾಡಿದ್ದರು.

ಆದ್ದರಿಂದ ಅಜಿತಸಿಂಹನ ಪೂರ್ವಜರಿಗೆ ರಾಜಧಾನಿಯೂ ಅದರ ಸುತ್ತುಮುತ್ತಲಿನ ಕೆಲವು ಪ್ರದೇಶವೂ ವೃದ್ಧ ಲಕ್ಷ್ಮಣದಾಸನ ಪೂರ್ವಜರಿಂದ ಜಹಾಗೀರಾಗಿ ಕೊಡಲ್ಪಟ್ಟಿದ್ದವು. ಅಜಿತಸಿಂಹನಾದರೂ ಅತ್ಯಂತ ಪರಾಕ್ರಮಶಾಲಿಯಿದ್ದದರಿಂದ, ತನ್ನ ಜಹಾಗೀರನ್ನು ಒಳ್ಳೇ ಗೌರವದಿಂದ ಕಾಯ್ದುಕೊಂಡು, ವೃದ್ಧ ಲಕ್ಷ್ಮಣದಾಸನ ಮಂತ್ರಾಲೋಚಕರಲ್ಲಿ ಒಬ್ಬನಾಗಿದ್ದನು.

ಸ್ವಾಮಿಭಕ್ತನಾದ ಈ ಅಜಿತಸಿಂಹನನ್ನು ವೃದ್ಧ ಲಕ್ಷ್ಮಣದಾಸನು ಬಹಳವಾಗಿ ಪ್ರೀತಿಸುತ್ತಿದ್ದನೆಂಬದನ್ನು ಹೇಳುವ ಕಾರಣವಿಲ್ಲ. ತನ್ನ ಮೇಲೆ ಏನಾದರೊಂದು ಆಪತ್ತು ಬಂದಾಗ ಅವನು ಅಜಿತಸಿಂಹನನ್ನು ಕರೆಯಿಸಿಕೊಳ್ಳುತ್ತಿದ್ದನು; ಮತ್ತು ಅವನ ಮಂತ್ರಾಲೋಚನೆಯನ್ನು ಕೇಳಿಕೊಳ್ಳುತ್ತಿದ್ದನು; ಆದರೆ ರೂಪಸುಂದರಿಯ ಮೇಲೆ ಬಂದ ವಿಪತ್ತಿನಲ್ಲಿ ಆಕೆಯನ್ನು ನಿರಂಜನ ಯೋಗಿಗಳ ಬಳಿಯಲ್ಲಿ ಇಡುವ ಪ್ರಸಂಗವು ಬಂದಾಗ, ಈ ಅಜಿತಸಿಂಹನನ್ನು ಕರೆಯಿಸಿಕೊಳ್ಳಲಿಕ್ಕೆ ವೃದ್ಧ ಲಕ್ಷ್ಮಣದಾಸನಿಗೆ ಸಂಧಿಯು ದೊರೆಯಲಿಲ್ಲ. ಪ್ರಸಂಗವು ಗತಿಸಿದ ಮೇಲೆಯಾದರೂ ವೃದ್ಧಾಪ್ಯದಿಂದಲೂ ಮಗಳ ವಿಯೋಗದಿಂದಲೂ ಹತಬುದ್ಧನಾದ ಆತನು ತನ್ನ ಪ್ರಿಯಸರದಾರನಿಗೆ ಸುದ್ದಿಯನ್ನು ಮುಟ್ಟಿಸಲಿಲ್ಲ ಈ ಸುದ್ದಿಯು ಗಾಳಿಯಂತೆ ಪಸರಿಸಿ, ಕೆಲ ದಿನಗಳ ಮೇಲೆ ಅಜಿತಸಿಂಹನ ಕಿವಿಯ ವರೆಗೆ ಹೋಯಿತು. ಆಗ ಆತನು ಬಹಳ ಕಳವಳಗೊಂಡು, ಅಪ್ಪಾಸರದ ಸಿಂಹಾಸನದ ಮಾನರಕ್ಷಣೆಗಾಗಿ ಏನು ಮಾಡಬೇಕೆಂದು ಯೋಚಿಸಿದನು; ಮತ್ತು ಒಂದು ದಿನ ರಾತ್ರಿಯ ಕಾಲದಲ್ಲಿ ತನ್ನ ಕೇವಲ ವಿಶ್ವಾಸುಕ ಸೇವಕರನ್ನಷ್ಟು ಕರೆದುಕೊಂಡು, ವೃದ್ಧ ಲಕ್ಷ್ಮಣದಾಸನಿಗೆ ಭೆಟ್ಟಿಯಾಗಿ ಬರುವದಕ್ಕೋಸ್ಕರ ಹೊರಟನು.

ತಾನು ಅಪ್ಪಾಸರಕ್ಕೆ ಹೊರಡುವದು ಶತ್ರುಗಳ ಗುಪ್ತಹೇರರು ತನ್ನ ಗ್ರಾಮದಲ್ಲಿ ಯಾರಾದರೂ ಇದ್ದರೆ, ಅವರಿಗೆ ತಿಳಿಯಬಾರದೆಂದೋ ಅಥವಾ ಮತ್ತಾವ ಕಾರಣದಿಂದಲೋ, ಅವನು ತನ್ನ ರಾಜಧಾನಿಯ ಚೋರಮಾರ್ಗದಿಂದ ಪ್ರಯಾಣ ಬೆಳೆಸಿದನು. ಆ ಚೋರಮಾರ್ಗದ ಒಂದು ಮುಖವು ಅರಮನೆಯಲ್ಲಿದ್ದರೆ, ಇನ್ನೊಂದು ಮುಖವು ಘೋರಾರಣ್ಯದಲ್ಲಿರುವ ಒಂದು ಗುಹೆಯಲ್ಲಿತ್ತು.

ಯಾವ ಪುಣ್ಯಪುರುಷನು ಕೇಸರಿಸಿಂಹನ ಅತ್ಯಾಚಾರದಿಂದ ರೂಪಸುಂದರಿಯನ್ನು ಬಿಡಿಸಿದನೋ ಆ ಪುಣ್ಯಪುರುಷನೇ ಅಜಿತಸಿಂಹನೆಂಬದು ನಮ್ಮ ಚಾಣಾಕ್ಷ ವಾಚಕರ ಲಕ್ಷ್ಯದಲ್ಲಿ ಬಂದಿರಬಹುದು. ಅವನು ರಾತ್ರಿಯಲ್ಲಿ ತನ್ನ ರಾಜಧಾನಿಯಿಂದ ಹೊರಟು ನಾಲ್ಕು ಮೈಲು ಅಂತರವಿರುವ ಆ ನೆಲಮಾಗಳವನ್ನು

ಕ್ರಮಿಸಿ, ನಸುಕು ಹರಿಯುವದರೊಳಗೆ ಆ ನೆಲಮಾಳಿಗೆಯ ಮುಖವಿದ್ದ ಗುಹೆಗೆ ಬರಲು, ಕರ್ಮ-ಧರ್ಮಸಂಯೋಗದಿಂದ ಅಲ್ಲಿ ರೂಪಸುಂದರಿಯ ಮೇಲೆ ನಡೆದ ಅತ್ಯಾಚಾರವು ಅವನ ದೃಷ್ಟಿಗೆ ಬಿದ್ದಿತು. ಹಾಯ್-ಹಾಯ್! ಆ ಭಯಂಕರ ಪ್ರಸಂಗವನ್ನು ನೋಡಿ, ಆ ಸ್ವಾಮಿಭಕ್ತನ ಸಂತಾಪಾಗ್ನಿಯು ಪ್ರಜ್ವಲಿಸಿದ್ದರಲ್ಲಿ ಆಶ್ಚರ್ಯವೇನು? ಆದ್ದರಿಂದ ಆತನು ತಡಮಾಡದೆ, ಆ ಅತ್ಯಾಚಾರ ನಡಿಸಿದವರನ್ನು ದಂಡಿಸಿ, ರೂಪಸುಂದರಿಯ ಮಾನವನ್ನು ಉಳಿಸಿದನೆಂಬದನ್ನು ನಮ್ಮ ವಾಚಕರು ಈ ಮೊದಲೇ ಓದಿ ತಿಳಿದಿರುವರು; ಆದರೆ ವಿಪದ್ಗ್ರಸ್ತಳಾದ ರೂಪಸುಂದರಿಯು ಈ ಕಾಲಕ್ಕೆ ತನಗೆ ಸಹಾಯ ಮಾಡಿದವರು ಯಾರೆಂಬದನ್ನು ತಿಳಿಯದೆ ಹೋದಳು.

ಈ ಆಕಸ್ಮಿಕ ಪ್ರಸಂಗದಿಂದ ಅಜಿತಸಿಂಹನ ಮನಸ್ಸು ಮೊದಮೊದಲು ಉದ್ವಿಗ್ನವಾದರೂ ಶತ್ರುಗಳು ಕೈವಶರಾಗಿ ರೂಪಸುಂದರಿಯು ಮಾನಭಂಗವನ್ನು ಹೊಂದದೆ ಪರಿಶುದ್ಧಳಾಗಿ ಉಳಿಯಲು, ಅವನ ಉದ್ವಿಗ್ನ ಮನಸ್ಸು ಒಮ್ಮೆಲೆ ಪ್ರಸನ್ನವಾಗಿ, ವಿಲಕ್ಷಣ ಕಲ್ಪನಾತರಂಗಗಳಲ್ಲಿ ಮಗ್ನವಾಯಿತು. ರೂಪಸುಂದರಿಯು ಭಯಂಕರವಾದ ಗಂಡಾಂತರಕ್ಕೆ ಗುರಿಯಾದಾಗ ಆಕೆಯನ್ನು ಬಿಡಿಸಿದ್ದಕ್ಕೆ ಸತೀತ್ವರಕ್ಷಣೆಯ ಪುಣ್ಯಬರುವದಲ್ಲದೆ, ಈ ಅಪೂರ್ವ ಪ್ರಸಂಗದಿಂದ ವೃದ್ಧ ಲಕ್ಷ್ಮಣದಾಸನ ಪ್ರೀತಿಯು ತನ್ನ ಮೇಲೆ ವಿಶೇಷವಾಗಿ ಆಗಬಹುದೆಂದು ಅವನು ತರ್ಕಿಸಿದನು. ಆತನು ರೂಪಸುಂದರಿಯೊಡನೆ ಗುಹೆಯಿಂದ ಹೊರಟಾಗ ಅವನ ಅಂತರಂಗದಲ್ಲಿ ಇನ್ನೂ ಆನಂದದ ಲಹರಿಗಳು ಏಳುತ್ತಿದ್ದವು. ಆ ಗುಂಗಿನಲ್ಲಿ ಅವನು ತನ್ನ ಸೇವಕರು ಹೋದತ್ತ ನಡೆದನು. ಗುಹೆಯಲ್ಲಿ ನಡೆದ ಪ್ರಕಾರವನ್ನು ನೋಡಿ ದಂಗುಬಡಿದ ಅವನ ಸೇವಕರೂ ರೂಪಸುಂದರಿಯು ಇಲ್ಲಿಗೆ ಯಾಕೆ ಬಂದಿರಬಹುದು? ಎಂಬ ಯೋಚನೆಯಲ್ಲಿ ತಲ್ಲೀನರಾಗಿದ್ದರು. ದಾರಿಯ ಕಡೆಗೆ ಯಾರ ಲಕ್ಷ್ಯವೂ ಇದ್ದಿಲ್ಲ.

ಈ ರೀತಿಯಲ್ಲಿ ಅವರು ಮಧ್ಯಾಹ್ನದ ವರೆಗೆ ದಾರಿ ನಡೆದು ಮೂರು ನಾಲ್ಕು ತಾಸಗಳಲ್ಲಿ ಸೇರಬಹುದಾಗಿದ್ದ ಅಪ್ಪಾಪುರವು ಇನ್ನೂ ಯಾಕೆ ಬರಲಿಲ್ಲವೆಂಬದು ಒಮ್ಮೆಲೆ ಧ್ಯಾನದಲ್ಲಿ ಬರಲು, ಅಜಿತಸಿಂಹನು ಪಕ್ಕನೆ ಎಚ್ಚತ್ತನು. ಅಂತರ್ಮುಖವಾದ ಅವನ ಮನಸ್ಸು ಬಹಿರ್ಮುಖವಾಗಲು, ಈಗ ಎಲ್ಲಿ ಬಂದೆವೆಂಬದು ಕೂಡಾ ಅವನಿಗೆ ತಿಳಿಯದಾಯಿತು. ಕೂಡಲೆ ಅವನು ಒಮ್ಮೆ ಗದ್ದರಿಸಿ, ಭರದಿಂದ ಸಾಗಿರುವ ಸೇವಕರನ್ನು ತರುಬಿದನು. ಸೇವಕರೂ ಬೆಪ್ಪಾಗಿ ನಿಂತರು. ಆಗ ಎಲ್ಲರೂ ತಮ್ಮ ದಡ್ಡತನಕ್ಕೆ ಹಳಿದುಕೊಳ್ಳಲಾರಂಭಿಸಿದರು. ಅಜಿತಸಿಂಹನು ಸಿಟ್ಟುಬೆಂಕಿಯಾಗಿ ಸೇವಕರನ್ನು ಬಾಯಿಗೆ ಬಂದಂತೆ ಬೈಯ್ದನು; ಆದರೆ ಗತಿಸಿದ

ಮಾತಿಗೆ ಮಾಡುತ್ತಾನೇನು? ಸೇವಕರು ಅಡವಿಯ ಗುರುತು ಹಿಡಿದು: ಓಹೋ ದನಿಯರೇ, ಅಪ್ಪಾಸರವು ಪೂರ್ವಕ್ಕೆ ಬಹು ದೂರ ಉಳಿಯಿತು. ನಾವು ನೆಟ್ಟಗೆ ಉತ್ತರಕ್ಕೆ ಕಿರುಮಂಜಿ ಅಡವಿಗೆ ಬಂದೆವು, ಎಂದು ನುಡಿದು, ಅಲ್ಲಿಂದಲೇ ಪುನಃ ಅಪ್ಪಾಸರದ ಕಡೆಗೆ ಮೋರೆಯನ್ನು ತಿರುಗಿಸಿದರು.

ಅಜಿತಸಿಂಹನೂ ಅವನ ಸೇವಕರೂ ದಣಿದು ಹೋಗಿದ್ದರು. ತಮ್ಮ ವ್ಯಸೊಕ್ಕನಿಂದ ಹೀಗಾದ್ದರಿಂದ ಅಪ್ಪಾಸರಕ್ಕೆ ಹೋಗಿಯೇ ಊಟ ಮಾಡುವದೆಂಬ ತನ್ನ ನಿಶ್ಚಯವನ್ನು ಅಜಿತಸಿಂಹನು ತಿಳಿಸಿದನು. ಸೇವಕರಾದರೂ ತಪ್ಪು ಮಾಡಿದವರಾದ್ದರಿಂದ ಹೊಟ್ಟೆಯ ಪರಿವೆಯನ್ನು ಬಿಟ್ಟು ವೇಗದಿಂದ ದಾರಿಯನ್ನು ಕ್ರಮಿಸಹತ್ತಿದರು ಮನುಷ್ಯನು ಒಂದು ಮಾಡಹೋದರೆ ದೈವವು ಮತ್ತೊಂದನ್ನು ಮಾಡಿಸುವದೆಂಬ ವೃದ್ಧರ ವಾಕ್ಯವು ಅಕ್ಷರಶಃ ನಿಜವಿರುವದು. ಅಜಿತಸಿಂಹನೂ ಅವನ ಸೇವಕರೂ ದಾರಿಯನ್ನು ಕ್ರಮಿಸುತ್ತಿರಲು, ಕುದುರೆಗಳ ಖುರಪುಟಗಳ ಸಪ್ಪಳವು ಅಸ್ಪಷ್ಟವಾಗಿ ಕೇಳಬಂದಿತು. ಸಂಗಡ ತರುಣಿಯಾದ ರೂಪಸುಂದರಿಯಿದ್ದದರಿಂದ ಅಜಿತಸಿಂಹನು ಚಿಂತೆಗೊಳಗಾದನು ಅವನು ತನ್ನ ಸೇವಕರಿಗೆ ಖಡ್ಗಪಾಣಿಗಳಾಗಲಿಕ್ಕೆ ಆಜ್ಞಾಪಿಸುತ್ತಿರಲು, ಸಪ್ಪಳವು ತೀರ ಸಮೀಪದಲ್ಲಿ ಕೇಳಲಾರಂಭಿಸಿತು. ಓಡಿಹೋಗಲು ಆಸ್ಪದ ಉಳಿಯಲಿಲ್ಲ. ಹೇಗೆ ಮಾಡಬೇಕೆಂದು ಅಜಿತಸಿಂಹನು ಪೇಚಾಡುತ್ತಿರಲು, ಐವತ್ತು ಜನ ಕುದುರೆಯ ಸವಾರರದೊಂದು ಪಥಕವು ಅವರ ಮುಂದೆ ಬಂದು ನಿಂತುಕೊಂಡಿತು.

ಅಜಿತಸಿಂಹನ ಸೇವಕರು ಬಹಳ ಜನರಿದ್ದಿಲ್ಲ; ಹದಿನೈದೇ ಜನರಿದ್ದರು. ಅಜಿತಸಿಂಹನೊಬ್ಬನನ್ನು ಹಿಡಿದರೆ ಹದಿನಾರು ಜನರಾಗುತ್ತಿದ್ದರು. ಕುದುರೆಯ ಸವಾರರು ಐವತ್ತು ಜನರಿದ್ದದರಿಂದ ಒಬ್ಬರಿಗೆ ಮೂರು ಮಂದಿಯಂತೆ ಲೆಖ್ಖ ಬೀಳುತ್ತಿದ್ದರೂ ಅಜಿತಸಿಂಹನು ಬಳ್ಳೇ ಆವೇಶದಿಂದ ಆ ರಾಹುತರ ಮೇಲೆ ಏರಿ ಹೋದನು. ಹಾ-ಹಾ ಅನ್ನುವಷ್ಟರಲ್ಲಿ ಅವನ ಖಡ್ಗದ ಹೊಡತಗಳಿಂದ ಎಷ್ಟೋ ಕುದುರೆಗಳು ಮುಂಗಾಲುಗಳನ್ನು ಕಳಕೊಂಡು ಮುಗ್ಗರಿಸಿ ನೆಲಕ್ಕೆ ಬಿದ್ದವು. ಹತ್ತು-ಹದಿನೈದು ಜನ ರಾಹುತರು ನಿಶ್ಚೇಷ್ಟಿತರಾಗಿ ಬಿದ್ದರು. ಒಡೆಯನ ಈ ಖಂಬೀರತನವನ್ನು ನೋಡಿ ಅಜಿತಸಿಂಹನ ಸೇವಕರೂ ಡೋಲಿಯನ್ನಿಳಿಸಿ ಕಾಳಗಕ್ಕೆ ಅಣಿಯಾದರು. ಉಭಯಪಕ್ಷಗಳ ಜನರೂ ಜೀವದ ಹಂಗುದೊರೆದರು. ಹೀಗೆ ಅಕಸ್ಮಾತ್ತಾಗಿ ನಡುದಾರಿಯಲ್ಲಿಯೇ ತನ್ನನ್ನು ಹೊತ್ತುಕೊಂಡು ಹೋಗುವವರಿಗೂ ಬೇರೆಯವರಿಗೂ ಕಾಳಗವು ಪ್ರಾರಂಭವಾದದ್ದನ್ನು ತಿಳಿದು, ಕೇಸರಿಸಿಂಹನು ಹೊರಗೆ ಹಣಿಕಿ ಹಾಕಬೇಕೆಂದು ಹವಣಿಸಿದನು; ಆದರೆ ಅವನನ್ನು ಕಟ್ಟಿ ಹಾಕಿದ್ದ ಡೋಲಿಯ ಮೇಲೆ ಬಲವಾದ ಬುರುಕಿಯನ್ನು ಹಾಕಿದ್ದರಿಂದ, ಅವನ

ಆ ಹವಣಿಕೆಯೂ ವ್ಯರ್ಥವಾಯಿತು. ಅತ್ತಿತ್ತ ಸರಿದಾಡಲಿಕ್ಕೆ ಸಹ ಬಾರದಂತೆ ಕೈ-ಕಾಲುಗಳನ್ನು ಪ್ರತಿಬಂಧಿಸಿದ್ದರಿಂದ, ಅವನ ಆಟವೇನೂ ಸಾಗುವಂತಿದ್ದಿಲ್ಲ. ಈಗ ನಡೆದ ಕಾಳಗದಲ್ಲಿ ತಾನು ಮತ್ತೆ ಯಾರ ಸೆರೆಯೊಳಗೆ ಬೀಳಬೇಕಾಗುವದೋ ಎಂದು ಚಿಂತಿಸುತ್ತ, ತನ್ನ ದುಷ್ಕರ್ಮವನ್ನು ಹಳಿದುಕೊಳ್ಳಹತ್ತಿದನು.

ಡೋಲಿಯಲ್ಲಿದ್ದ ಕೇಸರಿಸಿಂಹನು ಹೀಗೆ ಚಿಂತಾಗ್ರಸ್ತನಾಗಿರಲು, ಹೊರಗೆ ನಡೆದ ಕಾಳಗದಲ್ಲಿ ಅಜಿತಸಿಂಹನ ಪಕ್ಷವು ಹಿಮ್ಮೆಟ್ಟಲಾರಂಭಿಸಿತು. ರಾಹುತರು ಬತಿಗೊಂಡು ಹೊಡೆಯಹತ್ತಿದ್ದರಿಂದ, ಅಜಿತಸಿಂಹನ ಸೇವಕರಲ್ಲಿ ಅರ್ಧಜನರು ಪತನ ಹೊಂದಿದರು. ಉಳಿದವರು ಗಾಯಹೊಂದಿದ್ದರೂ ಕಡಿಗೆ ಬಿದ್ದು ಬಡಿದಾಡುತ್ತಿದ್ದರು. ಅಷ್ಟರಲ್ಲಿ ಅಜಿತಸಿಂಹನ ಕಾಲಿಗೆ ಕಡತ ಬಿದ್ದು ಅವನು ನೆಲಕ್ಕುರುಳಿದನು. ಬಳಿಕ ಕೇಳುವದೇನು? ಪ್ರತಿಪಕ್ಷಿಗಳೆಲ್ಲರೂ ಅವನ ಸುತ್ತುಮುತ್ತು ಮುಗಿಬಿದ್ದರು. ಗಾಯಹೊಂದಿದ ಆತನ ಸೇವಕರು ಅವರ ಸೆರೆಸಿಕ್ಕರು. ಅಜಿತಸಿಂಹನನ್ನೂ ಸೆರೆಹಿಡಿದರು. ಬಳಿಕ ಅವರು ರಕ್ಷಕರಿಲ್ಲದೆ ಅನಾಥವಾಗಿ ಉಳಿದ ಆವೆರಡು ಡೋಲಿಗಳ ಕಡೆಗೆ ತಿರುಗಿದರು. ಅವರು ಒಂದನೆಯ ಡೋಲಿಯ ಬುರುಕಿಯನ್ನು ತೆಗೆದೊಗೆದರು. ಕೂಡಲೆ ವಿದ್ಯುತ್ತಿನಂತೆ ಹೊಳಪುಳ್ಳ ರೂಪಸುಂದರಿಯು ಅವರ ದೃಷ್ಟಿಗೆ ಬಿದ್ದಳು. ಇಂಥ ಸ್ತ್ರೀರತ್ನವು ಅಕಲ್ಪಿತವಾಗಿ ಕೈಗೆ ಸಿಕ್ಕದ್ದರಿಂದ, ಆ ರಾಹುತರ ಆನಂದಕ್ಕೆ ಮೇರೆಯಿಲ್ಲದಾಯಿತು. ಬಳಿಕ ಅವರು ಇನ್ನೊಂದು ಡೋಲಿಯ ಮೇಲಿನ ಬುರುಕಿ ತೆರೆಯಲು ಅವರ ಇಚ್ಛೆಯಂತೆ ಅಲ್ಲಿ ಸುಂದರ ತರುಣಿಯು ಕಾಣುವದರ ಬದಲು, ಕೈ-ಕಾಲುಗಳು ಪ್ರತಿಬಂಧಿಸಲ್ಪಟ್ಟಿದ್ದ ಕೇಸರಿಸಿಂಹನು ದೃಷ್ಟಿಗೆ ಬಿದ್ದನು. ಅವನನ್ನು ನೋಡಿ ಅವರು ಚಕಿತರಾಗಿ ನಿಂತುಕೊಂಡರು. ಕ್ಷಣದಲ್ಲಿ ಅವರಿಗೆ ವಿಲಕ್ಷಣ ಆನಂದವೂ ಆಯಿತು. ಹೀಗೆ ರಾಹುತರು ಆಶ್ಚರ್ಯದಿಂದ ನೋಡುತ್ತ ನಿಲ್ಲಲು, ಕೇಸರಿಸಿಂಹನೂ ಚಕಿತನಾಗಿ: "ಅಹಾ! ನಾನೆಷ್ಟು ಸುದೈವಿಯು! ನಾನೀಗ ನೋಡುವದು ಸ್ವಪ್ನವಲ್ಲವಷ್ಟೇ? ನನ್ನನ್ನು ಶತ್ರುಗಳು ಹಿಡಿದೊಯ್ಯುತ್ತಿರಲು, ನಮ್ಮ ಸೈನಿಕರು ಅಕಸ್ಮಾತ್ತಾಗಿ ಬಂದು ಅವರನ್ನು ದಂಡಿಸಿ, ನನ್ನನ್ನು ಮುಕ್ತವಾಗ ಮಾಡಬೇಕೆ? ಶಾಬಾಸ್! ಸೈನಿಕರೇ, ಇಷ್ಟು ದಿವಸ ನಮ್ಮ ಉಪ್ಪು ಉಂಡದ್ದಕ್ಕೆ ಸಾರ್ಥಕವಾಯಿತು." ಎಂದು ನುಡಿದನು. ರಾಹುತರು ಲಗುಬಗೆಯಿಂದ ಅವನ ಕೈ-ಕಾಲುಗಳನ್ನು ಬಿಚ್ಚಿದರು. ಅವನ ಬೆನ್ನಿಗೆ ಖಡ್ಗದ ಪೆಟ್ಟು ಬಿದ್ದು ಬಲವಾದ ಗಾಯವಾದ್ದರಿಂದ, ಅದಕ್ಕೆ ವನಸ್ಪತಿಯನ್ನು ಅರೆದು ಹಚ್ಚಿದರು. ಬಳಿಕ ಅವರು ವಿನಯದಿಂದ:— "ಮಹಾರಾಜರೇ, ಇಂದಿನ ವಿಜಯದಲ್ಲಿ ದೊರೆತ ಈ ಸ್ತ್ರೀರತ್ನವನ್ನು ಸನ್ನಿಧಿಗೆ ಕಾಣಿಕೆಯಾಗಿ ಅರ್ಪಿಸಿರುವೆವು" ಎಂದು ನುಡಿದರು.

ರಾಹುತರ ಮಾತನ್ನು ಕೇಳಿ ಕೇಸರಿಸಿಂಹನು ಗಹಗಹಿಸಿ ನಕ್ಕು:- ಪ್ರಿಯ ಸೈನಿಕರಿರಾ, ನಾವು ಕೆಲವು ಮಹತ್ವದ ಕಾರಣಗಳ ಸಲುವಾಗಿ ಕಿರುಮಂಜೀ ದುರ್ಗಕ್ಕೆ ಬರಬೇಕೆಂದು ಹೊರಟಿರಲು, ದಾರಿಯಲ್ಲಿ ಈ ಸುಂದರಿಯ ಡೋಲಿಯು ನಮಗೆ ಕೂಡಿತು. ಈಕೆಯ ತಂದೆಯು ಇವಳನ್ನು ನನಗೆ ಕೊಡಲಿಕ್ಕಿಲ್ಲವೆಂದು ಪ್ರತಿಜ್ಞೆ ಮಾಡಿರುವನು. ಆದ್ದರಿಂದ ನಾನು ಈ ತರುಣಿಯ ವಿವಾಹವನ್ನು ಮಾಡಿಕೊಂಡೇ ತೀರಬೇಕೆಂದು ನಿಶ್ಚಯಿಸಿದ್ದೆನು. ಹೀಗಿರಲು ಕರ್ಮ-ಧರ್ಮ ಸಂಯೋಗದಿಂದ ಅಕಸ್ಮಾತ್ ಇವಳು ನನ್ನ ಕೈಯಲ್ಲಿ ಸಿಗಲು, ರಾತ್ರಿಯಾದ ಮೂಲಕ ನಾನು ಈಕೆಯೊಡನೆ ಒಂದು ಗುಹೆಯಲ್ಲಿ ವಾಸಿಸಿದೆನು; ಆದರೆ ನನ್ನ ದುರ್ದೈವವು ಅಲ್ಲಿಗೇ ಶತ್ರುಗಳನ್ನು ಬರಮಾಡಿ ನನ್ನನ್ನು ಈ ರೀತಿ ಪರಾಧೀನ ಮಾಡಿತು; ಆದರೆ ಈ ತರುಣಿಯೊಡನೆ ನನ್ನ ಲಗ್ನವಾಗುವದು ದೇವರ ಮನಸ್ಸಿಗೆ ಬಂದದ್ದರಿಂದ, ಪುನಃ ನಿಮ್ಮ ಆಗಮನವಾಗಿ ನನ್ನ ಬಿಡುಗಡೆಯಾದದಲ್ಲದೆ, ಈ ತರುಣಿಯೂ ನನಗೆ ಲಭಿಸಿದಳು. ಇನ್ನು ಈಕೆಯನ್ನು ಕರಕೊಂಡು ಕಿರುಮಂಜೀ ದುರ್ಗಕ್ಕೆ ನಡೆಯಿರಿ. ಅದು ಅತ್ಯಂತ ದುರ್ಭೇದ್ಯವಿರುವದು. ನಾನು ಈ ತರುಣಿಯನ್ನು ಪಾಣಿಗ್ರಹಣ ಮಾಡುವವರೆಗೆ ಇವಳನ್ನು ಅಲ್ಲಿ ನಿಶ್ಚಿಂತೆಯಿಂದಿಡಲಿಕ್ಕೆ ಅನುಕೂಲವಾಗುವದು, ಎಂದು ಹೇಳಿದನು. ಆತನು ಹೇಳಿದ ಸಂಗತಿಯನ್ನು ಕೇಳಿ ರಾಹುತರು ವಿಸ್ಮಯಪಟ್ಟರು; ಮತ್ತು ನುಡಿದರೇನಂದರೆ:- ಸರಕಾರ, ನಾವು ಇಂದು ಇಲ್ಲಿಗೆ ಬರದಿದ್ದರೆ ನೀವು ನಿಶ್ಚಯವಾಗಿ ಶತ್ರುಗಳ ಖಡ್ಗಕ್ಕೆ ಆಹುತಿಯಾಗಿ ಇಲ್ಲವೆ ಸೆರೆಮನೆಯ ಸೋಬತಿಗಳಾಗಿ ಹೋಗುತ್ತಿದಿರಿ. ನಮ್ಮ ವೈರಿಗಳಾರಾದರೂ ನಮ್ಮ ಕೈಗೆ ಸಿಗುವರೇನೆಂದು ನಾವು ಸಹಜವಾಗಿ ಈ ಅರಣ್ಯದಲ್ಲಿ ಸಂಚರಿಸುತ್ತಿರಲು, ನಾವು ಆ ಗುಡ್ಡದ ತುದಿಯಲ್ಲಿದ್ದಾಗ ನಿಮ್ಮ ಡೋಲಿಗಳು ಕಂಡವು. ಕೂಡಲೆ ನಾವು ಕುದುರೆಗಳನ್ನೋಡಿಸುತ್ತ ಇಲ್ಲಿಗೆ ಬಂದೆವು. ಬಂದದ್ದೂ ನೆಟ್ಟಗಾಯಿತು. ಇಲ್ಲವಿದ್ದರೆ ಕೆಲಸವು ಘಾತವಾಗುತ್ತಿತ್ತು!

ಕಿರುಮಂಜೀ ದುರ್ಗವು ಕೇಸರೀಸಿಂಹನ ವಶದಲ್ಲಿತ್ತು. ಆ ದುರ್ಗವನ್ನು ಸಂರಕ್ಷಿಸುವದಕ್ಕೆ ಕರುಣಸಿಂಹನೆಂಬೊಬ್ಬ ಸರದಾರನನ್ನು ನಿಯಮಿಸಿದ್ದನು. ಈ ಕರುಣಸಿಂಹನು ಕೇಸರೀಸಿಂಹನಿಗೆ ಸಮೀಪದ ಆಪ್ತನಿದ್ದನು. ಆದ್ದರಿಂದ ಏನಾದರೂ ಗುಪ್ತಾಲೋಚನೆಗಳನ್ನು ಮಾಡುವದಿದ್ದರೆ ಅವನು ತಾನಾಗಿಯೇ ಕರುಣಸಿಂಹನೆಡೆಗೆ ಬರುತ್ತಿದ್ದನು. ಇರಲಿ.

ಈ ಮೇರೆಗೆ ರಾಹುತರೊಂದಿಗೆ ಸಂಭಾಷಣವಾದ ಬಳಿಕ ಕೇಸರೀಸಿಂಹನು ಯಾವ ಅಜಿತಸಿಂಹನು ತನ್ನನ್ನು ಮುಸುಗೆ ಕಟ್ಟಿಸಿದ್ದನೋ, ಆ ಅಜಿತಸಿಂಹನನ್ನು

ತನ್ನನ್ನು ಕಟ್ಟಿದ ಹಗ್ಗದಿಂದಲೇ ಕಟ್ಟಿಸಿದನು; ಮತ್ತು ಒಮ್ಮೆ ರೂಪಸುಂದರಿಯ ಕಡೆಗೆ ಅಳಿಮನದಿಂದ ನೋಡಿ, ಗಾಯುವಾಗಿ ಸೆರೆಸಿಕ್ಕ ಅಜಿತಸಿಂಹನ ಸೇವಕರನ್ನು ಸಾವಕಾಶವಾಗಿ ಕರೆತರಲು ಕೆಲ ಜನ ರಾಹುತರನ್ನು ಹಿಂದೆ ಬಿಟ್ಟು, ಉಳಿದವರಿಗೆ ತನ್ನ ಡೋಲಿಯನ್ನೂ ರೂಪಸುಂದರಿಯ ಡೋಲಿಯನ್ನೂ ಮುಂದಕ್ಕೆ ಸಾಗಿಸಲು ಆಜ್ಞಾಪಿಸಿದನು. ರೂಪಸುಂದರಿಯು ತನ್ನ ದುರದೃಷ್ಟವನ್ನು ಒಂದೇಸವನೆ ಹಳಿದುಕೊಳ್ಳುತ್ತಿದ್ದಳು. ಅವಳ ಕೋಮಲವಾದ ಮುಖವು ಬಾಡಿ ಹೋಗಿತ್ತು. ಅವಯವಗಳು ನಿಶ್ಚೇಷ್ಟಿತವಾಗಿದ್ದವು. ನಿರಂಜನ ಯೋಗಿಗಳ ಮಾತು ಮೀರಿ ಬಂದದ್ದಕ್ಕೆ ಅವಳಿಗೆ ಮಿತಿಮೀರಿ ಪಶ್ಚಾತ್ತಾಪವಾಯಿತು! ಆದರೆ ಮಾಡುತ್ತಾ ಳೇನು? ಪಾಲಿಗೆ ಬಂದದ್ದನ್ನು ಅನುಭವಿಸಲೇ ಬೇಕಾಗಿತ್ತು. ಆ ದಿನ ಆರು ತಾಸು ಹೊತ್ತು ಕ್ರಮಿಸಿಹೋಗಿದ್ದರೂ ಆಕೆಗೆ ಹಸಿವೆ-ನೀರಡಿಕೆಗಳು ಆಗಿದ್ದಿಲ್ಲ. ಕಂಬ ಹುನಾ ಆಕೆಗೆ ದೇಹದ ವಿಸ್ಮರಣೆಯೇ ಆಗಿತ್ತೆಂದರೂ ಒಪ್ಪುವದು. ಅನಿವಾರ ವಾದ ದುಃಖಕ್ಕೀಡಾದ ಮನುಷ್ಯರ ಸ್ಥಿತಿಯು ಹೀಗೆ ಆಗತಕ್ಕದ್ದು ಸ್ವಾಭಾವಿಕ ವಾಗಿದೆ.

ಮುಂದೆ ತುಸ ಹೊತ್ತಿನಲ್ಲಿ ಅವೆರಡೂ ಡೋಲಿಗಳು ಅಲ್ಲಿಂದ ಸಾಗಿ ಸಲ್ಪಟ್ಟವು. ಗಾಯ ಹೊಂದಿದ ಅಜಿತಸಿಂಹನು ಗಾಯಹೊಂದಿದ ಸೇವಕರೊಡನೆ ಸೆರೆಯಾಳಾಗಿ ಕಿರುಮಂಜಿಯ ದುರ್ಗಕ್ಕೆ ಸಾಗಿಸಲ್ಪಟ್ಟನು. ಅವನು ಮನೆಯಿಂದ ಯಾವ ಕಾರ್ಯಕ್ಕಾಗಿ ಹೊರಟಿದ್ದನೋ ಮತ್ತು ಗವಿಯಲ್ಲಿ ಯಾವ ಪವಿತ್ರ ಕಾರ್ಯದಿಂದ ಪ್ರಭಾವಿತನಾಗಿ ಮನಸ್ಸಿನಲ್ಲಿ ಕಲ್ಪನೆಯ ದೊಡ್ಡ ದೊಡ್ಡ ಮಂದಿರ ಗಳನ್ನು ಕಟ್ಟುತ್ತಿದ್ದನೋ ಅವೆಲ್ಲ ಬಯಲಾಗಿ, ಈಗ ತಾನೇ ಶತ್ರುಗಳ ಸೆರೆಯಾ ಳಾಗಬೇಕಾಯಿತು. ಆಗ ಅವನು ತನ್ನ ಹಾಗು ರೂಪಸುಂದರಿಯ ದೈವ ದುರ್ವಿಲಾಸವನ್ನು ಹಳಿಯಲಾರಂಭಿಸಿದನು.

---

## ೧೦ ಮಹಂತರ ಆಜ್ಞೆಯೇ ಶ್ರೇಯಸ್ಕರವು.

ರೂಪಸುಂದರಿಯು ಕಿರುಮಂಜಿಯ ದುರ್ಗದ ಭವ್ಯವಾದ ಅರಮನೆಯಲ್ಲಿ ಯೋಗಾಜನರ ಕಾವಲಿನಲ್ಲಿ ಕೊಳೆಯಲಾರಂಭಿಸಿದಳು. ನರಾಧಮನಾದ ಆ ಕೇಸರಿಸಿಂಹನ ಬೆನ್ನಿಗೆ ಬಲವಾದ ಗಾಯವಾಗಿ ಹೈರಾಣಾಗದಿದ್ದರೆ, ಅವನು ಇಷ್ಟೊತ್ತಿಗೆ ರೂಪಸುಂದರಿಯ ಪಾಣಿಗ್ರಹಣ ಮಾಡಿ, ಪ್ರಜ್ವಲಿಸುತ್ತಿರುವ ತನ್ನ ತಾಪಸಾಗ್ನಿಯನ್ನು ಶಾಂತಪಡಿಸಿಕೊಳ್ಳದೆ ಬಿಡುತ್ತಿದ್ದಿಲ್ಲ; ಆದರೆ ದೈವಸಂಕಲ್ಪವು ಪ್ರೇರಯಿಸುವದರಿಂದಲೋ-ಏನೋ ತಿಳಿಯದು; ಆತನು ತನಗೆ ಗುಣವಾಗುವ

ವರೆಗೆ ಅವಳ ಪಾಣಿಗ್ರಹಣವನ್ನು ನಿಲ್ಲಿಸಿದನು. ಆದರೂ ಆ ದುರಾತ್ಮನು ದಿನಾಲು ಆಕೆಯ ಬಳಿಗೆ ಹೋಗಿ ಅವಳನ್ನು ಪೀಡಿಸುತ್ತಿದ್ದನು. ಅಚ್ಚ ಗುಜರಾಥೀ ರಕ್ತದ ಆ ಸ್ತ್ರೀಯು ಪಶು ಸಮಾನನಾದ ಆತನನ್ನು ಕಂಡ ಕೂಡಲೆ ಸಂತಾಪ ಗೊಳ್ಳುತ್ತಿದ್ದಳು. ಹೀಗೆ ತಾನು ಬಂದಾಗೆಲ್ಲ ಅವಳು ಸಂತಾಪಕ್ಕೀಡಾಗುತ್ತಿದ್ದರೂ ಆಕೆಯ ಪ್ರಸನ್ನತೆಯನ್ನು ಪಡೆಯುವ ಹುಚ್ಚು ಆ ಕೇಸರಿಸಿಂಹನಿಗೆ ಬಿಟ್ಟಿದ್ದಿಲ್ಲ. ಅವನು ಅವಳ ಮುಂದೆ ಏನೇನೋ ಪೌರುಷವನ್ನು ಕೊಚ್ಚಿಕೊಳ್ಳುವನು; ಒಮ್ಮೊಮ್ಮೆ ದರ್ಪವನ್ನು ತೋರಿಸಿ ಬೆದರಿಸಿ ನೋಡುವನು. ಒಮ್ಮೊಮ್ಮೆ ಅಂಗಲಾಚಿ ಹೇಳಿಕೊಳ್ಳುವನು. ಏನು ಮಾಡಿದರೂ ರೂಪಸುಂದರಿಯು ಅವನನ್ನು ತಿರಸ್ಕರಿಸುತ್ತಲೇ ಇದ್ದಳು. ಆಗ ಆ ಕಾಮುಕ ಸ್ವಭಾವದ ಕೇಸರೀಸಿಂಹನು ಆಕೆಯನ್ನು ಕುರಿತು:—ಸುಂದರೀ, ನಿನ್ನ ಈ ಬಿಂಕವು ಎಲ್ಲಿಯ ವರೆಗೆ ನಡೆಯುವದು? ಒಮ್ಮೆ ನಿನ್ನೊಡನೆ ನನ್ನ ವಿವಾಹವಾಯಿತೆಂದರೆ ಮುಂದೇನು ಮಾಡುವಿ? ಆ ಮೇಲೆ ನಿನಗೆ ನಾನೇ ಇಂದ್ರ-ಚಂದ್ರನಾಗುವೆನಲ್ಲವೆ? ಇಷ್ಟೊತ್ತಿಗೇ ನೀನು ನನ್ನವಳಾಗಿ ಹೋಗುತ್ತಿದ್ದೆ; ಆದರೆ ಉಪಾಯವಿಲ್ಲ. ಆ ನೀಚ ಅಜಿತಸಿಂಹನು ನನ್ನನ್ನು ಗಾಯಗೊಳಿಸಿ, ಇಂಥ ಅವಸರದ ಕೆಲಸಕ್ಕೆ ವಿಘ್ನವನ್ನುಂಟು ಮಾಡಿದನು, ಎಂದು ನುಡಿದನು.

ಅಜಿತಸಿಂಹನ ಹೆಸರನ್ನು ಕೇಳಿದ ಕೂಡಲೆ ರೂಪಸುಂದರಿಯು ಚಿಂತಾಕ್ರಾಂತಳಾದಳು. ಯಾವ ಅಜಿತಸಿಂಹನು ತನ್ನ ತಂದೆಯ ಪ್ರಿಯ ಸಗ ಇರನೋ ಮತ್ತು ಯಾವನು ಅಪ್ಪಾಸರದ ಸಿಂಹಾಸನದ ಗೌರವದ ವಿಷಯದಲ್ಲಿ ಭಕ್ತಿಪುರಸ್ಸರವಾಗಿ ಹೆಣಗುತ್ತಿರುವನೋ, ಅಂಥ ಅಜಿತಸಿಂಹನು ತನ್ನ ಸಂಕಟ ಸಮಯದಲ್ಲಿ ದೈವವಶಾತ್ ಒದಗಿದ್ದರೂ, ಉಪಯೋಗವಾಗದೆ ತಿರುಗಿ ಅವನೂ ಶತ್ರುಗಳ ಕೈಸೆರೆಯಾಗಬೇಕಾಯಿತಲ್ಲ! ಎಂದು ಅವಳು ಬಹಳವಾಗಿ ಮಿಡುಕಿದಳು. ಈ ಕಾಲಕ್ಕೆ ಅಜಿತಸಿಂಹನು ಕಡೆಗಿದ್ದರೆ, ತನ್ನ ತಂದೆಗೆ ಅವನಿಂದ ವಿಶೇಷ ಸಹಾಯವಾಗಿ ತನ್ನ ಮುಕ್ತತೆಗೆ ಏನಾದರೂ ಮಾರ್ಗವಾಗುತ್ತಿತ್ತೆಂದು ಅವಳು ಉದಾಸೀನಳಾದಳು. ಹತ್ತಿರ ಜೀವಕ್ಕೆ ಜೀವ ಕೊಡುವ ವಿಶ್ವಾಸುಕರಿಲ್ಲದ ಬಳಿಕ, ತನ್ನ ವೃದ್ಧ ತಂದೆಯು ಈ ಕಾಲಕ್ಕೆ ಏನು ಮಾಡುವನು? ಎಂದು ಅವಳು ದುಃಖಪಡಲಾರಂಭಿಸಿದಳು. ತನ್ನ ಬಿಡುಗಡೆಗೆ ಸರ್ವಥಾ ಮಾರ್ಗವಿಲ್ಲೆಂದೇ ಆ ತರುಣಿಯು ಭಾವಿಸಿದಳು. ದುರದೃಷ್ಟದಿಂದ ಈ ನರಾಧಮನೊಡನೆಯೇ ಲಗ್ನವಾಗುವ ಹೊತ್ತು ಬಂದರೆ ಪ್ರಾಣವನ್ನಿಡಲಿಕ್ಕಿಲ್ಲೆಂದು ಅವಳು ನಿಶ್ಚಯಿಸಿದಳು.

ಈ ಮೇರೆಗೆ ರೂಪಸುಂದರಿಯು ಕೇಸರೀಸಿಂಹನ ಪಂಜರದಲ್ಲಿ ಸಿಕ್ಕು, ದಿನಾಲು ಬಗೆಬಗೆಯ ದುಃಖಮಯ ಕಲ್ಪನೆಗಳಲ್ಲಿ ಮುಳುಗಿ ಏಳುತ್ತಿರಲು, ಈ

ಕೆಟ್ಟ ಸುದ್ದಿಯು ಕಾಡಿನ ಬೇಗೆಯಂತೆ ಹಬ್ಬುತ್ತ, ಅಪ್ಪಾಸರದ ವೃದ್ಧ ಲಕ್ಷ್ಮಣ ದಾಸನ ಕಿವಿಯ ವರೆಗೂ ಹೋಯಿತು. ಈ ಸುದ್ದಿಯ ಶ್ರವಣಮಾತ್ರದಿಂದ ಆ ಮುದುಕನ ಮೈಮೇಲೆ ಒಮ್ಮೆಲೆ ಪರ್ವತವು ಕಳಚಿ ಬಿದ್ದ ಹಾಗಾಯಿತು. ಅದರ ಆಘಾತದಿಂದ ಕೆಲ ಹೊತ್ತಿನ ವರೆಗೆ ಅವನ ಬಾಯಿಂದ ಅಕ್ಷರಗಳೇ ಹೊರಡ ಲಿಲ್ಲ. ದುಃಖ-ಸಂತಾಪಗಳು ನಾ ಮುಂದೆ-ನಾ ಮುಂದೆ ಎಂದು ಅವನ ಹೃದಯ ದಲ್ಲಿ ಘನಘೋರ ಸಂಗ್ರಾಮವೆಸಗಿದವು. ಮನುಷ್ಯನಿಗೆ ಮರ್ಯಾದೆಯು ಜೀವ ಕ್ಕಿಂತಲೂ ಪ್ರಿಯವಿರುವದು. ಅದಕ್ಕೆ ಭಂಗವುಂಟಾದಾಗ ಅವನ ಸ್ಥಿತಿಯು ಮರಣಕ್ಕಿಂತಲೂ ಕಡೆಯಾಗುವದು; ಆದರೆ ಪ್ರಸ್ತುತ ಕಾಲದಲ್ಲಿ ಇದರ ವಿಪರೀತ ಸ್ಥಿತಿಯು ಕಂಡು ಬರುತ್ತಿರುವದು. ಮೂಗು ಹೋದರೆ, ಮೂಗಿನ ಹೊರಳೆ ಗಳೇನಾದರೂ ಹೋದವೇನೆಂದು ಎದೆಯುಬ್ಬಿಸಿ ನಡೆಯುತ್ತಿರುವ ಮಾನಶೂನ್ಯ ಮಾನವರನ್ನು ಈಗ ಹೇರಳವಾಗಿ ಕಾಣಬಹುದು. ಕಿಂಬಹುನಾ ಆ ಘನತರ ವಾದ ಮರ್ಯಾದೆಯನ್ನು ಕಾಯ್ದುಕೊಳ್ಳುವಷ್ಟು ದಾರ್ಢ್ಯವೂ ಸಾಮರ್ಥ್ಯವೂ ಈಗಿನ ಪರಿಸ್ಥಿತಿಯಲ್ಲಿ ಉಳಿದಿಲ್ಲವೆಂದು ಹೇಳಬಹುದು; ಆದರೆ ನಮ್ಮ ಕಥಾ ನಕವು ನಡೆದ ಕಾಲದಲ್ಲಿ ಮರ್ಯಾದೆಯೆಂಬ ಶಬ್ದಕ್ಕೆ ಉಚ್ಚಪ್ರತಿಯ ಸ್ಥಾನವು ಸಿಕ್ಕಿತ್ತು. ಅಂತೇ ವೃದ್ಧ ಲಕ್ಷ್ಮಣದಾಸನು ಶತ್ರುಗಳು ಮಗಳನ್ನು ಅಪಹರಿಸಿ ದರೆಂಬ ಸುದ್ದಿಯ ಶ್ರವಣದಿಂದ ಸಂತಾಪದಿಂದ ಉರಿಯತೊಡಗಿದನು. ಅವನಿಗೆ ಕುಳಿತರೆ ಸಮಾಧಾನವಿಲ್ಲ; ನಿಂತರೆ ಸಮಾಧಾನವಿಲ್ಲ. ಸರ್ವದಾ ಅಸಮಾಧಾನ ಸ್ಥಿತಿಯೇ ಪ್ರಾಪ್ತವಾಯಿತು. ವೃದ್ಧಾಪ್ಯವು; ಅದರಲ್ಲಿಯೂ ದೇಹಕ್ಕೆ ಅನಾ ರೋಗ್ಯವು. ಇಂಥ ಸ್ಥಿತಿಯಲ್ಲಿ ಈ ಬಗೆಯ ಮಾನಹಾನಿಯು ಸಂಕಟವೊದಗಿದ್ದ ರಿಂದ, ಆ ಮುದುಕನ ದೈನ್ಯಾವಸ್ಥೆಗೆ ಸೀಮೆಯೇ ಉಳಿಯದಾಯಿತು! ಅವನು ಒಮ್ಮೆ ನಿಟ್ಟುಸಿರು ಬಿಟ್ಟು, ತಾನು ತನ್ನ ಮಗಳನ್ನು ನಿರಂಜನ ಯೋಗಿಗಳ ಬಳಿಯಿಂದ ಯಾಕೆ ಕರೆಕಳುಹಿದೆನೆಂದು ಹಳಹಳಿಸಿದನು. ಹೀಗೆ ಅವನು ಚಿಂತಿಸುತ್ತಿರಲು, ಅವನ ಪ್ರೀತಿಯ ಸರದಾರನಾದ ಅಜಿತಸಿಂಹನು ಒಮ್ಮಿಂದೊಮ್ಮೆ ಅವನ ಮುಂದೆ ಬಂದು ನಿಂತುಕೊಂಡನು. ಮುದುಕನಿಗೆ ದಿಗ್ಭ್ರಮೆಯಾಗಿ ಹೋಯಿತು. ತಾನು ಯಾರನ್ನು ನೋಡುತ್ತೇನೆಂಬದು ಅವ ನಿಗೆ ತೋಚದಾಯಿತು. ಇದು ಏನು ಕನಸು ಬಿದ್ದಿರುವದೋ ಅಥವಾ ನಿಜ ವಾಗಿಯೂ ಅಜಿತಸಿಂಹನು ಆ ನೀಚನ ಕೈಯೊಳಗಿಂದ ಪಾರಾಗಿ ಬಂದಿರುವನೊ? ಹಾಗಾದರೆ ನನ್ನ ಪ್ರಿಯ ಕುವರಿಯೆಲ್ಲಿ? ಛೇ! ಇದು ಸ್ವಪ್ನವಲ್ಲ. ನಿಜವಾಗಿಯೂ ಅಜಿತಸಿಂಹನು ನನ್ನ ಮುಂದೆ ನಿಂತಿರುವನು. (ಹಾಸಿಗೆಯಿಂದೆದ್ದು ಕುಳಿತು): ಅಜಿತಸಿಂಹಜೀ, ಏನು ಅದ್ಭುತವಿದು? ನನ್ನ ಪ್ರಿಯಪುತ್ರಿಯನ್ನು ಆ ನೀಚನು

ಅಪಹರಿಸಿದನೇ-ಅಪಹರಿಸಲಿ! ಅಪ್ಪಾಸರದ ಈ ವೃದ್ಧ ಲಕ್ಷ್ಮಣದಾಸನು ಈ ಸೇಡನ್ನು ತೀರಿಸಿಕೊಳ್ಳದೆ ಬಿಡನು, ಎಂದು ನುಡಿದನು. ಅಜಿತಸಿಂಹನು ಆ ಮುದುಕನ ಕಷ್ಟಮಯ ಸ್ಥಿತಿಯನ್ನು ನೋಡಿ ಕಳವಳಗೊಂಡು:—"ಮಹಾರಾಜ, ದುರದೃಷ್ಟವು ನಮ್ಮನ್ನು ಬೆನ್ನಟ್ಟಿರುವದು. ಬೆಕ್ಕು ಇಲಿಯನ್ನು ಒಮ್ಮೆ ಹಿಡಿದು, ಪುನಃ ಅದನ್ನು ಬಿಟ್ಟು ತುಸ ಮುಂದಕ್ಕೆ ಹೋದ ಮೇಲೆ ಮತ್ತೆ ಹಿಡಿದು ಹೇಗೆ ಪೀಡಿಸುತ್ತಿರುವದೋ, ಹಾಗೆ ದುರದೃಷ್ಟವು ನಮ್ಮನ್ನು ಪೀಡಿಸುತ್ತಿರುವದು" ಎಂದು ನುಡಿದು, ತಾನು ಮನೆಯಿಂದ ಹೊರಟಾಗಿನಿಂದ ಕೇಸರಿಸಿಂಹನ ಸೆರೆಯಲ್ಲಿ ಬೀಳುವ ವರೆಗೆ ನಡೆದ ಎಲ್ಲ ಸಂಗತಿಗಳನ್ನೂ ಹೇಳಿದನು. ಅವನ್ನು ಕೇಳಿ-ಕೇಳಿದ ಹಾಗೆ ಆ ಮುದುಕನ ಸಂತಾಪವು ಹೆಚ್ಚುತ್ತ ನಡೆಯಿತು. ಆಗ ಅವನು ಕ್ಷಣಹೊತ್ತು ಸಂತಾಪವನ್ನು ತಡೆದು:—"ಅಜಿತಸಿಂಹಜೀ, ನೀನು ಆ ನೀಚನ ಸೆರೆಯೊಳಗಿಂದ ಹೇಗೆ ಪಾರಾಗಿ ಬಂದೆ?" ಎಂದು ಕೇಳಿದನು. ಅಜಿತಸಿಂಹನು ತಪ್ಪಿಸಿಕೊಂಡು ಬಂದ ಸಂಗತಿಯನ್ನು ಹೇಳತೊಡಗಿದನು:

"ಮಹಾರಾಜ, ನಾನು ಯಾವಾಗ ದುರದೃಷ್ಟದಿಂದ ಆ ನರಾಧಮನ ಸೆರೆಯಲ್ಲಿ ಸಿಕ್ಕೆನೋ, ಆಗ ನಾನು ಪೂರಾ ಹತಾಶನಾದೆನು. ಆ ನೀಚನು ನಮ್ಮನ್ನು ತನ್ನ ದುರ್ಗಕ್ಕೆ ಒಯ್ದು ನನ್ನ ಹಾಗು ನನ್ನ ಸೇವಕರ ಇಹಲೋಕದ ಯಾತ್ರೆಯನ್ನು ಮುಗಿಸಿ, ರೂಪಸುಂದರಿದೇವಿಯವರ ಪಾಣಿಗ್ರಹಣ ಮಾಡುವನೆಂದು ತಿಳಿದೆನು; ಆದರೆ ಅಲ್ಲಿಗೆ ಹೋದ ಬಳಿಕ ಬೇರೆ ಪ್ರಕಾರವೇ ವರ್ತಿಸಿತು. ಗವಿಯಲ್ಲಿ ನಾನು ಕಡಿದ ಕಡತವು ವಿಶೇಷವಾಗಿ ಆದ್ದರಿಂದ ಆ ನರಾಧಮ-ಕೇಸರಿಸಿಂಹ-ನು ಹಾಸಿಗೆ ಹಿಡಿದನು. ಆದರಿಂದ ಅವನು ದೇವಿಯವರ ಪಾಣಿಗ್ರಹಣ ಮಾಡಲಿಲ್ಲ. ನನ್ನ ಸನಿಯಕ್ಕೂ ಬರಲಿಲ್ಲ. ಕರ್ಮ-ಧರ್ಮಸಂಯೋಗದಿಂದ ನಮ್ಮೊಬ್ಬ ಗುಪ್ತಹೇರನು ಆ ಕಾರಾಗೃಹದಲ್ಲಿ ನನಗೆ ಭೆಟ್ಟಿಯಾದನು. ಅವನಿಂದ ಎಲ್ಲ ಸಂಗತಿಗಳನ್ನು ತಿಳಿದುಕೊಳ್ಳಲಿಕ್ಕೆ ನನಗೆ ತುಂಬಾ ಅನುಕೂಲವಾಯಿತು; ಹಾಗು ಒಂದುದಿನ ರಾತ್ರಿ ನಾನು ಕಾವಲುಗಾರರ ವೇಷದಿಂದ ಆ ದುರ್ಗವನ್ನು ಬಿಟ್ಟು ಹೊರಬಿದ್ದೆನು. ರೂಪಸುಂದರೀದೇವಿಯವರನ್ನು ಬಿಡಿಸಲಿಕ್ಕೆ ಮಾರ್ಗ ವಿರುವದೇನೋ? ಎಂದು ಬಹಳವಾಗಿ ಹೆಣಗಿದೆನು; ಆದರೆ ಆ ನೀಚನು ದೇವಿಯವರನ್ನು ಬಹು ಭದ್ರವಾಗಿಟ್ಟಿರುವನು. ಆದ್ದರಿಂದ ನಾನೊಬ್ಬನೇ ಪಾರಾಗಿ ಬಂದೆನು. ಮಹಾರಾಜರೇ, ಕಿರುಮಂಜೆ ದುರ್ಗವನ್ನು ಇದು ವರೆಗೂ ನಾನು ನೋಡಿದ್ದಿಲ್ಲ. ಅದು ಬಹು ಭದ್ರವಾಗಿರುವದು. ಅದರ ಎತ್ತರವಾದ ಗೋಡೆಗಳು ಬಹು ಭದ್ರವಾಗಿದ್ದು, ದುರ್ಗವು ಅತಿ ಎತ್ತರವಾದ ಗುಡ್ಡದ ಮೇಲಿರುವದರಿಂದ, ಆ ದುರ್ಗವು ನಿಜವಾಗಿಯೂ ದುರ್ಗಮವಾಗಿದೆ. ಇಂಥ ಕೋಟೆಯು

ಬಲವಿದ್ದುದರಿಂದಲೇ ಆ ದುಷ್ಟನು ಈ ರೀತಿ ಪುಂಡಾಟಿಕೆ ನಡಿಸಿರುವನು. ಇರಲಿ. ಆ ಬಳಿಕ ನಾನು ಎಲ್ಲಿಯೂ ನಿಲ್ಲದೆ ನೆಟ್ಟಗೆ ತಮ್ಮ ಸನ್ನಿಧಿಗೆ ಬಂದೆನು; ಆದರೆ ಏನು ಮಾಡಬೇಕು? ದೇವಿಯವರನ್ನು ಆ ಕಾಮಾಂಧನ ವಶದಲ್ಲಿ ಬಿಟ್ಟು ಬರ ಬೇಕಾದ್ದರಿಂದ, ನಾನು ಬದುಕಿ ಬಂದರೂ ವ್ಯರ್ಥವಾದಂತಾಗಿದೆ.''

ಅಜಿತಸಿಂಹನ ಈ ಮಾತುಗಳನ್ನು ಕೇಳಿ ವೃದ್ಧ ಲಕ್ಷ್ಮಣದಾಸನು ಸ್ವಲ್ಪ ಸಮಾಧಾನ ಸ್ವರದಿಂದ:—''ತಮ್ಮಾ, ಇನ್ನೂ ಆ ನೀಚನು ನಮ್ಮ ಕಂದಮ್ಮನ ಪಾಣಿಗ್ರಹಣ ಮಾಡಿಲ್ಲವಷ್ಟೇ; ಆತನು ಆ ಕೆಲಸಕ್ಕೆ ಉದ್ಯುಕ್ತನಾಗಬೇಕಾದರೆ, ಇನ್ನು ಎಷ್ಟು ದಿವಸಗಳ ಅವಕಾಶವಿರಬಹುದೆಂಬುದು, ಆ ನಿನ್ನ ಗುಪ್ತಹೇರನ ಮುಖಾಂತರವಾಗಿ ವಿಶ್ವಸನೀಯ ಸಂಗತಿಯು ನಿನಗೆ ತಿಳಿದಿರಬಹುದಲ್ಲವೆ?'' ಎಂದು ಕೇಳಿದನು. ಅದಕ್ಕೆ ಅಜಿತಸಿಂಹನು:—ಮಹಾರಾಜರೆ, ತಿಳಿದ ಸಂಗತಿ ಯು ವಿಶ್ವಸನೀಯವಾದದ್ದೇ ಸರಿ! ಆದರೆ ಇಂತಿಷ್ಟೇ ದಿವಸಗಳಿಗೆ ಪಾಣಿಗ್ರಹಣ ಮಹೋತ್ಸವವನ್ನು ನೆರವೇರಿಸಿಕೊಳ್ಳುತ್ತೇನೆಂಬ ವಿಷಯದ ತನ್ನ ಅಭಿಪ್ರಾಯ ವನ್ನು ಆ ನೀಚನಿನ್ನೂ ಪ್ರಕಟಿಸಿಲ್ಲ. ಅವನ ಗಾಯವು ಮಾಯ್ದು ಅವನು ಪಾಣಿ ಗ್ರಹಣ ಮಾಡುವದಕ್ಕೆ ಶಕ್ತನಾಗಬೇಕಾದರೆ, ಒಂದು ತಿಂಗಳು ಬೇಕಾಗಬಹು ದೆಂದು ನಾನು ತಿಳಿಯುತ್ತೇನೆ. ನಮ್ಮ ಗುಪ್ತಹೇರನು ಅಲ್ಲಿರುವದರಿಂದ, ಈ ವಿಷಯವಾಗಿ ನಮಗೆ ಮೇಲಿಂದಮೇಲೆ ಸುದ್ದಿಗಳು ತಿಳಿಯಬಹುದಾಗಿವೆ; ಆದರೆ ಮಹಾರಾಜರೇ, ಆ ನೀಚನ ಪಾರುಪತ್ಯಕ್ಕೆ ಮುಂದೇನು ಹಂಚಿಕೆ ಮಾಡಿದ್ದೀರಿ?

ವೃದ್ಧ ಲಕ್ಷ್ಮಣದಾಸ(ಸಂತಾಪದಿಂದ):—ಅಜಿತಸಿಂಹ, ಏನು ಮಾಡಲಿ? ನನ್ನ ಮೈಯೆಲ್ಲ ಉರಿಯುತ್ತದೆ. ನಮ್ಮ ಬಲವು ಆ ನೀಚನನ್ನು ಎದುರಿಸಲು ಸಮರ್ಥವಾದೀತೆ?

ಅಜಿತಸಿಂಹ:— ಅದೇ ಯೋಚನೆಯು ನನ್ನನ್ನೂ ಬಾಧಿಸುತ್ತದೆ. ಆ ಕೇಸರಿಸಿಂಹನು ಯುದ್ಧ ಸಾಮಗ್ರಿಗಳನ್ನು ಶಕ್ತಿ ಮೀರಿ ಸಂಗ್ರಹಿಸಿರುವನು; ಅವ ನಲ್ಲಿ ಸೈನ್ಯದ ಪ್ರಮಾಣವಾದರೂ ಬಹು ದೊಡ್ಡದಿರುವದು. ಮೇಲಾಗಿ ಆತನಿಗೆ ಕೆಲವು ನೀಚಬುದ್ಧಿಯ ಸಂಸ್ಥಾನಿಕರ ಬೆಂಬಲವಿರುವದು ದುರ್ಭೇದ್ಯವಾದ ದುರ್ಗ, ಅದರಲ್ಲಿ ಅಸಂಖ್ಯ ಸೈನ್ಯ, ವಿಪುಲ ಯುದ್ಧಸಾಮಗ್ರಿ ಇಷ್ಟೆಲ್ಲ ಅನು ಕೂಲತೆಯಿದ್ದ ಬಳಿಕ, ಆತನು ನಮಗೆ ಸಹಜವಾಗಿ ಹಣಿಯಬಹುದೇ?

ವೃದ್ಧ ಲಕ್ಷ್ಮಣದಾಸ:— ಅಜಿತಸಿಂಹಾ, ನೀನು ಹೇಳಿದ್ದೆಲ್ಲ ನಿಜವಿದ್ದ ಪಕ್ಷದಲ್ಲಿ ಅವನನ್ನು ಗೆಲ್ಲುವದು ನಮ್ಮಿಂದ ಅಶಕ್ಯವೇ ಸರಿ. ಯಾಕಂದರೆ, ನಾನು ವೃದ್ಧನು; ನಮ್ಮ ಸೈನ್ಯವಾದರೂ ಅಲ್ಪ ಸಂಖ್ಯಾಕವಾದದ್ದು. ಇಂಥ ಪರಿಸ್ಥಿತಿಯಲ್ಲಿ ಪ್ರಬಲ ಶತ್ರುವಿಗೆ ಎದುರಾಗುವದೇ ಭಯಂಕರ ಕೆಲಸವಾಗಿದೆ.

ನಮ್ಮ ಕಂದವನ್ನು ನನ್ನಂತೆ ಬಿಡಿಸಲೇ ಬೇಕಾಗಿರುವದು; ಆದರೆ ಸಾಮರ್ಥ್ಯ ವಾದರೋ ಇಲ್ಲ. ಅಜಿತಸಿಂಹಾ, ಈ ಪ್ರಸಂಗದಲ್ಲಿ ನಾನೇನು ಮಾಡಲಿ? ನೀನಾದರೂ ಯುಕ್ತಿಯನ್ನು ಹೇಳಬಾರದೇ? (ಕಣ್ಣಿಗೆ ನೀರು ತಂದನು.)

ಅಜಿಸಿಂಹನು(ಕಳವಳಗೊಂಡು):— ಮಹಾರಾಜರೇ, ಶೋಕಿಸಬೇಡಿರಿ. ನಿಮ್ಮ ಪ್ರತಿಜ್ಞೆಯನ್ನು ಕೊನೆಗಾಣಿಸಲು ಸ್ವಾಮಿ ಏಕಲಿಂಗಜೆಯು ಸಮರ್ಥನಿರುವನು. ಆತನ ಹೆಸರು ತಕ್ಕೊಂಡು ನಾನು ನನ್ನ ಹಾಗು ನಿಮ್ಮ ಸೈನ್ಯ ಸಹಿತ ಆ ನರಾಧಮನ ಮೇಲೆ ಸಾಗಿ ಹೋಗುವೆನು. ಈ ಅಪ್ಪಾಸರದ ಸಿಂಹಾಸನದ ಆಧಿಪತ್ಯಕ್ಕೊಳಗಾದ ಎಲ್ಲ ಸರದಾರರೂ ಈ ಕಾಲಕ್ಕೆ ಸಹಾಯ ಮಾಡದೆ ಇರಲಾರರು.

ವೃದ್ಧಲಕ್ಷ್ಮಣದಾಸ:-"ತಮ್ಮಾ, ನಮ್ಮ ಸರದಾರಾರರರೂ ಯಾರಿರುವರು? ಇದ್ದವರಲ್ಲಿ ಒಬ್ಬಿಬ್ಬರು ವೃದ್ಧರಿರುವರು. ಮಿಕ್ಕವರಲ್ಲಿ ಮೂವರು-ನಾಲ್ವರು ನಮ್ಮ ಮೇಲೆ ಅಷ್ಟು ಪ್ರೀತಿಯಿಲ್ಲದೆ ಇರುವರು. ಉಳಿದವರೆಂದರೆ ನೀನೊಬ್ಬನು; ಗೋಜೆಯ ವಿಶಾಲದೇವನೊಬ್ಬನು. ನಿಮ್ಮಿಬ್ಬರ ಅಲ್ಪ ದಂಡಿನಿಂದಲೂ ನನ್ನ ಖಾಸ ದಂಡಿನಿಂದಲೂ ಏನೂ ಪ್ರಯೋಜನವಾಗದು. ಆದ್ದರಿಂದ ಇಂಥ ಸಾಹಸಕ್ಕೆ ಹೋಗುವದು ನಮಗೇ ಘಾತುಕವಿರುತ್ತದೆ. ಯಾಕಂದರೆ ತರುಣರೂ ಉತ್ಸಾಹಿಗಳೂ ಆದ ನಿಮ್ಮಂಥವರು ಆ ದುಷ್ಟನ ಖಡ್ಗಕ್ಕೆ ಆಯಾಸವಿಲ್ಲದೆ ಆಹುತಿಯಾಗಿ ಹೋದಿರೆಂದರೆ, ಮುಂದೆ ರೂಪಸುಂದರಿಯನ್ನು ಬಿಡಿಸುವದು ಹ್ಯಾಗೆ? ಸಮಬಲವಿದ್ದರೆ, ಇಲ್ಲವೆ ಸ್ವಲ್ಪ ಹೆಚ್ಚು ಕಡಿಮೆಯಿದ್ದರೆ ನೀನು ಅವನ ಮೇಲೆ ಸಾಗಿಹೋಗಬಹುದಾಗಿತ್ತು; ಆದರೆ ವಸ್ತುಸ್ಥಿತಿಯು ಬೇರೆಯಿರುವದು. ಅವನ ಬಲಕ್ಕೂ ನಮ್ಮ ಬಲಕ್ಕೂ ಅಜಗಜಾಂತರವಿರುವದು. ಇದನ್ನು ತಿಳಿದೂ ತಿಳಿದು ಪರೀಕ್ಷೆ ಮಾಡುವದೆಂದರೆ, ಮೂರ್ಖತನದ ಸಾಹಸವೇ ಸರಿ. ಇರಲಿ. ಅಜಿತಸಿಂಹಾ, ಈ ಕಾಲಕ್ಕೆ ನನಗೊಂದು ಹಂಚಿಕೆಯು ತೋರಿರುವದು; ಅದರಂತೆ ಕಾರ್ಯಮಾಡುವದು ಸಯುಕ್ತಿಕವಾಗಿದೆ.

ಅಜಿತಸಿಂಹ:— ಮಹಾರಾಜರೇ, ಅಂಥ ಸುಗಮವಾದ ಯುಕ್ತಿಯು ಯಾವದದು? ಒಂದುವೇಳೆ ಅದರಿಂದ ಕಾರ್ಯವು ಸಾಧಿಸಿದರೆ, ಬಹಳ ಒಳಿತಾಯಿತು. ಕುರುಡನು ಏನು ಬೇಡುವನು, ಎರಡು ಕಣ್ಣೇ ಅಲ್ಲವೇ?

ವೃದ್ಧ ಲಕ್ಷ್ಮಣದಾಸ:- ಆ ಯುಕ್ತಿಯು ಸಯುಕ್ತಿಕವಿದ್ದರೂ ಸ್ವಲ್ಪ ಕ್ಷಾತ್ರಧರ್ಮಕ್ಕೆ ಅನುಚಿತವಾದದ್ದಾಗಿದೆ, ನಮ್ಮಂಥವರು ಅದನ್ನು ಆಚರಿಸುವದೆಂದರೆ, ಒಂದು ಬಗೆಯಿಂದ ಆಪದ್ಧರ್ಮವೆಂದೇ ತಿಳಿಯಬೇಕಾಗುತ್ತದೆ.

ಅಜಿತಸಿಂಹ (ಉತ್ಕಂಠಿತನಾಗಿ):— ಅದು ಯಾವುದೆಂಬಂದನ್ನು ಹೇಳಿ

ಯಾದರೂ ಹೇಳಿರಿ. ನೀವು ಗುಪ್ತ ವಿರಿಸಿ ವರ್ಣಿಸಿದ ಹಾಗೆ ನನಗೆ ಅದನ್ನು ಕೇಳುವ ಇಚ್ಛೆಯು ಹೆಚ್ಚುತ್ತದೆ.

ವೃದ್ಧ ಲಕ್ಷ್ಮಣದಾಸ: - ಅಜಿತಸಿಂಹಾ, ನನ್ನ ಮನಸ್ಸಿನಲ್ಲಿ ಬಂದ ಆ ಯೋಚನೆಗಳನ್ನು ನಿನ್ನ ಮುಂದೆ ಹೇಳದಿದ್ದರೆ ನನ್ನ ಕೆಲಸವೇ ಆಗುವ ಹಾಗಿಲ್ಲ. ರೂಪಸುಂದರಿಯನ್ನು ನಿರಂಜನ ಯೋಗಿಗಳ ಬಳಿಗೆ ಕಳಿಸುವ ಪ್ರಸಂಗ ಬಂದಾಗ ನಾನು ನಿನ್ನನ್ನು ವಿಚಾರಿಸಲಿಲ್ಲ. ಛೇ! ಮರೆತೆನು. ವಿಚಾರಿಸಲಿಕ್ಕೆ ಆಗ ನನಗೆ ಅವಕಾಶವೇ ದೊರೆಯಲಿಲ್ಲ. ಏನೇ ಆಗಲಿ, ಆ ಮಾತನ್ನು ನಾನು ನಿನ್ನ ಕಿವಿಯ ಮೇಲೆ ಹಾಕದಿದ್ದದ್ದು ನಿಜವು; ಆದ್ದರಿಂದಲೇ ನಾನಿಷ್ಟು ದುಃಖವನ್ನು ಭೋಗಿಸುವ ಪ್ರಸಂಗವೊದಗಿದೆ. ಈಗ ನನ್ನ ಮನಸ್ಸಿನಲ್ಲಿ ಬಂದ ಯೋಚನೆಯೇನಂದರೆ: "ಈ ಕಾಲಕ್ಕೆ ನಮಗೆ ಸಹಾಯಕರು ನಮ್ಮ ಗುರ್ಜರ ದೇಶದಲ್ಲಿ ಸಿಕ್ಕುವದು ದುರ್ಲಭವೇ ಸರಿ. ಯಾಕಂದರೆ, ಈಗಿನ ಇಲ್ಲಿಯ ಸ್ಥಿತಿಯನ್ನು ನಿನ್ನ ಮುಂದೆ ಹೇಳಬೇಕೆನ್ನುವ ಹಾಗಿಲ್ಲ; ನೀನದನ್ನು ತಿಳಿದೇ ಇರುತ್ತೀ; ಬಹು ಜನ ಸಂಸ್ಥಾನಿಕರು ರೂಪಸುಂದರಿಯನ್ನು ತಮಗೆ ಕೊಡದ್ದಕ್ಕೆ ನನ್ನ ಮೇಲೆ ವಿಷ ಕಾರುತ್ತಿರುವರು. ಯಾವನಾದರೂ ಒಬ್ಬ ಕುಲೀನ ಹಾಗು ಗೌರವಶಾಲಿಯಾದ ಸಂಸ್ಥಾನಿಕನಿಗೆ ನನ್ನ ಮಗಳನ್ನು ಅರ್ಪಿಸಬೇಕೆಂದು ನಾನು ಮನಸಾ ಸಂಕಲ್ಪವ ಮಾಡಿರುವೆನು; ಆದರೆ ಇಂಥ ಯೋಗ್ಯ ಸ್ಥಳವು ಸಿಕ್ಕುವದು ಕಠಿಣವಾಗಿದೆ. ಇದಕ್ಕಾಗಿ ನಾನು 'ಚಾಲುಕ್ಯ ಸಮ್ರಾಟ'ನ ಸಹಾಯವನ್ನು ಪಡೆಯಬೇಕೆಂದು ಮಾಡಿದ್ದೇನೆ. ಆತನು ನಮ್ಮ ದೇಶಕ್ಕೆ ದಂಡೆತ್ತಿ ಬಂದಿರುವದರಿಂದ, ಅವನು ನಮಗೆ ಸಹಾಯ ಮಾಡುವ ವಿಷಯದಲ್ಲಿ ಹಿಂದು-ಮುಂದೆ ನೋಡಲಾರನು. ಇದಕ್ಕೆ ನಿನ್ನ ಅಭಿಪ್ರಾಯವೇನು?"

ಅಜಿತಸಿಂಹ:—ಮಹಾರಾಜರೇ, ಇದು ವಿಚಾರಿಸತಕ್ಕ ಮಾತಾಗಿದೆ. ಯಾಕಂದರೆ, ಚಾಲಕ್ಯ ಸಮ್ರಾಟನು ಹೇಳಿ-ಕೇಳಿ ನಮ್ಮ ಶತ್ರುವಾಗಿ ಬಂದಿರುವನು. ಅವನು ಇಷ್ಟರಲ್ಲಿಯೇ ಹಲ ಕೆಲವು ದುರ್ಗಗಳನ್ನು ಕೈವಶಮಾಡಿಕೊಂಡು ಗುರ್ಜರ ಭೂಪುತ್ರರನ್ನು ಪರಾಜಯಗೊಳಿಸಿರುವನು. ಇಡೀ ಗುರ್ಜರ ಭೂಮಿಯನ್ನು ಪಾದಾಕ್ರಾಂತವಾಗ ಮಾಡುವ ಹವ್ಯಾಸವು ಅವನಿಗುಂಟಾಗಿದೆಯಂತೆ! ಅಂದಮೇಲೆ ತೂಕಡಿಸುವವರಿಗೆ ಹಾಸಿಗೆ ಹಾಸಿ ಕೊಟ್ಟಂತೆ ನಮ್ಮ ಆಮಂತ್ರಣವು ಅವನಿಗೆ ಪಥ್ಯಕರವಾಗಿಯೇ ಪರಿಣಮಿಸುವದು; ಆದರೆ ಶತ್ರುವಿಗೆ ಹೀಗೆ ನಿಮಂತ್ರಣ ಕೊಡುವದು ವಿಹಿತವಾಗಬಹುದೇ?

ವೃದ್ಧ ಲಕ್ಷ್ಮಣದಾಸ:—ಅಜಿತಸಿಂಹಾ, ನೀನು ಹೇಳಿದ್ದೆಲ್ಲ ನಿನ್ನ ದೃಷ್ಟಿಯಿಂದ ನಿನಗೆ ನಿಜವೆಂದು ತೋರಬಹುದು; ಆದರೆ ನಿನ್ನ ಈ ವಿಚಾರಗಳಲ್ಲಿ

ದೋಷವಿರುವದು. ಅದೇನೆಂದರೆ, ನಮ್ಮ ಗುರ್ಜರಭೂಪುತ್ರರು ಧರ್ಮವಂತರೂ ಬಲಿಷ್ಠರೂ ಆಗಿದ್ದರೆ, ಸಮ್ರಾಟ ಚಾಲುಕ್ಯನು ನಮ್ಮಲ್ಲಿಗೆ ಏಕೆ ಬರುತ್ತಿದ್ದನು? ಸಮ್ರಾಟನ ನ್ಯಾಯ-ನೀತಿಗಳು ನಿನಗೆ ಗೊತ್ತಿಲ್ಲವೆಂಬಂತೆ ತೋರುತ್ತದೆ; ಆತನು ಪಾಪಭೀರುವಿದ್ದು, ನೀತಿಮಾರ್ಗವನ್ನು ಬಿಟ್ಟು ಎಂದೂ ನಡೆಯುವದಿಲ್ಲ. ಮನುಷ್ಯನಿಗೆ ಯಶಸ್ಸು, ಆಯುಸ್ಸು, ಶ್ರೀ ಇತ್ಯಾದಿಗಳು ಲಭಿಸಬೇಕಾದಲ್ಲಿ ಅಥವಾ ಲಭಿಸಿದ ಆಯುಃಕೀರ್ತಿಗಳು ಸ್ಥಿರವಾಗಿರಬೇಕಾದಲ್ಲಿ, ಅವನ ನೀತಿಮತ್ತೆಯೇ ಮುಖ್ಯವಾಗಿ ಕಾರಣವಾಗಿರುತ್ತದೆ. ನಾನು ಕೇಳಿದ ಸಂಗತಿಗಳಲ್ಲಿ ಸಮ್ರಾಟನಲ್ಲಿ ನ್ಯಾಯ-ನೀತಿಗಳು ಉತ್ಕೃಷ್ಟವಿರುವವೆಂಬದು ನನಗೆ ಕಂಡು ಬಂದಿರುತ್ತದೆ; ಆದ್ದರಿಂದ ಆ ಗೌರವೀ ಪುರುಷನ ವಿಷಯವಾಗಿ ಯಾರೂ ಮತ್ಸರ ತಾಳಬಾರದೆಂದು ನನ್ನ ಮತವಿರುತ್ತದೆ. ಯಾಕಂದರೆ, ಅವನಿಂದ ನಮ್ಮ ಕಲ್ಯಾಣವೇ ಇರುತ್ತದೆ.

ಅಜಿತಸಿಂಹ(ಯೋಚಿಸಿ):— ಮಹಾರಾಜ, ನಮ್ಮ ದುರ್ಗಗಳು ನಮ್ಮ ಕೈಬಿಟ್ಟು ಹೋದರೆ, ನಮ್ಮ ಕಲ್ಯಾಣವಾದಂತಾಯಿತೆಂಬದೇ ನಿಮ್ಮ ಮತವೇನು?

ವೃದ್ಧ ಲಕ್ಷ್ಮಣದಾಸ:—ಅಜಿತಸಿಂಹಾ ಸ್ವಲ್ಪ ಸಮಾಧಾನದಿಂದ ಯೋಚಿಸಿದರೆ, ನಿನಗೆ ಎಲ್ಲವೂ ತಿಳಿದು ಬರುವದು. ಇದು ವರೆಗೆ ನಿನ್ನ ಮನಸ್ಸು ಸಮ್ರಾಟನ ವಿಷಯಕ್ಕೆ ದೂಷಿತವಾದಂತೆ ತೋರುವದು. ಈ ದೂಷಿತ ಮನಸ್ಸನ್ನು ಒಮ್ಮೆ ಕೊಡವಿ ಆ ಮೇಲ ವಿಚಾರ ಮಾಡು.

ಅಜಿತಸಿಂಹ:— ನನಗೆ ಯಾಕೋ ಈ ವಿಷಯವು ಸಮಂಜಸವಾಗಿ ತೋರುವದಿಲ್ಲ.

ಈ ಮೇರೆಗೆ ಅವರಿಬ್ಬರ ಸಂಭಾಷಣವು ನಡೆದಿರಲು ಜಯ! ಏಕಲಿಂಗಜೀ! ಎಂಬ ಶಬ್ದವು ಅವರಿಗೆ ಕೇಳಿಸಿತು. ಕೂಡಲೆ ಅವರು ತಿರುಗಿ ನೋಡಿದರು. ಆಗ ಅವರ ಸಮ್ಮುಖದಲ್ಲಿಯೇ ಓರ್ವ ಜಟಾಧಾರಿಯು ನಿಂತುಕೊಂಡಿದ್ದನು.

ಆ ಜಟಾಧಾರಿಯು ಅತ್ಯಂತ ತೇಜಸ್ವಿಯಿದ್ದನು. ಅವನ ಮುಖದ ಮೇಲೆ ಸಾತ್ವಿಕವಾದ ತೇಜಸ್ಸು ವಿರಾಜಿಸುತಲಿತ್ತು. ಕೆಂಗಣ್ಣುಗಳೂ, ಕೃಶವಾದ ಅವಯವಗಳೂ ಅವನ ತಪಸ್ವಿತೆಯನ್ನು ವ್ಯಕ್ತಗೊಳಿಸುತ್ತಿದ್ದವು. ಯಾವ ಬಗೆಯ ಆಡಂಬರವೂ ಅವನಲ್ಲಿ ಕಂಡು ಬರುತ್ತಿದ್ದಿಲ್ಲ. ಈ ಸ್ಥಿತಿಯಲ್ಲಿದ್ದ ಜಟಾಧಾರಿಯು ಅಕಸ್ಮಾತ್ತಾಗಿ ದಿವಾಣಖಾನೆಯಲ್ಲಿ ಪ್ರವೇಶಿಸಿ ಎದುರಿಗೆ ನಿಂತುಕೊಂಡದ್ದನ್ನು ನೋಡಿ, ವೃದ್ಧ ಲಕ್ಷ್ಮಣದಾಸನು ವಿಸ್ಮಿತನಾದನು. ಅವನಿಗೆ ನೇತ್ರಮಾಂದ್ಯತೆಯ ಮೂಲಕವಾಗಿ ಆ ಜಟಾಧಾರಿಯ ಗುರುತು ಸಿಕ್ಕದೆ ಹೋಯಿತು. ಆಗ ಜಟಾಧಾರಿಯು ಮತ್ತೊಮ್ಮೆ ಏಕಲಿಂಗಜಿಯ ಜಯಘೋಷವ ಮಾಡಲು,

ಲಕ್ಷ್ಮಣದಾಸನಿಗೆ ದನಿಯು ಗುರ್ತು ಹತ್ತಿತು. ಕೂಡಲೆ ಅವನು ಪೀಠದಿಂದೆದ್ದು, ಜಟಾಧಾರಿಯ ಚರಣಕಮಲಗಳಿಗೆರಗಿ:—"ಭಗವನ್, ನನ್ನಿಂದ ಪ್ರಮಾದವಾಯಿತು. ಕ್ಷಮಿಸಬೇಕು. ನೇತ್ರಮಾಂದ್ಯದ ಮೂಲಕ ತಾವು ನಿರಂಜನ ಯೋಗಿಗಳೆಂಬದನ್ನು ತಿಳಿಯದೆ ಹೋದೆನು" ಎಂದು ನುಡಿದನು. ವೃದ್ಧ ಲಕ್ಷ್ಮಣದಾಸನು ಈ ರೀತಿ ಹೇಳಿಕೊಳ್ಳಲು, ಅಜಿತಸಿಂಹನೂ ಯೋಗಿಗಳಿಗೆ ನಮಸ್ಕರಿಸಿದನು. ಬಳಿಕ ಯೋಗಿಗಳು ಅವರನ್ನು ಕುರಿತು:—

"ರಾಜಾ, ನಮಗೆ ಈ ಬಗ್ಗೆ ಕ್ಷಮೆಯನ್ನು ಕೇಳಿಕೊಳ್ಳುವ ಕಾರಣವಿಲ್ಲ. ಸರ್ವದಾ ನಿನ್ನ ಹಿತವನ್ನೇ ಬಯಸುವ ನಮ್ಮಿಂದ ನಿನಗೆ ಅಹಿತವಾಗುವಂಥ ಕಾರ್ಯವು ಎಂದೂ ಸಂಘಟಿಸದು."

ಹೀಗೆ ಯೋಗಿಗಳು ಮಾತನಾಡಲು ರಾಜನು ಅವರನ್ನು ಪ್ರತಿಷ್ಠಿತಆಸನದ ಮೇಲೆ ಕುಳ್ಳಿರಿಸಿ, ಸಮಯೋಚಿತವಾಗಿ ಅವರನ್ನು ಗೌರವಿಸಿದನು. ಅನಂತರ ಯೋಗಿಗಳು ರಾಜನನ್ನು ಕುರಿತು:—

"ರಾಜಾ, ನಮ್ಮ ಸಮ್ಮತಿಯಿಲ್ಲದೆ ನಮ್ಮ ಬಳಿಯಿಂದ ನಿಮ್ಮ ಮಗಳನ್ನು ಕರೆಯಿಸಿಕೊಳ್ಳಬಹುದೋ? ಹಾಗಿದ್ದರೆ ಆಕೆಯನ್ನು ನಮ್ಮ ಬಳಿಯಲ್ಲಿಡುವದಕ್ಕೆ ನಿಮಿತ್ತವಾದರೂ ಏನು?"

ವೃದ್ಧ ಲಕ್ಷ್ಮಣದಾಸ (ಕಂಪಿತ ಸ್ವರದಿಂದ):— ಮಹಾರಾಜ, ನಾನು ಅಧಮನು. ನನ್ನಿಂದ ಮಹದಪರಾಧವಾಯಿತು. ನಾನು ತಮಗೆ ತಿಳಿಸದಂತೆ ಮಗಳನ್ನು ಕರೆಯಿಸಬೇಕೆಂದು ಇಚ್ಛಿಸಿದವನಲ್ಲ; ಆದರೆ ವೃದ್ಧಾಪ್ಯದಿಂದ ಜರ್ಜರಿತನಾದ ನಾನು, ಮೋಹದಿಂದ ಮಗಳನ್ನು ಕರೆಯಕಳುಹಿದ್ದೆನು; ಆದರೆ............

ಮುದುಕನ ಕಂಠವು ಬಿಗಿದು ಬಂದಿತು. ಅವನಿಂದ ಮುಂದೆ ಅಕ್ಷರಗಳೇ ಹೊರಡದಾದವು. ಅವನು ಮೂಕಭಾವವನ್ನು ತಾಳಿ ಅಧೋವದನನಾಗಲು ರೂಪಸುಂದರಿಯ ಭವಿತವ್ಯತೆಯನ್ನು ಕಂಡು ಹಿಡಿದವರಾದ ಆ ಸರ್ವಜ್ಞ ಯೋಗಿಗಳು ಮುಗುಳು ನಗೆ ನಕ್ಕು:—

"ರಾಜನೇ, ಯಾಕೆ ಶೋಕಿಸುವೆ? ಮುಂದೇನಾಯಿತು ಹೇಳು."

ಲಕ್ಷ್ಮಣದಾಸ:—ಭಗವನ್, ಮುಂದಿನ ಸಂಗತಿಯನ್ನು ಸರ್ವಜ್ಞರಾದ ತಾವು ತಿಳಿದೇ ಇರುವಿರಿ. ನಿಮಿತ್ತ ಮಾತ್ರಕ್ಕೆ ನನ್ನನ್ನು ಕೇಳುವಿರಿ.

ಯೋಗಿಗಳು:— ರಾಜನೇ, ನಿನ್ನ ಮಗಳ ವಿಷಯವಾಗಿ ನಾನು ಎಲ್ಲ ಸಂಗತಿಗಳನ್ನೂ ತಿಳಿದಿರುತ್ತೇನೆ. ಈಗ ಅವಳು ವಿಪತ್ತಿನಲ್ಲಿ ಬಿದ್ದಿದ್ದರೂ, ಮುಂದೆ ಅವಳಿಗೂ ನಿನಗೂ ಶುಭವುಂಟಾಗುಗುವದು. ಆದ್ದರಿಂದ ಅನುಮಾನ

ಮಾಡದೆ ಈಗ ನೀನು ಯೋಚಿಸಿರುವಂತೆ ಚಾಲುಕ್ಯ ಸಮ್ರಾಟನ ಆಶ್ರಯವನ್ನು ಹೊಂದು.

ಈ ಮೇರೆಗೆ ಮಾತಾಡಿ ಯೋಗಿಗಳು ಅದೃಶ್ಯರಾದರು. ಅವರ ಸಾಮರ್ಥ್ಯವನ್ನು ಬಲ್ಲವನಾದ ವೃದ್ಧ ಲಕ್ಷ್ಮಣದಾಸನು ಇಂಥ ಮಹಂತರ ಆಜ್ಞೆಯೇ ಶ್ರೇಯಸ್ಕರವೆಂದು ಸಮಾಧಾನ ಹೊಂದಿದನು.

## ೧೧ ವಿಲಕ್ಷಣ ಗುಪ್ತಹೇರ.

ಚಾಲುಕ್ಯ ಸಮ್ರಾಟನು ಪಾವಗಡದ ದಿವಾಣಖಾನೆಯಲ್ಲಿ ಒಬ್ಬನೇ ಕುಳಿತುಕೊಂಡಿದ್ದನು. ವೃದ್ಧ ಗಿರಿಸಿಂಹನು ಸಮ್ರಾಟನ ಸಹಾಯದಿಂದ ವನಕ್ಕೆ ಹೊರಟು ಹೋಗಿದ್ದನು. ಆತನ ರಾಣೀವಾಸವೂ ಅವನನ್ನು ಹಿಂಬಾಲಿಸಿ ಹೋಗಿತ್ತು. ಅವರೆಲ್ಲರ ಯೋಗಕ್ಷೇಮಕ್ಕಾಗಿ ಸಮ್ರಾಟನು ಬಹು ದಕ್ಷರಾದ ಅಧಿಕಾರಿಗಳನ್ನು ನಿಯಮಿಸಿದ್ದನು. ಈ ಮೇರೆಗೆ ಗಿರಿಸಿಂಹನ ವ್ಯವಸ್ಥೆಯು ಸಮಾಧಾನಕರವಾಗಿ ಆದದ್ದರಿಂದ ಸಮ್ರಾಟನು ಒಂದು ಬಗೆಯ ಆನಂದವನ್ನು ತಾಳಿ, ತಾನು ಕಂಡು ಹಿಡಿದ ಯುಕ್ತಿಯು ಕಾರ್ಯಕ್ಷಮವಾಗುವದೋ-ಇಲ್ಲವೋ ಎಂದು ಚಿಂತಿಸುತ್ತಿದ್ದನು. ಆಗ ಅವನು ಮನಸ್ಸಿನಲ್ಲಿ:—"ನಾನು ರಾಜಧಾನಿಯಿಂದ ಹೊರಟ ಮುಹೂರ್ತವು ಯಶಸ್ಕರವಿರುವದು. ಇದು ವರೆಗೆ ನಾನು ಸಂಪಾದಿಸಿದ ಜಯಕ್ಕಿಂತ ಈ ಪಾವಗಡದ ವಿಜಯವು ಅಪೂರ್ವವಿರುವದು. ಇದು ಕೇವಲ ದೈವಯೋಗದಿಂದಲೇ ಸಾಧ್ಯವಾಯಿತೆಂದು ಹೇಳಬಹುದು. ಇರಲಿ. ನಮ್ಮ ದೂತನು ಹೇಳಿದಂತೆ ಕಿರುಮಂಜೀ ದುರ್ಗಕ್ಕೆ ಹೋದರೆ ಹೇಗಾಗಬಹುದು? ಆ ನೀಚ ದುರ್ಗಾಧಿಪತಿಯು ಯಾವ ಸಾಧ್ವಿಯನ್ನು ಪ್ರತಿಬಂಧಿಸಿರುವನೋ ತಿಳಿಯದು. ಯಾವಳೇ ಇರಲಿ, ನಾನು ಆ ಕೋಟೆಯನ್ನು ಮುತ್ತಿ ಅದನ್ನು ಕೈವಶ ಮಾಡಿಕೊಂಡರೆ, ಆ ಸಾಧ್ವಿಯ ಬಿಡುಗಡೆಯು ಸಹಜವಾಗಿ ಆಗುವದು. ಲೋಕದಲ್ಲಿ ವೀರರಾದವರಿಗೆ ಅನಾಥರನ್ನೂ ನಿರ್ಬಲರನ್ನೂ ರಕ್ಷಿಸುವದೇ ಶ್ರೇಷ್ಠವಾದ ಧರ್ಮವಾಗಿರುವದು. ಯಾವ ನರಾಧಮನು ನಿರ್ಬಲರ ಮೇಲೆ ಪೌರುಷವನ್ನು ತೋರಿಸಹೋಗುವನೋ, ಅವನು ದುಃಖಭೋಗಿಯಾಗುವನು. ಅವನ ಕಾರ್ಯಗಳು ಕಲಂಕಿತವಾಗುವವು ಅಥವಾ ಮೃತಪ್ರಾಯವಾಗುವವೆಂದರೂ ಅಡ್ಡಿಯಿಲ್ಲ; ಆದರೆ ನಿರ್ಬಲರನ್ನು ರಕ್ಷಿಸುವವನ ಕಾರ್ಯಗಳೆಂದೂ ಕುಗ್ಗಲಾರವು. ಅವು ಅನಾಥರಕ್ಷಣೆಯ ಪುಣ್ಯವಿಶೇಷದಿಂದ ಸಂಜೀವನವನ್ನು ಹೊಂದಿ ಮತ್ತಿಷ್ಟು ಪ್ರಖರವಾಗುವವು. ಕಿರುಮಂಜಿಯ ದುರ್ಗಕ್ಕೆ ಮುತ್ತಿಗೆ ಹಾಕುವ ಪ್ರಸಂ

ಗವು ಇಂಥ ಸುಯೋಗದಲ್ಲಿ ಒಂದಾಗಿರುವದು. ಪ್ರಸಂಗವೇನೋ ಅನಾಯಾಸವಾಗಿ ಬಂದಿದೆ; ಆದರೆ ಕಿರುಮಂಜೆಯ ದುರ್ಗದಲ್ಲಿಯ ಪರಿಸ್ಥಿತಿಯು ಹೇಗಿದೆ? ಎಂಬದು ತಿಳಿಯಲಿಲ್ಲ. ನಮ್ಮ ದೂತರು ಇಷ್ಟರಲ್ಲಿಯೇ ಹೊರಳಿ ಬರಬಹುದಾಗಿತ್ತು! ಈಗ ಹೇಗೆ ಮಾಡೋಣ? ದೂತನು ಬರುವ ವರೆಗೆ ದಾರಿಯನ್ನು ಕಾಯಬೇಕೆಂದರೆ, ದಿವಸಗಳು ಸುಮ್ಮನೆ ಹೋಗುವವು. ಅಷ್ಟರಲ್ಲಿ ಆ ಸಾಧ್ವಿಯ ಪಾತಿವ್ರತ್ಯವು ಹರಣವಾಗಿ ಹೋದರೆ, ಹಿಂದುಗಡೆ ಪ್ರಯತ್ನವು ಮಾಡಿದ್ದು ವ್ಯರ್ಥವಾಗುವದು." ಎಂಬ ಹಲವು ಯೋಚನೆಗಳನ್ನು ತಂದುಕೊಂಡು ಅವುಗಳಲ್ಲಿಯೇ ತಲ್ಲೀನನಾಗಿದ್ದನು.

ಹೀಗೆ ಸಮ್ರಾಟನು ಯೋಚನೆಯಲ್ಲಿ ಬಿದ್ದಿರಲು, ಒಬ್ಬ ದೂತನು ಬಂದು ಮುಜುರೆಮಾಡಿ: "ಬಾಗಿಲಲ್ಲಿ ಅಪ್ಪಾಸರದ ವಕೀಲನೊಬ್ಬನು ಸಮಯವನ್ನು ಕೇಳುತ್ತಿರುವನು." ಎಂದು ಬಿನ್ನವಿಸಿಕೊಂಡನು. ದೂತನ ಈ ಮಾತುಗಳನ್ನು ಕೇಳಿ ಸಮ್ರಾಟನು ಕ್ಷಣಹೊತ್ತು ಯೋಚನೆಯನ್ನು ಬದಿಗೊತ್ತಿ:—ಆ ವಕೀಲನನ್ನು ಒಳಗೆ ಬಿಡು, ಎಂದು ಅಪ್ಪಣೆ ಮಾಡಿದನು.

ಅನಂತರ ಒಬ್ಬ ಪುರುಷನು ಒಳಗೆ ಬಂದನು. ಅವನು ಆ ಕಾಲದ ದರ್ಬಾರೀ ರೀತಿಗನುಸರಿಸಿದ ಸುಂದರವಾದ ಪೋಷಾಕಿನಿಂದ ಒಪ್ಪುತ್ತಿದ್ದನು. ಅವನ ಬಿಗುವಿನ ಮೈಕಟ್ಟೂ ಮುಖಗಾಂಭೀರ್ಯವೂ ಪ್ರೇಕ್ಷಕರ ಚಿತ್ತವನ್ನು ಆಕರ್ಷಿಸುತ್ತಿದ್ದವು; ಅವನು ಶೀಘ್ರಗತಿಯಿಂದ ಸಮ್ರಾಟನಿದ್ದೆಡೆಗೆ ಬಂದು ಬಹು ಆದರದಿಂದ ಮುಜುರೆ ಮಾಡಲು, ಸಾಮ್ರಾಟನು ಅವನನ್ನು ಯೋಗ್ಯವಾಗಿ ಸನ್ಮಾನಿಸಿ ಉಚಿತಾಸನದಲ್ಲಿ ಕುಳ್ಳಿರಿಸಿಕೊಂಡನು. ಬಳಿಕ ಆ ವಕೀಲನು ತಾನು ತಂದಿದ್ದ ಒಂದು ಪತ್ರವನ್ನು ಸಾಮ್ರಾಟನ ಮುಂದಿಟ್ಟು ಅವನ ಉತ್ತರದ ದಾರಿಯನ್ನು ನೋಡುತ್ತ ಮೌನವಾಗಿ ಕುಳಿತುಕೊಂಡನು. ಸಮ್ರಾಟನು ಪತ್ರವನ್ನು ತಕ್ಕೊಂಡು ಅದನ್ನು ತಿರುತಿರುವಿ ನೋಡಿ, ಮೂಕಭಾವದಿಂದ ಲಕ್ಕೋಟೆಯನ್ನು ಹರಿದು, ಒಳಗಿನ ಸಂಗತಿಯನ್ನು ಅವಲೋಕಿಸಹತ್ತಿದನು. ಅವನು ಪತ್ರವನ್ನು ಒಮ್ಮೆ ಪೂರ್ಣವಾಗಿ ಓದಿಕೊಂಡು, ಆ ವಕೀಲನ ಮೋರೆಯನ್ನು ನೋಡಿದನು. ಬಳಿಕ ಮತ್ತೊಮ್ಮೆ ಪತ್ರವನ್ನೋದಿಕೊಂಡು ಅದನ್ನು ಕೆಳಗಿಟ್ಟು ಸಮಾಧಾನ ಮನಸ್ಸಿನಿಂದ ನುಡಿದನೇನಂದರೆ:-ರಾಯಭಾರಿಗಳೇ, ನಿಮ್ಮ ಅರಸರು ಮತ್ತೇನನ್ನು ನಿರೂಪಿಸಿರುವರು?

ರಾಯಭಾರಿ—ಮಹಾರಾಜರೇ, ಪತ್ರವಾಚನದಿಂದ ನಾನು ಬಂದ ಕಾರಣವು ತಮಗೆ ವಿದಿತವಾಯಿತಷ್ಟೇ; ನಮ್ಮ ಮಹಾರಾಜರು ತಮ್ಮ ಸಹಾಯವನ್ನು ಇಚ್ಛಿಸುವರು. ಈ ಗುರ್ಜರಭೂಮಿಯ ಈಗಿನ ಪರಿಸ್ಥಿತಿಯು ಬಲು ವಿಲಕ್ಷಣ

ವಾಗಿರುತ್ತದೆ. ರಾಜಪುರುಷರಲ್ಲಿ ವಿಷಯುಮದವು ಹೆಚ್ಚಿ ಹೋಗಿರುತ್ತದೆ. ನಮ್ಮ ಮಹಾರಾಜರ ಸುಕುಮಾರಿಯೋರ್ವಳನ್ನು ಕೀರ್ತಿಸಿಂಹನೆಂಬೊಬ್ಬ ನರಾಧಮನು ಆಕೆಯ ಪಾಣಿಗ್ರಹಣ ಮಾಡುವ ದುರ್ಬುದ್ಧಿಯಿಂದ ತನ್ನ ದುರ್ಗದಲ್ಲಿ, ಅಂದರೆ ಕಿರುಮಂಜೆಯಲ್ಲಿ ಸೆರೆಯಿರಿಸಿರುವನು. ಅವನ ಈ ಅತ್ಯಾಚಾರಕ್ಕಾಗಿ ಅವನನ್ನು ಶಾಸನ ಮಾಡುವದು ನಮ್ಮ ಮಹಾರಾಜರ ಕರ್ತವ್ಯವಾಗಿರುವದು. ಕೀರ್ತಿ ಸಿಂಹನು ನಮ್ಮ ಮಹಾರಾಜರಿಗಿಂತ ಬಲಿಷ್ಠನಿರುವನು. ಇದ್ದರಿಂದ ತಮ್ಮಂಥ ಉದಾರ ಕ್ಷಾತ್ರ ಸಮ್ರಾಟರ ನೆರವನ್ನು ಪಡೆಯುವದು ಇಷ್ಟವಾಗಿರುವದು; ಮತ್ತರಾದ ಗುರ್ಜರ ಭೂಪತಿಗಳ ಸೊಕ್ಕನ್ನು ಅಡಗಿಸುವದಕ್ಕೆ ಬದ್ಧಕಂಕಣರಾದ ತಾವು, ಈ ನಮ್ಮ ಮಹಾರಾಜರ ವಿನಂತಿಯನ್ನು ಮಾನ್ಯ ಮಾಡದಿರಲಾರಿರೆಂದು ನಂಬುತ್ತೇನೆ.

ಸಮ್ರಾಟ— ವಕೀಲರೇ, ಕಿರುಮಂಜೆಯು ಇಲ್ಲಿಂದ ಯಾವ ದಿಕ್ಕಿಗಿರುವದು? ನಿಮ್ಮ ರಾಜಕುವರಿಯನ್ನು ಕೀರ್ತಿಸಿಂಹನು ಇದುವರೆಗೆ ಸೆರೆಯೊಳಗೆ ಯಾಕೆ ಇರಿಸಿರುವನು? ಲಗ್ನ ಮಾಡಿಕೊಳ್ಳುವ ಹವ್ಯಾಸವುಳ್ಳ ಅವನು ಹೀಗೆ ವಿಪರೀತವಾಗಿ ವರ್ತಿಸುವದು ಶಕ್ಯವೇ?

ರಾಯಭಾರಿ— ಮಹಾರಾಜರೇ, ಕೀರ್ತಿ ಸಿಂಹನು ಹೀಗೆ ಮಾಡಿದ್ದರ ಕಾರಣವು ಬೇರೆಯಿರುವದು. ನೀವು ನಮಗೆ ಸಹಾಯ ಮಾಡಲಿಕ್ಕೆ ಒಪ್ಪಿಕೊಂಡರೆ ನಿಮಗೆ ಎಲ್ಲ ಸಂಗತಿಗಳನ್ನೂ ಹೇಳುವೆನು.

ಸಮ್ರಾಟ— ನಿಜ ಸಂಗತಿಯು ತಿಳಿದ ಹೊರತು ನಿಮಗೆ ವಚನವನ್ನು ಕೊಡುವದು ಹೇಗೆ?

ರಾಯಭಾರಿ — ನಾನು ನಿಮ್ಮ ಮುಂದೆ ಈಗ ಹೇಳಿದ ಸಂಗತಿಯು ಸಾಕಾಗದೇನು? ಮುಖ್ಯ ಸಂಗತಿಯೆಂದರೆ ಇಷ್ಟೇ ಇರುವದು. ಇನ್ನು ನಾನು ಹೇಳತಕ್ಕ ಸಂಗತಿಯೆಂದರೆ ರಹಸ್ಯವು; ಈ ರಹಸ್ಯವನ್ನು ಹೇಳಬೇಕಾದರೆ ನೀವು ನಮ್ಮವರೆಂದು ನನಗೆ ತಿಳಿಯಬೇಕಾಗುತ್ತದೆ. ಇಷ್ಟಕ್ಕಾಗಿಯೇ ತಮ್ಮ ಒಪ್ಪಿಗೆಯ ದಾರಿಯನ್ನು ಕಾಯುತ್ತಿರುವೆನು.

ಸಮ್ರಾಟ— ಆಪ್ತರ ಹೊರತು ರಹಸ್ಯಗಳನ್ನು ಹೇಳಬಾರದೆಂಬದಕ್ಕೆ ನಾನು ಒಪ್ಪಿಕೊಳ್ಳುತ್ತೇನೆ; ಆದರೆ ನೀವು ನನ್ನ ಬಳಿಗೆ ಬರಬೇಕಾದರೆ ಆಪದ್ಬಂಧುವೆಂದು ಬಂದಿರೋ ಅಥವಾ ಶತ್ರುವೆಂದು ಬಂದಿರೋ?

ಸಮ್ರಾಟನ ಈ ಪ್ರಶ್ನೆಯಿಂದ ವಕೀಲನು ಗೊಂದಲದಲ್ಲಿ ಬಿದ್ದನು. ಅವನು ನಿರುಪಾಯನಾಗಿ ತಾನು ಹೇಳಬೇಕೆಂದಿದ್ದ ರಹಸ್ಯಗಳೆಲ್ಲವನ್ನೂ ವಿವರವಾಗಿ ಹೇಳಿದನು. ಅದನ್ನು ಕೇಳಿ ಮಂದಸ್ಮಿತನಾದ ಸಮ್ರಾಟನು—

"ವಕೀಲರೇ, ಇಂಥ ಪುಣ್ಯಕೆಲಸಕ್ಕೆ ಸಹಾಯವನ್ನು ಮಾಡಲು ಒಪ್ಪಿಕೊಳ್ಳದಿರುವದು ಅನುಚಿತವು. ಅಂಥ ಅನುಚಿತ ಕಾರ್ಯವು ಈ ಸಮ್ರಾಟ ನಿಂದ ಎಂದೂ ಆಗದು. ಈ ವಿಷಯದಲ್ಲಿ ನಿಮ್ಮ ಮಹಾರಾಜರಿಗೆ ಚಿಂತೆ ಮಾಡ ದಿರಲು ತಿಳಿಸಿರಿ. ನಾನು ಹ್ಯಾಗೂ ದಂಡಯಾತ್ರೆಗೇ ಹೊರಟವನಿರುರುತ್ತೇನೆ. ನಿಮ್ಮ ಆಮಂತ್ರಣವು ಒರುವದಕ್ಕಿಂತ ಮುಂಚಿತವಾಗಿಯೇ ನಾನು ಕಿರುಮಂಜಿಗೆ ಸಾಗಿ ಹೋಗಿ, ಸೆರೆಯಿಟ್ಟ ಸಾಧ್ವೀಮಣಿಯನ್ನು ಬಿಡಿಸಬೇಕೆಂದು ಮಾಡಿದ್ದೆನು; ಆದರೆ ನಮ್ಮ ಗುಪ್ತಹೇರರು ಬೇಗನೆ ಬಾರದ್ದರಿಂದ ಇಷ್ಟು ದಿವಸ ತಡೆದು ನಿಲ್ಲ ಬೇಕಾಯಿತು. ಈಗ ನೀವು ಅನಾಯಾಸವಾಗಿ ಎಲ್ಲ ರಹಸ್ಯಗಳನ್ನು ಹೇಳಿ, ನನಗೆ ದೊಡ್ಡದೊಂದು ಉಪಕಾರ ಮಾಡಿದ ಹಾಗಾಯಿತು. ಇದಕ್ಕಾಗಿ ನಾನು ನಿಮ್ಮ ಮಹಾರಾಜರಿಗೆ ತುಂಬಾ ಕೃತಜ್ಞನಿರುತ್ತೇನೆ.

ರಾಯಭಾರಿ (ಸಂತೋಷದಿಂದ):— ಸಮ್ರಾಟರೇ, ತಮ್ಮ ಮಾತಿನಿಂದ ನನಗೆ ಪರಮಾನಂದವಾಯಿತು. ತಾವು ಯಾವಾಗ ಗುರ್ಜರಭೂಮಿಯಲ್ಲಿ ಕಾಲಿ ಟ್ಟಿರೋ, ಆಗ ನಾವೆಲ್ಲರೂ ನಿಮ್ಮನ್ನು ಶತ್ರುಗಳೆಂದು ಭಾವಿಸಿದ್ದೆವು. ನಿರಂಜನ ಯೋಗಿವರ್ಯರು ನಮ್ಮ ಆ ಶತ್ರುಭಾವನೆಯನ್ನು ಹೋಗಲಾಡಿಸಿದರು. ಈಗ ನಿಮ್ಮ ಪ್ರತ್ಯಕ್ಷ ಭೆಟ್ಟಿಯಿಂದ ನಿರಂಜನ ಯೋಗಿಗಳ ಮಾತು ಸತ್ಯವೆಂದೂ ನೀವು ನಿಜವಾಗಿಯೂ ನಮ್ಮ ರಾಷ್ಟ್ರಕ್ಕೆ ಹಿತಕಾರಿಗಳಿರುವಿರೆಂದೂ ನನ ಅನುಭವಕ್ಕೆ ಬಂದುಹೋಯಿತು.

ಸಮ್ರಾಟ— ನಿರಂಜನ ಯೋಗಿಗಳೆಂದರೆ ಯಾರು? ಅವರು ನಿಮ್ಮ ಆ ಶತ್ರು ಭಾವನೆಯನ್ನು ಹೋಗಲಾಡಿಸಲು ಕಾರಣವೇನು?

ರಾಯಭಾರಿ: ನಿರಂಜನಯೋಗಿಗಳೆಂದರೆ, ಅವರೊಬ್ಬರು ಮಹಂತಪುರು ಷರು. ಅವರು ನಮ್ಮ ಮಹಾರಾಜರಿಗೆ ಗುರುಗಳಾಗಬೇಕು. (ಎಂದು ಹೇಳಿ ರೂಪಸುಂದರಿಯನ್ನು ಅವರ ಬಳಿಯಲ್ಲಿರಿಸಬೇಕಾದ ಸಂಗತಿ ಮೊದಲು ಮಾಡಿ ಕೊಂಡು ಕಿರುಮಂಜಿಯಲ್ಲಿ ಅವಳು ಸೆರೆಯೊಳಗೆ ಬೀಳುವ ವರೆಗಿನ ಎಲ್ಲ ಸಂಗತಿ ಗಳನ್ನು ನಿವೇದಿಸಿದನು.)

ಸಮ್ರಾಟ— ಸರಿ! ಸರಿ! ನಿಮ್ಮ ಮಹಾರಾಜರು ಪುಣ್ಯಪುರುಷರಿರುವರು. ನಿಮ್ಮ ರಾಜಪುತ್ರಿಯೂ ಸತ್ವಸ್ಥಳಿರುವಳು. ಅಂತೇ ಅವಳಿಗೆ ಬಂದ ವಿಪತ್ತುಗಳು ದೂರಾಗುತ್ತಲಿವೆ. ಇಂಥವರಿಗೆ ಸಹಾಯ ಮಾಡುವದು ಪವಿತ್ರ ಕೆಲಸವೇ ಸರಿ! ಆ ಪುಣ್ಯತಮಳ ಪುಣ್ಯಪ್ರಭಾವವೇ ನಮಗೆ ಯಶಸ್ಸನ್ನು ಕೊಡುವದು. ಇದರಲ್ಲಿ ಸಂಶಯವಿಲ್ಲ.

ಈ ರೀತಿಯಾಗಿ ಅವರಿಬ್ಬರಲ್ಲಿ ಸಂಭಾಷಣವು ನಡೆದ ಬಳಿಕ ರಾಯಭಾ

ರಿಯು ಅಂದು ಸಮ್ರಾಟನಿಂದ ಆತಿಥ್ಯವನ್ನು ಹೊಂದಿ, ಅತನ ಅಪ್ಪಣೆ ಪಡೆದು, ಅಪ್ಪಾಸರಕ್ಕೆ ಹೊರಟು ಹೋದನು. ರಾಯಭಾರಿಯನ್ನು ಕಳಿಸಿ ಸಮ್ರಾಟನು ಮತ್ತೆ ವಿಚಾರದಲ್ಲಿ ಮಗ್ನನಾದನು. ತಾನು ಗುರ್ಜರ ಭೂಪ್ರದೇಶದಲ್ಲಿ ಕಾಲಿಟ್ಟಾಗಿನಿಂದ ತನಗೆ ಆಗುತ್ತಿರುವ ಶುಭಶಕುನಗಳನ್ನು ನೋಡಿ ಅವನಿಗೆ ತುಂಬಾ ಸಂತೋಷವಾಗಹತ್ತಿತು. ಗುರ್ಜರ ದೇಶವು ಈ ರೀತಿ ಅತಿಶಯ ಸುಲಭವಾಗಿ ಕೈಸೇರುವದೆಂಬ ಕಲ್ಪನೆಯು ಇದುವರೆಗೂ ಅವನ ಕನಸು-ಮನಸುಗಳಲ್ಲಿ ಸಹ ಬಂದಿರಲಿಲ್ಲ. ಯಾವ ದೇಶದಲ್ಲಿಯ ಭೂಪತಿಗಳು ಅಪಸ್ವಾರ್ಥಿಗಳಾಗಿ, ನೀಚವಾದ ವೈಷೇಯಿಕ ಮೋಹದಲ್ಲಿ ಸಿಕ್ಕು ಪರಸ್ಪರರಲ್ಲಿ ಅನುರಾಗವನ್ನು ಕಳೆದುಕೊಳ್ಳುವರೋ, ಆ ದೇಶವು ಪರರಾಜರಿಂದ ಬಹು ಸುಲಭವಾಗಿ ಆಕ್ರಮಿಸಲ್ಪಡುವದು. ಸತ್ವವಿಲ್ಲದ ಚೆಂಡು ಕಣ್ಣಿಗೆ ದೊಡ್ಡದಾಗಿ ಕಂಡು ಬಂದರೂ ಅದನ್ನು ಮುಟ್ಟಿದ ಕೂಡಲೆ ಅದರ ಯೋಗ್ಯತೆಯು ತಿಳಿದು ಹೋಗುವಂತೆ, ಸತ್ವಹೀನರಾದವರು ಬಲಿಷ್ಠರಾಗಿ ತೋರಿದರೂ ಪರಿಣಾಮದಲ್ಲಿ ಅವರು ಹಗುರಾಗಿಯೇ ತೋರುವರು. ಅದರಂತೆ ಪ್ರಸ್ತುತದಲ್ಲಿ ಗುರ್ಜರ ಭೂಪತಿಗಳ ಸ್ಥಿತಿಯಿದ್ದದರಿಂದ, ಈ ದೇಶವನ್ನು ಪಾದಾಕ್ರಾಂತ ಮಾಡಿಕೊಳ್ಳುವದು ತಡವಿಲ್ಲೆಂದು ಆ ಸತ್ವಶಾಲಿ ಸಮ್ರಾಟನಿಗೆ ಅನಿಸಿದ್ದರಲ್ಲಿ ಆಶ್ಚರ್ಯವಿಲ್ಲ. ಅವನು ಆ ಕೂಡಲೆ ತನ್ನ ಮಂತ್ರಿಗಳನ್ನು ಕರೆಯಿಸಿಕೊಂಡು, ಅವರೊಡನೆ ಈ ಎಲ್ಲ ಸಂಗತಿಗಳನ್ನು ಸಹಸ್ಯವಾಗಿ ವಿಚಾರಿಸಿದನು. ಶೀಘ್ರವಾಗಿ ಕಿರುಮಂಜೆಯನ್ನು ಮುತ್ತುವದು ಯುಕ್ತವೆಂದು ಸಮಸ್ತರ ಅಭಿಪ್ರಾಯದಿಂದ ಸಿದ್ಧವಾಗಲು, ಸಮ್ರಾಟನು ತಡವಿಲ್ಲದೆ ಸೇನಾಪತಿಗೆ ಅಪ್ಪಣೆಯನ್ನು ಕೊಟ್ಟನು. ಚಾಲುಕ್ಯಸೇನಾಸಮುದ್ರವು, ಭರತಿಯ ಕಾಲವು ಪ್ರಾಪ್ತವಾದ ಸಮುದ್ರದಂತೆ ಭೋರ್ಗರೆಯಲಾರಂಭಿಸಿತು.

ಸಮ್ರಾಟನು ದಂಡಯಾತ್ರೆಯಲ್ಲಿ ನಡಕಟ್ಟಬೇಕಾದ್ದರಿಂದ, ಅನಾಥವಾಗುವ ಪಾವಗಡ ದುರ್ಗದಲ್ಲಿ ಯಾರನ್ನು ಇರಿಸಬೇಕೆಂಬ ಯೋಚನೆಯು ಅವನಿಗುಂಟಾದದ್ದು ಸ್ವಾಭಾವಿಕವು. ಯಾಕಂದರೆ ಇಂಥ ದುರ್ಜಯ ಕೋಟೆಗಳು ಸಿಕ್ಕುವದೇ ದುರ್ಲಭವು; ಆದ್ದರಿಂದ ಆತನು ಬಹು ದೂರದ ವರೆಗೆ ಯೋಚಿಸಿ ತನ್ನ ಸರದಾರರಲ್ಲಿ ಮುಖಂಡನಾದ ದಂಡನಾಯಕನೆಂಬವನನ್ನು ಪಾವಗಡದ ಕಿಲ್ಲೇದಾರನನ್ನಾಗಿ ಮಾಡಿದನು. ಕಿಲ್ಲೇದಾರಿಯ ವಸ್ತ್ರವು ಅವನಿಗೆ ಬಹು ಗೌರವಪೂರ್ವಕವಾಗಿ ಸಮ್ರಾಟನಿಂದ ಕೊಡಲ್ಪಟ್ಟಿತು; ಮತ್ತು ಅವನ ವಶದಲ್ಲಿ ದುರ್ಗದ ರಕ್ಷಣೆಗೋಸ್ಕರ ಎರಡು ಸಾವಿರ ಪದಾತಿಯು ಇರಿಸಲ್ಪಟ್ಟಿತು.

ಮರುದಿನ ಸೂರ್ಯೋದಯ ಸಮಯದಲ್ಲಿ ಚಾಲುಕ್ಯ ಸಮ್ರಾಟನ ವಿಜಯ ಪತಾಕೆಯು ಪಾವಗಡದಿಂದ ಒಂದು ಮೈಲಿನ ಅಂತರದ ಮೇಲಿರುವ 'ನಂದ'

ಎಂಬ ಹೆಸರಿನ ಒಂದು ದಿನ್ನೆಯ ಮೇಲೆ ವಿರಾಜಿಸಲಾರಂಭಿಸಿತು! ಆ ದಿನ್ನೆಯ ಸುತ್ತುವರೆದು ಅಪಾರಸೇನೆಯು ಕಂಗೊಳಿಸುತ್ತಿತ್ತು. ಇಂಥ ಪ್ರಚಂಡ ಸೇನೆಯಿಂದ ಪರಿವೃತ್ತವಾದ ಆ ಚಾಲುಕ್ಯಸಾಮ್ರಾಜ್ಯಪಕೆತಾಗೆ ಎಂದೂ ಅಪಜಯವು ಇಲ್ಲೆಂಬ ಕಲ್ಪನೆಯು ನೋಡುವವರಲ್ಲಿ ತಟ್ಟನೆ ಉಂಟಾಗುತ್ತಿತ್ತು. ಪಾವಗಡದ ನಿವಾಸಿಗಳು ಈ ಚಂದವನ್ನು ನೋಡಿ ಸಮ್ರಾಟನ ಜಯ-ಜಯಕಾರವನ್ನು ಮಾಡಿದರು. ಧರ್ಮದ ಮೂರ್ತಿಮಂತ ಸ್ವರೂಪನಾದ ರಾಜನು ಸರ್ವದಾ ವಿಜಯವನ್ನು ಹೊಂದಲೆಂದು ಅನ್ನಹತ್ತಿದರು.

ಪ್ರಿಯವಾಚಕರೇ, ಪ್ರೇಮವೆಂಬದಕ್ಕೆ ಸ್ವಕೀಯ-ಪರಕೀಯ ಎಂಬ ಭಾವನೆಗಳೇ ಇರುವದಿಲ್ಲ. ಪಪಿತ್ರಾಚರಣೆ ಹಿತಬುದ್ಧಿ-ವಾತ್ಸಲ್ಯಗಳು ಅಲ್ಲಿರುತ್ತದೆ. ಈ ಲಕ್ಷಣಗಳಿದ್ದವನು ಯಾವನಿದ್ದರೂ ಅವನ ಮೇಲೆ ಜನರ ಪ್ರೇಮವು ಸಹಜವಾಗಿ ಕೂಡ್ರುವದು. ಭೂವಡ ಸಮ್ರಾಟನು ಇಂಥ ಅಕೃತ್ರಿಮ ಮನುಷ್ಯನಾಗಿದ್ದನು. ಅವನ ಪ್ರಜಾವಾತ್ಸಲ್ಯವು ಅಪ್ರತಿಮವಾಗಿತ್ತು. ಅಧಿಕಾರಿಗಳಲ್ಲಿ ಅವನ ದರ್ಪವು ವಿಶೇಷವಾಗಿದ್ದದರಿಂದ, ರಾಜ್ಯದಲ್ಲಿ ಯಾವ ಬಗೆಯಿಂದಲೂ ಅನ್ಯಾಯಗಳು ಸಂಭವಿಸುತ್ತಿರಲಿಲ್ಲ. ಇದಲ್ಲದೆ ಅವನು ನಿರಾಲಸನೂ ಸ್ವಕರ್ತವ್ಯದಲ್ಲಿ ದಕ್ಷನೂ ಇದ್ದ ಪ್ರಯುಕ್ತ ಅವನ ಅಧಿಕಾರಿಗಳು ಅವನ ಈ ಶಿಸ್ತನ್ನು ಅನುಸರಿಸಲೇ ಬೇಕಾಗುತ್ತಿತ್ತು. ಅದರಿಂದ ಪ್ರಜೆಗಳಿಗೆ ಬಹು ಬೇಗ ನ್ಯಾಯವು ಸಿಗುತ್ತಿತ್ತು. ಅವನ ಈ ಪ್ರಜಾವಾತ್ಸಲ್ಯತೆಯ ಅನುಭವವು ಪಾವಗಡದ ನಿವಾಸಿಗಳಿಗೆ ಸ್ವಲ್ಪ ದಿವಸಗಳಲ್ಲಿಯೇ ಒಂದು ಹೋಯಿತು. ಆದ್ದರಿಂದ ಅವರು ಸಮ್ರಾಟನ ವಿಷಯವಾಗಿ ಪ್ರೇಮಾದರಗಳನ್ನು ವ್ಯಕ್ತಪಡಿಸಹತ್ತಿದ್ದು ಸ್ವಾಭಾವಿಕವು.

ಮೇಲ ಹೇಳಿದ ದಿನ್ನೆಯ ಮೇಲೆ ವಿಜಯಧ್ವಜವು ನರ್ತಿಸುತ್ತಿರಲು, ಆ ಧ್ವಜದ ಸುತ್ತುವರೆದು ಸೇನಾಸಾಗರವು ಘೋರ್ಗರೆಯುತ್ತಿರಲು, ಬೆಟ್ಟದಂಥ ಕುದುರೆಯನ್ನೇರಿದ ಭೂವಡ ಸಮ್ರಾಟನು ಚತುರಂಗದ ವ್ಯವಸ್ಥೆಯನ್ನು ನೋಡುವದಕ್ಕೆ ಹೊರಟಿದ್ದನು. ಚತುರನಾದ ಸೇನಾಪತಿಯು ಮುಂದೊರೆದು ಪ್ರತಿಯೊಂದು ಪಥಕದ ವರ್ಣನೆಯನ್ನು ಮಾಡತೊಡಗಿದ್ದನು. ತನ್ನ ಸೈನಿಕರ ಒಗರನ್ನು ನೋಡಿ ಆನಂದಪಡುತ್ತಿದ್ದ ಸಮ್ರಾಟನು ಪುಷ್ಟವಾದ ಮತ್ತಗಜಗಳ ಶ್ರೇಣಿಗೆ ಬಂದನು. ಅಸಂಖ್ಯ ಆನೆಗಳ ಕಿರುಗಂಟೆಗಳ ಸಪ್ಪಳದಿಂದ ಆ ಪ್ರದೇಶವು ನಿನಾದಮಯವಾಗಿತ್ತು. ಗಜಪತಿಗಳು, ಹಯಪತಿಗಳು ಆತನಿಗೆ ವಿನಯದಿಂದ ಪ್ರಣಾಮಗಳನ್ನು ಸಮರ್ಪಿಸಿ ತಮ್ಮ ಯುದ್ಧೋತ್ಸುಕತೆಯನ್ನು ವ್ಯಕ್ತಗೊಳಿಸಿದರು. ಹೀಗೆ ಸಮ್ರಾಟನು ಉತ್ಸುಕತೆಯಿಂದ ಸೈನಿಕರನ್ನು ನೋಡುತ್ತ ಸೇನಾಪತಿಯೊಡನೆ ಸಾಗಿರಲು, ಪೂರ್ವಭಾಗದ ಚಮೂಪತಿಯೋರ್ವನು ವಿಲಕ್ಷಣ ವೇಷದ ಒಬ್ಬ

ಮನುಷ್ಯನೊಡನೆ ಬಂದನು. ಆ ವಿಲಕ್ಷಣ ವೇಷದ ಮನುಷ್ಯನ ಸ್ಥಿತಿಯು ವರ್ಣಿಸುವ ಹಾಗಿತ್ತು. ಅವನ ಮೈಮೇಲಿರುವ ಬಟ್ಟೆಗಳಲ್ಲಿ ಒಂದಾದರೂ ಒಂದು ದುಡ್ಡು ಕಟ್ಟುವಷ್ಟು ಸಹ ಗಟ್ಟಿಯಾಗಿರಲಿಲ್ಲ. ಅವು ದುರ್ಗಂಧಮಯ; ತಲೆಗೂದಲುಗಳು ಬೆಳೆದು ಮುಖವು ಹುಚ್ಚುತನವನ್ನು ವ್ಯಕ್ತಗೊಳಿಸುತ್ತಿತ್ತು. ಬಾಯಲ್ಲಿ ಸರ್ವದಾ ಜೊಲ್ಲು ಸುರಿಯುತ್ತಿತ್ತು. ಬಗಲಲ್ಲಿದ್ದ ಎರಡು ಹರಕ ಜೋಳಿಗೆಗಳಲ್ಲಿ ಏನೇನೋ ತುಂಬಿದ್ದನು. ಅವನು ಎದುರಿಗೆ ಭೆಟ್ಟಿಯಾದವರನ್ನು ಕುರಿತು: 'ಏನಾದರೂ ತಿನ್ನಲಿಕ್ಕೆ ಕೊಡಿರಿ'ಎಂಬ ಭಾವವನ್ನು ತೋರಿಸುತ್ತ, ಕೈಯನ್ನು ಮುಂದೆ ಚಾಚುತ್ತಿದ್ದನು. ಅವನು ಚನ್ನಾಗಿ ಮಾತನಾಡದಿದ್ದರೂ ಪರರ ಮನಸ್ಸನ್ನಾಕರ್ಷಿಸುವ ಒಂದು ಪದವನ್ನು ಗುರ್ಜರಭಾಷೆಯಲ್ಲಿ ಬಹು ಸರಸವಾಗಿ ಆಲಾಪ ಮಾಡುತ್ತಿದ್ದನು. ಅವನು ಸಮ್ರಾಟನ ಬಳಿಗೆ ಬಂದ ಕೂಡಲೆ ಆ ಪದವನ್ನು ಅನ್ನತೊಡಗಿದನು. ಪದವು ಬಹು ಚಿತ್ತಾಕರ್ಷಕವಿದ್ದುದರಿಂದ, ಸಮ್ರಾಟನು ತಟಸ್ಥನಾಗಿ ಕೇಳತೊಡಗಿದನು. ಮುಂದೆ ಸ್ವಲ್ಪ ಹೊತ್ತಿನಲ್ಲಿ ಪದವು ಮುಗಿಯಲು, ಆತನು ಕೈ ಮುಂದೆ ಮಾಡಿ ಹೊಟ್ಟೆಗೇನಾದರೂ ಕೊಡಿರೆಂದು ಯಾಚಿಸಹತ್ತಿದನು. ಆಗ ಸಮ್ರಾಟನು ಅವನನ್ನು ಕರೆತಂದ ಚಮೂಪತಿಯನ್ನು ಕುರಿತು:—

"ತಿರುಮಲರಾವ, ಇವನನ್ನೇಕೆ ಇಲ್ಲಿಗೆ ಕರೆತಂದಿರಿ?"

ತಿರುಮಲರಾವ:— ಮಹಾರಾಜ, ಈತನು ಹುಚ್ಚನಂತೆ ತೋರಿದರೂ ಇವನು ನಿಜವಾದ ಹುಚ್ಚನಲ್ಲವೆಂದು ತೋರಿದ್ದರಿಂದ, ಇವನನ್ನು ಸನ್ನಿಧಿಗೆ ಹಿಡ ತಂದಿದ್ದೇನೆ. ಇವನಾರೆಂಬದನ್ನು ವಿಚಾರಿಸಬೇಕು.

ಸಮ್ರಾಟ(ಬುದ್ಧಿಪೂರ್ವಕವಾಗಿ):—ಹ, ಏನಂದಿರಿ? ಇವನು ಹುಚ್ಚನಲ್ಲವೆ? ಹಾಗಾದರೆ ಇವನು ಯಾರೆಂದು ತಿಳಿದಿರುವಿರಿ?

ತಿರುಮಲರಾವ:— ಇವನು ಶತ್ರುಪಕ್ಷದ ಗುಪ್ತಹೇರನಿರಬಹುದೆಂಬ ಸಂಶಯವು ನನಗೆ ಬರುತ್ತದೆ. ಯಾಕಂದರೆ ತಿರಿದುಣ್ಣುವ ಹುಚ್ಚನಾಗಿದ್ದರೆ, ಪಾಳೆಯದಲ್ಲಿ ಯಾಕೆ ಬರುತ್ತಿದ್ದನು? ಎಲ್ಲಿಯಾದರೂ ಹಳ್ಳಿಪಳ್ಳಿಗಳನ್ನಾಶ್ರಯಿಸಿ ಸಾಂಸಾರಿಕರಿಂದ, ಕೊಡಲ್ಪಡುವ ತುಣುಕು ರೊಟ್ಟಿಯಿಂದ ಹೊಟ್ಟೇ ಹೊರೆಯುತ್ತಿದ್ದನು.

ಸಮ್ರಾಟ:—ಒಳ್ಳೇದು, ಇವನ ವಿಷಯವಾಗಿ ಮತ್ತೇನು ಶೋಧ ಮಾಡಿರುವಿರಿ?

ತಿರುಮಲರಾವ:— ಈಗ ನಮ್ಮ ಪಥಕವು ಪ್ರಯಾಣಸನ್ನದ್ಧವಾಗಿ ಸೇನಾಪತಿಗಳ ಅಪ್ಪಣೆಯ ದಾರಿಯನ್ನು ನಿರೀಕ್ಷಿಸುತ್ತಿರುವದರಿಂದ, ಹೆಚ್ಚು ಚಿಕಿತ್ಸೆಗೆ

ನನಗೆ ಸಮಯವು ಸಿಕ್ಕಲಿಲ್ಲ. ಈತನು ನಮ್ಮ ಪಥಕದಲ್ಲಿ ಈಗ ಹಾಡಿದಂತೆ ಹಾಡುತ್ತ ಶಿಪಾಯಿಗಳನ್ನು ಯಾಚಿಸುತ್ತ ಬರಲು, ನಮ್ಮ ಶಿಪಾಯಿಗಳು ಇವನನ್ನು ನನ್ನ ಬಳಿಗೆ ಕರೆತಂದರು. ನಾನು ಇವನ ಈ ಸ್ಥಿತಿಗತಿಯ ಮೇಲಿಂದ ಇವನು ವೇಷಧಾರಿಯೆಂದು ನಿಶ್ಚಯಿಸಿ ಸನ್ನಿಧಿಗೆ ಕರೆತಂದಿರುವೆನು. ಮಹಾರಾಜರು ತಾವೇ ಇವನ ಚಿಕಿತ್ಸೆಯನ್ನು ಮಾಡಿ, ನಿಜವಾಗಿಯೂ ಈತನು ಗುಪ್ತ ಹೇರನೆಂಬದು ಕಂಡು ಬಂದರೆ ಮುಂದೆ ಮಾಡತಕ್ಕದ್ದನ್ನು ಮಾಡಬೇಕು.

ಸಮ್ರಾಟ:—ತಿರುಮಲರಾವ, ನಿಮ್ಮ ತರ್ಕದಂತೆ ಇವನು ಗುಪ್ತ ಹೇರನಿರಬಹುದು. ಈ ಬಗ್ಗೆ ನಿಮಗೆ ಏನಾದರೂ ಬಹುಮಾನ ಕೊಡುವದು ಯುಕ್ತವಾಗಿದೆ. ಮುಂದಿನ ಮುಕ್ಕಾಮಿನಲ್ಲಿ ನಿಮಗೆ ಆ ಮಾನವು ಸಿಗುವದು. ಈತನನ್ನು ನಾವು ವಿಚಾರಿಸಿಕೊಳ್ಳುತ್ತೇವೆ.

ಈ ಮೇರೆಗೆ ಸಮ್ರಾಟನು ಮಾತನಾಡಲು, ತಿರುಮಲರಾಯನು ಸಂತೋಷವನ್ನು ಪ್ರದರ್ಶಿಸಿ, ಮಹಾರಾಜರ ಅಪ್ಪಣೆ ಪಡೆದು ಚಮೂ ರಕ್ಷಣೆಗೆ ಹೋದನು. ತಿರುಮಲರಾಯನು ಹೋದ ಬಳಿಕ ಸಮ್ರಾಟನು ಆ ಹುಚ್ಚನನ್ನು ಕುರಿತು:—"ತಮ್ಮಾ, ನೀನು ಯಾರು? ಇಲ್ಲಿಗೆ ಯಾಕೆ ಬಂದೆ? ಭಿಕ್ಷೆ ಬೇಡುವ ಸ್ಥಳವೇ ಇದು? ನೀನು ನಿಜವಾದ ಮಾತನ್ನು ಹೇಳು. ಇಲ್ಲದಿದ್ದರೆ ಭಯಂಕರ ದಂಡನೆಗೆ ಗುರಿಯಾಗುವಿ." ಎಂದು ಕೇಳಿದನು. ಹುಚ್ಚನು ಸಮ್ರಾಟನ ಈ ಮಾತುಗಳನ್ನು ಕಿವಿಯಲ್ಲಿಯೇ ಹಾಕಿಕೊಳ್ಳದೆ ತನ್ನ ವ್ಯವಹಾರ ಶೂನ್ಯತೆಯನ್ನು ನಟಿಸಿದನು. ಅವನು ದಶ ದಿಕ್ಕುಗಳನ್ನೂ ನೋಡಲಾರಂಭಿಸಿದನು. ನಡುನಡುವೆ ಪಿಸಿ ಪಿಸಿ ನಗತೊಡಗಿದನು. ಕ್ಷಣದಲ್ಲಿ ದೈನ್ಯದಿಂದ ಕೈ ಮುಂದೆ ಮಾಡುವನು. ಸಮ್ರಾಟನು ಎಷ್ಟು ಮಾತಾಡಿಸಿದರೂ ಅವನ ಮಾತುಗಳಿಗೆ ಉತ್ತರವೇ ಇಲ್ಲ ಒರಿಯು ಪಪ, ಚಚ, ಎಂಬ ಶಬ್ದಗಳ ಹೊರತು ಹುಚ್ಚನ ಬಾಯಿಂದ ಬೇರೆ ಶಬ್ದಗಳೇ ಹೊರಡುತ್ತಿದ್ದಿಲ್ಲ. ಅವನ ಈ ಎಲ್ಲ ಚೇಷ್ಟೆಗಳನ್ನು ಸಮ್ರಾಟನು ಬಹು ಸೂಕ್ಷ್ಮವಾಗಿ ಪರೀಕ್ಷಿಸುತ್ತಿದ್ದನು. ಹುಚ್ಚನಾದರೂ ಬಹು ಧೂರ್ತನಿದ್ದನು. ಅವನು ತನ್ನ ನಿಜಸ್ಥಿತಿಯ ಸುಳುವು ಇವರಾರಿಗೂ ತಿಳಿಯಬಾರದೆಂದು ಬಹು ಜಪ್ತಿಸುತ್ತಿದ್ದನು. ಆದರೂ ತೀಕ್ಷ್ಣದೃಷ್ಟಿಯ ಸಮ್ರಾಟನಿಗೆ ಅವನ ಮರ್ಮವು ಗೊತ್ತಾಗದೆ ಹೋಗಲಿಲ್ಲ. ಕೂಡಲೆ ಅವನು ತನ್ನ ಸೇನಾಪತಿಯನ್ನು ಕುರಿತು:—"ಈ ನೀಚನು ಶತ್ರುಗಳ ಗುಪ್ತ ಹೇರನಿರುವದು ನಿಜ. ಇವನಿಗೆ ಅನ್ನ-ನೀರುಗಳನ್ನು ಕೊಡದೆ, ನಮ್ಮ ದಂಡು ಬೀಡು ಬಿಡುವವರೆಗೆ ಇವನನ್ನು ಬಹು ಜೋಕೆಯಿಂದ ಸಾಗಿಸಿಕೊಂಡು ನಡೆಯಿರಿ. ಅಲ್ಲಿ ಇವನಿಗೆ ಯೋಗ್ಯ ದಂಡನೆಯನ್ನು ಮಾಡಿ, ಇವನ ಈ ಛದ್ಮ ವೇಷವನ್ನು ಬೈಲಿಗೆಳಿಯೋಣ" ಎಂದು ಅಪ್ಪಣೆ

ಮಾಡಲು, ಸೇನಾಪತಿಯು ಅವನನ್ನು ಸೈನಿಕರಿಂದ ಪ್ರತಿಬಂಧಿಸಿ, ಬಲವಾದ ಕಾವಲಿನಲ್ಲಿರಿಸಿದನು. ಅಷ್ಟರಲ್ಲಿ ಮುಹೂರ್ತವು ಒದಗಲು, ಪ್ರಯಾಣಸೂಚಕವಾದ ತುತೂರಿಯು ತನ್ನ ಕರ್ಕಶಸ್ವರದಿಂದ ಎಲ್ಲರ ಕಿವಿಗಳನ್ನು ಗಡಚಿಕ್ಕಿಸಿತು. ಕೂಡಲೆ ಸಮುದ್ರವು ಮೇರೆದಪ್ಪಿ ಹರಿಯುವಂತೆ ಆ ಸೇನೆಯು ಮಂದಗತಿಯಿಂದ ಮುಂದಕ್ಕೆ ಸಾಗಿತು. ಆ ವಿಲಕ್ಷಣ ಗುಪ್ತಹೇರನೂ ಭವಿತವ್ಯವನ್ನು ಯೋಚಿಸುತ್ತ ಸೆರೆಯಾಳಾಗಿ ಸಾಗಿದನು.

---

## ೧೨ ಶುಭ ಚಿಹ್ನ.

ವಾಚಕ ಮಹಾಶಯರೇ, ಸಮ್ರಾಟ ಭೂಪಡನಂತೆ ನೀವಾದರೂ ಆ ಗುಪ್ತಹೇರನು ಯಾರೆಂಬ ವಿಷಯವಾಗಿ ಯೋಚನೆಯಲ್ಲಿ ಬಿದ್ದಿರಬಹುದು. ಸಮ್ರಾಟನು ದಂಡಿನ ತಳವೂರಿದಲ್ಲಿ ಅವನ ವಿಚಾರ ಮಾಡುವವನಾದ್ದರಿಂದ ನಾವೂ ಅಲ್ಲಿಗೆ ಹೋಗುವಾ ನಡೆಯಿರಿ.

ಪಾವಗಡದಿಂದ ಹೊರಟ ಸಮ್ರಾಟನ ಸೈನ್ಯವು ಮಧ್ಯಾಹ್ನದ ವರೆಗೆ ದಾರೀ ನಡೆದು, ಒಂದು ವಿಶಾಲವಾದ ಜಲಾಶಯವನ್ನು ಆಶ್ರಯಿಸಿತು. ಆಗ ಬೇಸಿಗೆಯ ದಿವಸವಿದ್ದದರಿಂದ, ಕಿಚ್ಚು ಸುರಿದ ಹಾಗೆ ಬಿಸಿಲು ಕಾಯುತ್ತಿತ್ತು. ಅದರಲ್ಲೂ ಆ ದಿನವಂತೂ ಬಿಸಿಲಿನ ಪ್ರಖರತೆಯು ವಿಶೇಷವಾಗಿತ್ತು. ಆ ಗುರ್ಜರ ಪ್ರದೇಶದಲ್ಲಿ, ಪ್ರಸ್ತುತದಲ್ಲಿ ಸಮ್ರಾಟನ ಪ್ರಯಾಣವು ನಡೆದ ಸ್ಥಳದಲ್ಲಿ ವೃಕ್ಷಗಳು ಅಪರೂಪಕ್ಕಿದ್ದವಾದ್ದರಿಂದ ಸಮ್ರಾಟನ ಕಪ್ಪಾಳುಗಳಾದ ಸೈನಿಕರು ಸಹ ಬೇಸತ್ತಿದ್ದರು. ಅವರಿಗೆ ಒಂದೇಸವನೆ ದಾಹವಾಗಹತ್ತಿತ್ತು; ಆದ್ದರಿಂದ ಬಿಸಿಲಿನ ಪ್ರಖರತೆಯು ತೆಗ್ಗುವ ವರೆಗೆ ಆ ಜಲಾಶಯದ ಬಳಿಯಲ್ಲಿಯೇ ಇದ್ದ ಆಮ್ರವೃಕ್ಷಗಳ ಛಾಯೆಯಲ್ಲಿಯೇ ತಳವೂರಬೇಕೆಂದು ಸಮ್ರಾಟನು ಇಚ್ಛಿಸಿದನು. ಸೈನಿಕರಿಗೂ ಅಷ್ಟೇ ಬೇಕಾದ್ದರಿಂದ ಆ ವಿಶಾಲವಾದ ಜಲಾಶಯದ ಸುತ್ತುವರೆದು ಪಾಳಯವು ಇಳಿದುಕೊಂಡಿತು. ಪುನಃ ಸೈನ್ಯವು ತಳ ಕೀಳಲಿಕ್ಕೆ ಮೂರು ನಾಲ್ಕು ತಾಸುಗಳ ಅವಕಾಶವು ಇದ್ದದರಿಂದ, ಈ ಅವಧಿಯಲ್ಲಿ ಆ ವಿಲಕ್ಷಣ ಗುಪ್ತಹೇರನ ಸಮಾಚಾರವನ್ನು ತಕ್ಕೊಂಡೇ ಬಿಡಬೇಕೆಂದು ಸಮ್ರಾಟನು ಸೇನಾನಾಯಕನಿಗೆ ಅಪ್ಪಣೆ ಮಾಡಿದನು. ಕೂಡಲೆ ದೂತರಿಂದ ಪರಿವೃತನಾದ ಆ ವಿಲಕ್ಷಣ ಮನುಷ್ಯನು ಸಮ್ರಾಟನ ಮುಂದೆ ತಂದು ನಿಲ್ಲಿಸಲ್ಪಟ್ಟನು.

ಇಷ್ಟೊತ್ತಿನ ವರೆಗೆ ಪ್ರತಿಬಂಧದಲ್ಲಿರಿಸಿದ್ದರೂ ಆ ವಿಲಕ್ಷಣ ಮನುಷ್ಯನ ಸ್ಥಿತಿಯಲ್ಲಿ ಏನೂ ಅಭ್ಯಂತರದಾಗಿದ್ದಿಲ್ಲ. ಅವನ ಮೋರೆಯ ಮೇಲೆ ಸ್ವಾಭಾವಿಕವಿದ್ದಂತೆ ತೋರುವ ಹುಚ್ಚುಕಳೆಯು ಹೊರತು ಭಯದ ಚಿಹ್ನವಾಗಲಿ ಬೇರೆ

ಭಾವವಾಗಲಿ ವ್ಯಕ್ತವಾಗುತ್ತಿರಲಿಲ್ಲ; ಸಮ್ರಾಟನು ಅವನನ್ನು ಒಳ್ಳೇ ಭೇದಕ ದೃಷ್ಟಿಯಿಂದ ನೋಡಿದನು; ಆದರೆ ಅವನಲ್ಲಿ ಯಾವ ಛದ್ಮವೇಷವೂ ಇದ್ದಂತೆ ತೋರಲಿಲ್ಲ. ಆತನು ವಿಸ್ಮಯ ಪಟ್ಟನು. ನಿರಪರಾಧಿಯಾಗಿದ್ದ ಇವನನ್ನು ಯಾಕೆ ಪೀಡಿಸಬೇಕೆಂದು ಸಹ ಸಮ್ರಾಟನ ಮನಸ್ಸಿನಲ್ಲಿ ಬಂದು ಹೋಯಿತು; ಆದರೆ ಸಮ್ರಾಟನಿಗೆ ಅವನ ಜೋಳಿಗೆಯಲ್ಲಿ ಶೋಧ ಮಾಡಿ ನೋಡಬೇಕೆಂಬ ಬುದ್ಧಿಯು ಸಹಜವಾಗಿ ಉತ್ಪನ್ನವಾಯಿತು. ಆಗ ಅವನು ಒಳಿಯಲ್ಲಿದ್ದ ಸೇವಕ ರಿಗೆ ಕಣ್ಣು ಸನ್ನೆ ಮಾಡಲು, ಸೇವಕರು ಅವನ ಜೋಳಿಗೆಯಲ್ಲಿ ಕೈ ಹಾಕ ಹೋದರು; ಆದರೆ ಇಷ್ಟೊತ್ತಿನ ವರೆಗೆ ವ್ಯವಹಾರ ಶೂನ್ಯತೆಯನ್ನು ಹೊರಡಿ ಸುತ್ತಿದ್ದ ಆ ಹುಚ್ಚನು, ರಾಜಸೇವಕರು ಜೋಳಿಗಿಗೆ ಕೈಹಾಕಿದ ಕೂಡಲೆ ಒಮ್ಮೆಲೆ ಕೆರಳಿ, ಅವರ ಕೈಗಳನ್ನು ಕೊಸರಿ ಒಗೆದನು. ಈ ಕೃತಿಯಿಂದ ಹುಚ್ಚನ ಹುಳುಕು ಹೊರಬಿದ್ದು ಹೋಯಿತು. ಈತನು ಹುಚ್ಚನಾಗಿರದೆ ಗುಪ್ತ ಹೇರನೇ ಇರುವನೆಂದು ಸಮ್ರಾಟನಿಗೆ ನಂಬಿಗೆಯಾಗಿ ಹೋಯಿತು. ಬಳಿಕ ಕೇಳು ವದೇನು? ಸಮ್ರಾಟನ ಅಪ್ಪಣೆಯಿಂದ ನಾಲ್ವರು ರಾಜಸೇವಕರು ಅವನ ಎರಡೂ ಜೋಳಿಗೆಗಳನ್ನು ಬಲಾತ್ಕಾರದಿಂದ ಕಸಿದುಕೊಂಡು ಅವನನ್ನು ಪ್ರತಿಬಂಧಿಸಿ ದರು. ಆ ಬಳಿಕ ಜೋಳಿಗೆಯಲ್ಲಿ ಅಂಥ ಮಹತ್ವದ ವಸ್ತುಗಳೇನಿವೆಯೆಂಬ ದನ್ನು ನೋಡುವದಕ್ಕೆ ಪ್ರಾರಂಭವಾಯಿತು. ಸೇವಕರು ಜೋಳಿಗೆಯಲ್ಲಿಯ ಒಂದೊಂದೇ ವಸ್ತುಗಳನ್ನು ಹೊರಗೆ ತೆಗೆದು ಇಡಲಾರಂಭಿಸಿದರು. ಮೊದ ಮೊದಲು ಹರಕ ಬಟ್ಟೆಗಳೂ ಕೆಲವು ಅಶುಚಿಪದಾರ್ಥಗಳೂ ಹೊರಟವು. ಬಳಿಕ ನಾಲ್ಕೈದು ತರದ ಬಣ್ಣದ ಉಂಡೆಗಳು ದೊರೆತವು. ಹಾವುಗಾರ ಆಟದ ಸಾಮಾ ನುಗಳೂ ಇದ್ದವು; ಅವುಗಳಲ್ಲಿ ಹರಕ ಅರಿವೆಯಿಂದ ಚನ್ನಾಗಿ ಹೊಲಿಯಲ್ಪಟ್ಟ ಒಂದು ದಪ್ಪನ್ನ ಚೀಲವು ಸಿಕ್ಕಿತು. ಆ ಚೀಲವನ್ನು ಜಾಡಿಸಲು ಅದರಲ್ಲಿ ಎರಡು ಮಡಿಚಿ ಮುದ್ದೆಯಾದ ಕಾಗದಗಳಿದ್ದವು. ಸಮ್ರಾಟನು ಅವುಗಳನ್ನು ತನ್ನ ವಶಕ್ಕೆತಕ್ಕೊಂಡನು. ಎರಡನೆಯ ಜೋಳಿಗೆಯಲ್ಲಿ ಹರಕ ಅರಿವೆಯ ಚೂರುಗಳ ಹೊರತು ಮತ್ತೇನೂ ಸಿಗಲಿಲ್ಲ.

ಈ ರೀತಿಯಾಗಿ ಅವೆರಡೂ ಜೋಳಿಗೆಗಳನ್ನು ಸಂಪೂರ್ಣವಾಗಿ ಶೋಧ ಮಾಡಿದ ಬಳಿಕ ಸಮ್ರಾಟನು ಸೇವಕರಿಗೆ ಹುಚ್ಚನನ್ನು ಬೇರೆ ಕಡೆಗೆ ಕರೆದೊ ಯ್ಯಲು ಅಪ್ಪಣೆ ಮಾಡಿದನು. ರಾಹುಟಿಯಲ್ಲಿ ಸಮ್ರಾಟನು ಒಬ್ಬನೇ ಕುಳಿತು ಮುದ್ದೆಯಾಗಿರುವ ಆ ಕಾಗದಗಳನ್ನು ಸರಿಪಡಿಸಿ, ಓದಿಕೊಳ್ಳಲುಪಕ್ರಮಿ ಸಿದನು. ಅವೆರಡೂ ಚೀಟಿಗಳನ್ನು ಓದಿದರೂ ಅವನ್ನು ಯಾರು ಯಾರಿಗೆ ಬರೆ ದರೆಂಬದು ತಿಳಿಯದೆ ಹೋಯಿತು. "ನೀನು ಕೈಕೊಂಡ ಕೆಲಸವನ್ನು ಯಶಸ್ವಿ

ಯಾಗ ಮಾಡು'' ಎಂದು ಒಂದು ಪತ್ರದಲ್ಲಿ ಬರೆದಿತ್ತು; ಇನ್ನೊಂದು ಪತ್ರದಲ್ಲಿ "ನಮ್ಮ ಕೆಲಸವು ಆಗತಕ್ಕಷ್ಟು ಆಗಿದೆ'' ಎಂದಿತ್ತು. ಇವೆರಡೂ ಪತ್ರಗಳ ವಾಚನದಿಂದ ವಿಶೇಷ ಸಂಗತಿಯು ತಿಳಿಯದಿದ್ದರೂ, ತನ್ನ ವಿರುದ್ಧವಾಗಿ ಯಾರೋ ಭಯಂಕರ ಕಾರಸ್ಥಾನವನ್ನು ನಡಿಸಿರುವರೆಂಬದು ಮಾತ್ರ ಅವನಿಗೆ ಗೊತ್ತಾಯಿತು. ಮನುಷ್ಯನಿಗೆ ತನ್ನ ಮೇಲೆ ಬರತಕ್ಕ ಆಪತ್ತುಗಳು ಸಣ್ಣವಿರಲಿ-ದೊಡ್ಡವಿರಲಿ, ಅವು ಒಮ್ಮೆ ಬೈಲಿಗೆ ಬಂದ ಬಳಿಕ ಅಷ್ಟೊಂದು ಭಯವುಳಿಯುವದಿಲ್ಲ. ಅವುಗಳ ಪ್ರತೀಕಾರಕ್ಕೆ ಮಾರ್ಗವನ್ನು ಹುಡುಕಲಿಕ್ಕೆ ಅನುಕೂಲವಾಗುವದರಿಂದ, ಅವನು ಒಂದು ಬಗೆಯಿಂದ ಧೈರ್ಯವನ್ನು ತಾಳುತ್ತಾನೆ; ಆದರೆ ಆ ಸಂಕಟಗಳು ಪ್ರತ್ಯಕ್ಷವಾಗಿ ಮೈಮೇಲೆ ಬಾರದಿದ್ದಾಗ ಅವು ಬರುವವೆಂಬದಿಷ್ಟೇ ಸಂಗತಿಯ ಶ್ರವಣದಿಂದ ಅವನ ಚಿಂತೆಯು ಅತ್ಯಧಿಕವಾಗುತ್ತದೆ. ಯಾಕಂದರೆ, ಆ ಆಗಂತುಕ ಸಂಕಟವು ಯಾವದು? ಯಾರಿಂದ ಉತ್ಪನ್ನವಾಗುವದು? ಯಾವಾಗ ಬರುವದು? ಅದಕ್ಕೆ ತಾನು ಮಾಡಬೇಕಾಗಿದ್ದ ಪ್ರತೀಕಾರೋಪಾಯವು ಯಾವದು? ಎಂಬ ಸಂಗತಿಗಳಾವವೂ ತಿಳಿಯುವದಿಲ್ಲ. ಮೌಢ್ಯನಂತೆ ಆ ಸಂಕಟ ನಿರೀಕ್ಷಣೆ ಮಾಡುತ್ತ ಕುಳಿತುಕೊಳ್ಳಬೇಕಾಗುತ್ತದೆ. ಸಾಮಾನ್ಯರಂತೂ ಅಂಜಿ ಎದೆಯೊಡೆದುಕೊಂಡು, ಭಾವೀ ಸಂಕಟಗಳ ಭಯಂಕರ ಕಲ್ಪನೆಯಿಂದಲೇ ಹೃದ್ರೋಗ ಹಚ್ಚಿಕೊಂಡು ಅದರಲ್ಲಿಯೇ ಇಹಲೋಕಕ್ಕೆ ರಾಮ-ರಾಮ ಮಾಡುವ ಪ್ರಸಂಗವನ್ನು ತಂದುಕೊಳ್ಳುತ್ತಾರೆ; ಆದರೆ ಧೀರರಾದವರು ತಮಗೆ ಶತ್ರುಗಳು ಯಾರು-ಯಾರು ಇರುವರು; ಯಾರಿಂದ ಯಾವ ಸಂಕಟಗಳು ಉದಯಕ್ಕೆ ಬರಬಹುದೆಂಬದರ ಶೋಧ ಹಚ್ಚಿ, ಭಾವೀಸಂಕಟಗಳ ವಿಷಯವಾಗಿ ಶಕ್ಯವಾದ ಮಟ್ಟಿಗೆ ವಿಶ್ವಸನೀಯ ಸಂಗತಿಗಳನ್ನು ತಿಳಿದುಕೊಳ್ಳುವರು. ಇರಲಿ.

ಪ್ರಸ್ತುತದಲ್ಲಿ ಸಮ್ರಾಟನಿಗೆ ಇದೇ ಬಗೆಯ ಅವಸ್ಥೆಯು ಪ್ರಾಪ್ತವಾದ್ದರಿಂದ, ಧೀರಪುರುಷನಾದ ಆತನು ಹತಾಶನಾಗದೆ, ತನ್ನ ಶತ್ರುಗಳಾರೆಂಬದನ್ನು ಎಣಿಕೆ ಹಾಕಲಾರಂಭಿಸಿದನು; ಆದರೆ ಸಾಮ್ರಾಜ್ಯವನ್ನು ಹಬ್ಬಿಸಬೇಕೆಂಬ ಹವ್ಯಾಸಕ್ಕೆ ಬಿದ್ದಿರುವ ಸಮ್ರಾಟನಿಗೆ ಶತ್ರುಗಳಿಗೇನು ಕಡಿಮೆ? ಅವನ ಮೈಯಲ್ಲಿ ರೋಮಗಳಿದ್ದಷ್ಟು ಅವನಿಗೆ ಶತ್ರುಗಳಿದ್ದರೆಂದು ಹೇಳಿದರೆ ಅತಿಶಯೋಕ್ತಿಯಾಗದು! ಅವನು ಇಂದಿನ ವರೆಗೆ ಯಾವ ಯಾವ ಪ್ರದೇಶಗಳನ್ನು ಕೈವಶಮಾಡಿಕೊಂಡಿದ್ದನೋ ಮತ್ತು ಯಾವ ಯಾವ ಗಿರಿ-ದುರ್ಗಗಳನ್ನಪಹರಿಸಿದ್ದನೋ, ಅವುಗಳ ನಾಯಕರು ಸಮ್ರಾಟನಿಗೆ ಹಗೆಗಳೆಂಬದನ್ನು ಬರೆಯುವ ಕಾರಣವಿಲ್ಲ. ಇದಲ್ಲದೆ ಆತನು ಗುರ್ಜರ ಭೂಮಿಯನ್ನೆಲ್ಲ ಆಕ್ರಮಿಸಬೇಕೆಂದು ನಿಶ್ಚಯಿಸಿದ್ದ

ರಿಂದ, ಸ್ವಾಭಿಮಾನಶೀಲರಾದ ಗುರ್ಜರ ಭೂಪುತ್ರರು ಈತನನ್ನು ದ್ವೇಷಿಸುವದು ಸ್ವಾಭಾವಿಕವೇ ಸರಿ! ಇದೂ ಅಲ್ಲದೆ, ಆತನ ಉಚ್ಛೃಂಖಲ ಮಹತ್ವಾಕಾಂಕ್ಷೆಯು ವೃತ್ತಿಗೆ ಭರತಖಂಡದ ಬೇರೆ ಬೇರೆ ಭಾಗಗಳ ರಾಜರೆಲ್ಲರೂ ಅವನಿಗೆ ಶತ್ರುಗಳಾಗಿದ್ದರೆಂದು ಸಾಮಾನ್ಯವಾಗಿ ಹೇಳಲಾಗುವದು. ಹೀಗೆ ಅಸಂಖ್ಯ ಶತ್ರುಗಳ ಮಧ್ಯದಲ್ಲಿದ್ದ ಭೂವಡ ಸಾಮ್ರಾಟನು ತನ್ನ ಶತ್ರುಗಳ ಎಣಿಕೆ ಹತ್ತದೆ ಕುಂಠಿತನಾದನು. ಆದರೂ ಅವನು ತನ್ನ ಶತ್ರುಗಳ ಎಣಿಕೆಯ ಕಾರ್ಯವನ್ನು ಬಿಡಲಿಲ್ಲ. ಹೀಗೆ ಎಣಿಸುತ್ತಿರಲು, ಅವನಿಗೆ ಪಕ್ಕನೆ ಒಂದು ಸಂಗತಿಯು ನೆನಪಾಯಿತು. ಆ ಸಂಗತಿಯ ಸ್ಮರಣೆಯಿಂದ ಅವನಿಗೆ ಸ್ವಲ್ಪ ಸಮಾಧಾನವಾಯಿತು.

ಉತ್ತರಕ್ಷಣದಲ್ಲಿ ಆ ಹುಚ್ಚನು ಪುನಃ ಸಮ್ರಾಟನ ಎದುರಿಗೆ ತಂದು ನಿಲ್ಲಿಸಲ್ಪಟ್ಟನು. ಸಮ್ರಾಟನು ಸೇವಕರೆಲ್ಲರಿಗೂ ಹೊರಗೆ ಹೋಗಲಿಕ್ಕೆ ಅಪ್ಪಣೆ ಮಾಡಿದನು. ಅವರು ಅದರಂತೆ ಮಾಡಲು, ಆಗ ಸಮ್ರಾಟನು ಆ ಹುಚ್ಚನನ್ನು ಕುರಿತು: "ತಮ್ಮಾ, ನನ್ನ ಮುಂದೆ ಸುಳ್ಳು ಹೇಳಬೇಡ; ನೀನು ನಿಜವಾಗಿಯೂ ಗುಪ್ತಹೇರನಿರುತ್ತೀ; ನಿನ್ನನ್ನು ಯಾರು ಕಳಿಸಿರುವರೆಂಬದು ನನಗೆ ಗೊತ್ತಾಗಿಯೇ ಹೋಗಿದೆ. ಪಾವಗಡದ ವೃದ್ಧ ಗಿರಿಸಿಂಹನ ತರುಣ ರಾಣಿಯಾದ ವಿಮಲೆಯು ನಿನ್ನನ್ನು ಕಳಿಸಿರುವಳಷ್ಟೇ? ಆ ನೀಚ ಸ್ತ್ರೀಯು ಈ ಬಗೆಯ ಗುಪ್ತಕಾರಸ್ಥಾನದಿಂದ ಆಗುವದೇನು? ಈಗ ನೀನು ಹುಚ್ಚನ ವೇಷ ಧರಿಸಿರುತ್ತೀಯಷ್ಟೇ? ಸ್ತ್ರೀ ಒಳಸಂಚಿನಲ್ಲಿ ಸೇರಿದ ನೀನು ನಿಜವಾಗಿಯೂ ಹುಚ್ಚನಿರುತ್ತೀ! ಇನ್ನು ಮೇಲೆ ನೀನು ಈ ಹುಚ್ಚತನವನ್ನು ಕಟ್ಟಿಡು; ಚಾಲುಕ್ಯ ಸಮ್ರಾಟನ ಕೈಯಲ್ಲಿ ಸಿಕ್ಕ ಹುಚ್ಚನು ಕಡೆತನಕ ಹುಚ್ಚನಾಗಿಯೇ ಉಳಿಯಲಾರನು. ಅವನ ಹುಚ್ಚನ್ನು ಹೋಗಲಾಡಿಸುವ ತಕ್ಕ ಔಷಧವು ಸಮ್ರಾಟನಲ್ಲಿರುವದು. ಯಾಕೆ, ಮಾತಾಡಲೊಲ್ಲೆ? ನಿಜ ಸಂಗತಿ ಹೇಳು; ಸಮ್ರಾಟನು ದಯಶಾಲಿಯಾದರೂ ಕೃತಘ್ನರಾದ ಶತ್ರುಗಳಿಗೆ ದಯೆದೋರುವಷ್ಟು ಸಾಧುವಿರುವದಿಲ್ಲ. ಕ್ರಿಯೆಗೆ ಪ್ರತಿಕ್ರಿಯೆಯನ್ನು ಮಾಡಿ ತೋರಿಸುವ ಉಚ್ಚತಮ ಕ್ಷಾತ್ರವೃತ್ತಿಯು ಅವನಲ್ಲಿರುತ್ತದೆ. ನೀನು ಹೀಗೆಯೇ ಮೌನವನ್ನು ಹಿಡಿದರೆ, ನಿನ್ನನ್ನು ಆನೆಯ ಕಾಲಲ್ಲಿ ತುಳಿಸಿ ಕೊಲ್ಲಿಸುವ ಪ್ರಸಂಗವು ಬಂದೀತು. ಬಹು ಜೋಕೆ!'' ಎಂದು ನುಡಿದನು.

ಈ ಮೇರೆಗೆ ಸಮ್ರಾಟನು ಮಾತನಾಡಲು, ಹುಚ್ಚನು ವಿಚಾರಕ್ಕೊಳಗಾದನು. ಅವನು ಮನಸ್ಸಿನಲ್ಲಿ:— "ನಾನು ವಿಮಲಾರಾಣಿಯ ಕಡೆಯಿಂದ ಬಂದ ಗುಪ್ತಹೇರನೆಂಬದು ಈತನಿಗೆ ಹೇಗೆ ಗೊತ್ತಾಗಿರಬಹುದು? ನನ್ನ ಜೋಳಿಗೆಯಲ್ಲಿದ್ದ ಪತ್ರಗಳಲ್ಲಂತೂ ಅದರ ಸುತರಾಮ ಸುದ್ದಿಯು ಇರುವದಿಲ್ಲ. ಇದು ಇರಲಿ. ವಿಮಲಾರಾಣಿಗೆ ಈತನು ನೀಚಸ್ತ್ರೀಯೆಂದು ಸಂಬೋಧಿಸಿದನಲ್ಲ! ಇದ

ರಿಂದ ಇವನಾದರೂ ಉದ್ದಾಮನಿರಬೇಕು; ಇಲ್ಲವೆ ವಿಮಲೆಯಾದರೂ ಈತನ ವಿಶೇಷಣಕ್ಕೆ ತಕ್ಕವಳಿರಬೇಕು. ವಿಮಲೆಯ ಜೊತೆಗೆ ನಾನು ೧೫-೨೦ ದಿವಸಗಳ ವರೆಗೆ ಇದ್ದು ನೋಡಿರುವೆನು. ಆಕೆಯಲ್ಲಿ ಅಂಥ ನೀಚ ಮನೋವಿಕಾರವು ಇದ್ದದ್ದು ಕಂಡು ಬರಲಿಲ್ಲ. ಇರಲಿ. ಈಗ ಹೇಗೆ ಮಾಡಬೇಕು? ಮಾಡುವದಾದರೂ ಏನು? ಆದದ್ದನ್ನು ಅನುಭವಿಸಲೇ ಬೇಕು," ಎಂದು ಯೋಚಿಸಿ, ಬಹಿರಂಗವಾಗಿ ಯಾವ ವಿಕಾರಗಳನ್ನೂ ವ್ಯಕ್ತಪಡಿಸದೆ, ತನ್ನ ಅವ್ಯವಹಾರ್ಯ ಸ್ಥಿತಿಯನ್ನೇ ನಟಿಸಿದನು.

ಸಮ್ರಾಟನು ಮೇಲೆ ಹೇಳಿದಂತೆ ಮಾತನಾಡಿದ ಬಳಿಕ, ಹುಚ್ಚನ ಕಡೆಗೆ ಅತಿ ತೀಕ್ಷ್ಣದೃಷ್ಟಿಯಿಂದ ನೋಡುತ್ತಿದ್ದನು. ತನ್ನ ಮಾತಿನಿಂದ ಹುಚ್ಚನು ವಿಚಾರಕ್ಕೊಳಗಾಗಿರಬೇಕೆಂದು ಅವನಿಗೆ ಭಾಸವಾಯಿತು. ಕ್ಷಣ ಹೊತ್ತು ಅವನು ಸುಮ್ಮನಿದ್ದು, ಹುಚ್ಚನಿಂದ ಏನೂ ಉತ್ತರ ಬಾರದ್ದರಿಂದ, ಸಂತಾಪಗೊಂಡು ಗುಡುಗಿನಂಥ ಧ್ವನಿಯಿಂದ ನುಡಿದನೇನಂದರೆ:— "ಮೂರ್ಖಾ, ಇನ್ನೂ ನಿನಗೆ ವಿಚಾರ ಬರಲೊಲ್ಲದೇ? ನಿನ್ನಂತೆ ಇನ್ನೊಬ್ಬ ಮೂರ್ಖನು ನಮ್ಮ ಕೈಗೆ ಸಿಕ್ಕಿರುವನು; ಅವನಿಂದ ನಿನ್ನ ವಿಷಯವಾಗಿ ಎಲ್ಲ ಸಂಗತಿಯು ತಿಳಿದಿರುವದರಿಂದ, ನಿನ್ನ ಬಾಯಿಂದಲೇ ಎಲ್ಲ ಸಂಗತಿಗಳನ್ನು ತಿಳಿದುಕೊಳ್ಳಬೇಕೆಂಬ ಕಾರಣವೂ ಉಳಿದಿರುವದಿಲ್ಲ. ನಮ್ಮ ಮುಂದಿನ ಮುಕ್ಕಾಮಿನಲ್ಲಿ ನಿನಗೆ ಕಡುತರವಾದ ಶಿಕ್ಷೆಯನ್ನು ವಿಧಿಸುವೆನು."

ಈ ರೀತಿಯಾಗಿ ಗದ್ದರಿಸಿ ಸಮ್ರಾಟನು ಅವನನ್ನು ದೂತರ ವಶಕ್ಕೆ ಒಪ್ಪಿಸಿದನು. ಅಷ್ಟರಲ್ಲಿ ಇಳಿಹೊತ್ತಾದ್ದರಿಂದ ಆತನ ಅಪ್ಪಣೆಯಂತೆ ಸೇನಾಪತಿಯು ಎಲ್ಲ ಸೈನ್ಯವನ್ನು ಅಲ್ಲಿಂದ ಹೊರ ಹೊರಡಿಸಿದನು. ಬಿಸಿಲಿನ ಕಾಟವು ಕಡಿಮೆಯಾದ್ದರಿಂದ ಹುರುಪುಗೊಂಡ ಸೈನಿಕರು, ತಂತಮ್ಮ ಸಾಮಾನುಗಳನ್ನು ಸಾವರಿಸಿಕೊಂಡು ನಡೆದರು. ಹೀಗೆ ಸೈನ್ಯವೆಲ್ಲವೂ ಉಲ್ಹಾಸಗೊಂಡು ನಡೆಯುತ್ತಿರಲು, ಸೆರೆಯಲ್ಲಿ ಸಿಕ್ಕ ಹುಚ್ಚನು ಮಾತ್ರ ಬಹು ವಿಧವಾಗಿ ಮಿಡುಕುತ್ತಿದ್ದನು. ಆಗ ಅವನು ತನ್ನ ಮನಸ್ಸಿನಲ್ಲಿ ವಿಚಾರಿಸತೊಡಗಿದ್ದೇನಂದರೆ:—"ಸಮ್ರಾಟನು ಆಡಿದಂತೆ ಇನ್ನೊಬ್ಬ ಗುಪ್ತಹೇರನು ಯಾವನು ಸಿಕ್ಕಿರುವನು? ಬಹುಶಃ ನಮ್ಮ ಹರಿಸಿಂಗನಾಗಿರಬಹುದು. ಅವನು ಪಾವಗಡಕ್ಕೆ ಹೋಗಿದ್ದು, ಇಲ್ಲಿಗೆ ಯಾವಾಗ ಬಂದನೋ ತಿಳಿಯದು! ಆತನು ಹುಟ್ಟಾ ಮಂದಸ್ವಭಾವದವನು; ಈ ದಕ್ಷಿಣೀ ಜನರನ್ನು ವಂಚಿಸಲಿಕ್ಕೆ ಅವನಿಂದ ಸಾಧ್ಯವಾಗಿರಲಿಕ್ಕಿಲ್ಲ. ನಾನು ವೇಷದಲ್ಲಿ ಇಷ್ಟು ನಿಪುಣನಿದ್ದರೂ, ಸ್ವಭಾವದಲ್ಲಿ ಅತ್ಯಂತ ಸ್ಥೈರ್ಯವುಳ್ಳವನಿದ್ದರೂ ನಾನು ಆಡಾಡುತ್ತ ಇವರ ಕೈಗೆ ಸಿಗಿಬಿದ್ದೆನು. ಅಂದಬಳಿಕ ಈ ಕೆಲಸದಲ್ಲಿ ಹರಿಸಿಂಗನ

ಯೋಗ್ಯತೆಯೋ ಅಲ್ಲವೆಂದು ಹೇಳಬೇಕಾಗುತ್ತದೆ. ಒಂದುವೇಳೆ ಅವನು ಶತ್ರುಗಳ ಕೈಗೆ ಸಿಕ್ಕರೂ ಸಿಗಲೊಲ್ಲನೇಕೆ, ನಮ್ಮ ಗುಪ್ತ ಕಾರಸ್ಥಾನಗಳನ್ನು ಯಾಕೆ ಅವರ ಮುಂದೆ ಹೇಳಿದನೋ ತಿಳಿಯದು. ಹಾಯ್-ಹಾಯ್! ಪ್ರಸಂಗವು ಕಠಿಣವಾಯಿತು. ಅತ್ತ ನಮ್ಮ ಕಾರ್ಯವೂ ಕೆಟ್ಟು ಹೋಗುವದು. ಇತ್ತ ನನ್ನ ಪ್ರಾಣವೂ ಉಳಿಯಲಾರದು. ವಿಮಲಾರಾಣಿಯು ಇಷ್ಟೊತ್ತಿಗೆ ಎಲ್ಲ ಕೆಲಸಗಳನ್ನು ಸಿದ್ಧಪಡಿಸಿಟ್ಟುಕೊಂಡಿರಬಹುದು; ಆದರೆ ನನ್ನಿಂದ ಮಾತ್ರ, ಅಲ್ಲ ಹರಿಸಿಂಗನಿಂದ ಆಕೆಯ ಮಹತ್ವಾಕಾಂಕ್ಷೆಗೆ ಮುಳುಗು ನೀರು ಬಂದಿತು. ಎಲಾ, ದುಷ್ಟಾ, ಹರಿಸಿಂಗಾ, ಸರ್ವಸ್ವವನ್ನೂ ಘಾತ ಮಾಡಿದೆಯಾ? ನಿನ್ನ ಈ ನೀಚತನದಿಂದ ನನ್ನ ಎಲ್ಲ ಮನೋರಥಗಳು ಒಟ್ಟ ಬೈಲಾಗಿ ಹೋದವಲ್ಲ! ಸಮ್ರಾಟನು ಹೇಳಿದ ಈ ಸಂಗತಿಯು ನಿಜವಾಗಿರಬಹುದೇನು? ನಾನು ಹುಚ್ಚನು; ಭ್ರಾಂತನು; ನನ್ನ ಗುಟ್ಟನ್ನು ತಿಳಿದುಕೊಳ್ಳಲಿಕ್ಕೆ ಈ ಧೂರ್ತ ಸಮ್ರಾಟನು ಮುಂಗಾಲುಪುಟಿಗೆಯ ಮಾತುಗಳನ್ನಾಡಿರಬಹುದು. ಛೆ; ಹೀಗೆ ಇರುವ ಸಂಭವವಿಲ್ಲ. ಯಾಕಂದರೆ, ಹರಿಸಿಂಗನು ಒಳಗುಟ್ಟನ್ನು ಹೇಳದಿದ್ದರೆ, ನಾನು ವಿಮಲಾರಾಣಿಯ ಕಡೆಯಿಂದ ಬಂದ ಗುಪ್ತಹೇರನೆಂಬದು ಈತನಿಗೆ ತಿಳಿಯುವ ಬಗೆಯಾವದು? ನಿಜವಾಗಿಯೂ ಹರಿಸಿಂಗನು ನಮಗೆ ಮೋಸ ಮಾಡಿದನು. ಅವನು ಪ್ರಾಣಕ್ಕೆ ಹೆದರಿಯಾಗಲಿ ಇಲ್ಲವೆ ವೈಭವದ ಆಶೆಗಾಗಲಿ ಇಂಥ ಕೀಳುತನ ಮಾಡಿರಬಹುದು. ನಮ್ಮ ಜನಳ ಹಣೇ ಬರಹವು ಇಷ್ಟೇ ಸರಿ! ನಮ್ಮ ಎಲ್ಲ ಕಾರಸ್ಥಾನವೂ ಬೈಲಿಗೆ ಬಿದ್ದಬಳಿಕ ನಾನು ಬದುಕಿ ಉಳಿದಾದರೂ ಮಾಡುವದೇನು? ಅಧಮನಾದ ನನ್ನಿಂದ ನನ್ನ ಶತ್ರುಗಳ ದಮನ ಮಾಡಲಿಕ್ಕೆ ಆಗಲಿಲ್ಲ. ವಿಮಲೆಯೊಡನೆ ಸೌಖ್ಯವನ್ನು ಅನುಭವಿಸಲಿಕ್ಕೂ ಆಗಲಿಲ್ಲ. ಇನ್ನು ಮೇಲೆ ಇನ್ನೆಲ್ಲಿಯ ವಿಮಲೆ! ಇನ್ನೆಲ್ಲಿಯ ಮಾಲೋಜಿ!! ಶಿವ-ಶಿವ!!!

ಈ ಮೇರೆಗೆ ಯೋಚಿಸುವಾಗ ಹುಚ್ಚನ ಕಣ್ಣುಗಳಲ್ಲಿ ನಿಜವಾಗಿಯೂ ಅಶ್ರುಗಳಾಡಿದವು. ಅವನ ಮುಖವು ಕಪ್ಪಿಟ್ಟು ಹೋಗಿತ್ತು. ಚಾಣಾಕ್ಷರಾದ ಕಾವಲುಗಾರರು ಅವನ ಈ ದೈನ್ಯಾವಸ್ಥೆಯನ್ನು ತಟ್ಟನೆ ಕಂಡು ಹಿಡಿದರು. ಅವರು ಆತನನ್ನು ಕುರಿತು:— ಹುಚ್ಚಾ, ಯಾಕೆ ಅಳುವೆ? ನಾಳೆಗೆ ಆನೆಯ ಕಾಲಲ್ಲಿ ಸಿಕ್ಕು ಸಾಯಬೇಕಾಗುವದೆಂದು ಅಳುವಿಯೇನು? ಜೀವದ ಮೇಲೆ ಅಷ್ಟೊಂದು ಉದಾರನಿರದ ನೀನು, ಗುಪ್ತಹೇರನಂಥ ಕಠಿಣ ಕಾರ್ಯವನ್ನೇಕೆ ಕೈಕೊಂಡೆ? ಒಂದುವೇಳೆ ನಿನಗೆ ಜೀವದಾಶೆಯಿದ್ದರೆ, ನಮ್ಮ ಮಹಾರಾಜರೆದುರಿಗೆ ನಿಜವಾದ ಸಂಗತಿಯನ್ನು ಹೇಳು. ಸುಮ್ಮನೆ ಅತ್ತರಾಗುವದೇನು? ಎಂದು ನುಡಿದರು. ತನ್ನ ದಡ್ಡತನವು ಕಾವಲುಗಾರರಿಗೆ ಕೂಡ ತಿಳಿಯಿತೆಂದು ಹುಚ್ಚನು

ನಾಚಿಕೊಂಡನು. ಅವನು ಕಣ್ಣುಗಳನ್ನೊರಿಸಿಕೊಳ್ಳದೆ ಅವನ್ನು ಹಾಗೇ ಬಿಟ್ಟು ಬಿಟ್ಟನು.

ಸಮ್ರಾಟನು ಗೊತ್ತು ಮಾಡಿದಂತೆ ಮೊದಲನೆಯ ವಸತಿಯ ಸ್ಥಳವನ್ನು ಮುಟ್ಟಿದನು. ಬಾಜಾರಬುಣಗಿನವರು ಮೊದಲೇ ಆ ಸ್ಥಳವನ್ನು ಮುಟ್ಟಿ ಎಲ್ಲ ವ್ಯವಸ್ಥೆ ಮಾಡಿದ್ದರಿಂದ, ಸೈನಿಕರಿಗೆ ಯಾವ ಬಗೆಯ ತೊಂದರೆಯೂ ಆಗಲಿಲ್ಲ. ಸಮ್ರಾಟನ ಸೈನ್ಯವು ಬೀಡು ಬಿಟ್ಟಲ್ಲಿ ಅದೊಂದು ದೊಡ್ಡ ನಗರವೇ ಆದಂತೆ ತೋರಿತು. ಬೀಡು ಬಿಡುವ ಅವರ ಸ್ವಾಭಾವಿಕ ಪದ್ಧತಿಯಂತೆ ಮಧ್ಯದಲ್ಲಿ ಸಮ್ರಾಟನ ರಾಹುಟಿಯು ಇದ್ದು, ಅದರ ಸುತ್ತುವರೆದು ಸರದಾರರ ರಾಹುಟಿಗಳಿದ್ದವು. ಆ ಸರದಾರರ ರಾಹುಟಿಗಳನ್ನು ಬಳಿಸಿಕೊಂಡು ಕಾಲಾಳುಗಳು, ಕಾಲಾಳುಗಳನ್ನು ಬಳಿಸಿಕೊಂಡು ವರ್ತಕ ಪರಿವಾರವು, ಅವರಿಂದಾಚೆಗೆ ಅಶ್ವಾಧಿಪತಿಗಳು, ಅವರನ್ನು ಬಳಿಸಿ ಗಜಪತಿಗಳು, ಗಜಪತಿಗಳಿಂದಾಚೆಗೆ ಇನ್ನುಳಿದ ಒಂಟೆ ಮೊದಲಾದ ವಾಹನಗಳೂ ಬಾಜಾರಬುಣಗೂ ಕ್ರಮಗೊಂಡಿದ್ದವು. ವಿಶಾಲವಾದ ದಂಡಿನಲ್ಲಿ ಸೈನಿಕರ ಶ್ರಮ ಪರಿಹಾರದ ಸಾಧನಗಳಾದ ಆಟ-ತಮಾಸೆ-ವಿನೋದ ಮೊದಲಾದವುಗಳು ನಡೆಯುತ್ತಿದ್ದವು. ಇಂಥ ತಮಾಸೆಗಾರರನ್ನು ರಾಜರು ಬುದ್ಧಿಪೂರ್ವಕವಾಗಿ ಸಾಕುತ್ತಿದ್ದರು. ಇವರಲ್ಲದೆ ಬೇರೆ ಹೊಟ್ಟೆ ಹೊರಕೊಳ್ಳುವ ಎಷ್ಟೋ ಜನ ತಮಾಸೆಗಾರರು ದಂಡಿನ ಬೀಡು ಇದ್ದಲ್ಲಿ ಬಂದು, ರೊಕ್ಕ ಸಂಪಾದನೆ ಮಾಡಿಕೊಂಡು ಹೋಗುತ್ತಿದ್ದರು. ಹೀಗೆ ಸಮ್ರಾಟನ ದಂಡು ಬೀಡು ಬಿಟ್ಟಿರಲು, ಮೂರು ನಾಲ್ಕು ಜನ ತಮಾಷೆಗಾರರು ಅವರ ಪಾಳಯವನ್ನು ಸೇರಿದರು. ವಿನೋದಪ್ರಿಯರಾದ ಸೈನಿಕರು ಇಂಥ ತಮಾಷೆಗಾರರಿಗೆ ಪ್ರತಿಬಂಧವನ್ನು ಮಾಡುತ್ತಿದ್ದಿಲ್ಲ.

ಈ ಆಗಂತುಕ ತಮಾಷೆಗಾರರು ದಂಡಿನಲ್ಲಿ ಸೇರಿದ ವರದಿಯು ಸಮ್ರಾಟನಿಗೆ ಕೂಡಲೆ ಮುಟ್ಟಿತು. ಆಗ ಆತನು ದೂತರನ್ನು ಕರೆದು ಸೆರೆಯಲ್ಲಿರುವ ಹುಚ್ಚನನ್ನು ಆಗಂತುಕ ತಮಾಷೆಗಾರರ ಆಟವು ನಡೆದಲ್ಲಿಗೆ ಕರೆದೊಯ್ಯಲು ಆಜ್ಞಾಪಿಸಿದನು. ಕೂಡಲೆ ಅವರು ಅದರಂತೆ ಮಾಡಿದರು. ತಮಾಷೆಗಾರರೂ ಹುಚ್ಚನೂ ಪರಸ್ಪರರು ಪರಸ್ಪರರನ್ನು ನೋಡಿದರು. ರಾಜದೂತರ ಪಹರೆಯಲ್ಲಿದ್ದ ಹುಚ್ಚನನ್ನು ನೋಡಿ, ತಮಾಷೆಗಾರರಿಗೆ ವಿಷಾದವಾಯಿತು; ಅದರೆ ಹುಚ್ಚನಿಗೆ ತಮಾಷೆಗಾರರನ್ನು ನೋಡಿ ಸಂತೋಷವಾಯಿತು. ಪರಸ್ಪರರ ಭೆಟ್ಟಿಯಾದಾಗ ಪರಸ್ಪರರ ಮನೋಭಾವವು ಹೇಗೆ ಆಗುತ್ತದೆಂಬದನ್ನು ಪರೀಕ್ಷಿಸಲು ಸಮ್ರಾಟನು ಈ ಯುಕ್ತಿಯನ್ನು ತೆಗೆದಿದ್ದನು. ಯಾವ ಹರಿಸಿಂಗನು ಸಮ್ರಾಟನ ಸೆರೆಯಲ್ಲಿ ಸಿಕ್ಕಿರುವನೆಂದು ಹುಚ್ಚನು ಗ್ರಹಿಸಿದ್ದನೋ, ಆ ಹರಿಸಿಂಗನು

ತಮಾಷೆಗಾರನ ವೇಷದಿಂದ ಬಂದಿರುವದನ್ನು ನೋಡಿ ಹುಚ್ಚನಿಗೆ ಹೇಳಕೂಡದಷ್ಟು ಆನಂದವಾಗಿ, ಇದು ವರೆಗೆ ತಾನು ಕಲ್ಪಿಸಿದ್ದು ಭ್ರಾಮಕವೆಂದು ಭಾವಿಸಿದನು; ಆದರೆ ಪಾಪ! ಮುಂದಿನ ಎಡೆಯು ಅವನಿಗೆ ಹೇಗೆ ತಿಳಿಯಬೇಕು? ರಾಜದೂತರು ಪರಸ್ಪರರ ಭೆಟ್ಟಿಯ ಪ್ರಸಂಗವನ್ನು ಸೂಕ್ಷ್ಮವಾಗಿ ತಿಳಿದುಕೊಂಡು ಸಮ್ರಾಟನಿಗೆ ನಿವೇದಿಸಿದರು. ಬಳಿಕ ಕೇಳುವದೇನು? ಸಮ್ರಾಟನು ಆ ತಮಾಷೆಗಾರರನ್ನು ಹಿಡತರಿಸಿ ಸೆರೆಯಲ್ಲಿರಿಸಿದನು. ಅನಂತರ ಆತನು ಒಬ್ಬೊಬ್ಬರನ್ನೇ ಬೇರೆ ಬೇರೆಯಾಗಿ ಕರೆದೊಯ್ದು ವಿಲಕ್ಷಣ ರೀತಿಯಿಂದ ಹಿಂಸೆಕೊಡಲಾರಂಭಿಸಿದನು. ಕರ್ಮಧರ್ಮ ಸಂಯೋಗದಿಂದ ಮೊದಲು ಹರಿಸಿಂಗನೇ ಹಿಂಸೆಗೆ ಗುರಿಯಾದನು. ಕಾದು ಕುದಿಯುತ್ತಿರುವ ಎಣ್ಣೆಯಲ್ಲಿ ಅವನ ಎರಡೂ ಕೈಗಳನ್ನು ಇರಿಸಲು, ಹರಿಸಿಂಗನು ವಿಲಿವಿಲಿಯಾಗಿ, ತಾನು ಯಾರೆಂಬ ಸಂಗತಿಯನ್ನು ಒಡನುಡಿದು ಬಿಟ್ಟನು. ಆದರೂ ಆತನು ವಿಮಲೆಯ ಸಂಗತಿಯನ್ನು ಬಚ್ಚಿಟ್ಟನು; ಆದರೆ ರಾಜದೂತರು ಇದಕ್ಕೂ ಕಠಿಣತರವಾದ ಶಿಕ್ಷೆಯನ್ನು ಕೊಡಲು ಹರಿಸಿಂಗನು ಯಾವನೊಬ್ಬ ಸಂಸ್ಥಾನಿಕನ ಹೆಸರನ್ನು ಹೇಳಿ, ಅವನ ಗುಪ್ತಚಾರನಾಗಿ ಬಂದಿರುವೆನೆಂದು ನುಡಿದು ಬಂದ ಪ್ರಸಂಗವನ್ನು ತಪ್ಪಿಸಿಕೊಂಡನು. ಅವನು ಹುಚ್ಚನ ವಿಷಯವಾಗಿ ಯಾವ ಸಂಗತಿಯನ್ನೂ ಹೇಳದಾದನು. ಕೊನೆಗೆ ರಾಜದೂತರು ಸ್ವಲ್ಪ ದಯಾವಂತರಾಗಿ ಅವನ ಹಿಂಸೆಯನ್ನು ನಿಲ್ಲಿಸಿ, ಅವನನ್ನು ಬೇರೊಂದು ಕಡೆಯಲ್ಲಿ ಪಹರೆಯಿಂದಿರಿಸಿದರು. ಬಳಿಕ ಉಳಿದ ಮೂವರು ತಮಾಷೆಗಾರರಲ್ಲಿ ಒಬ್ಬೊಬ್ಬರನ್ನೇ ಕರೆದು ಅವರವರ ಯೋಗ್ಯತೆಯಂತೆ ದೇಹಯಾತನೆಯನ್ನು ಕೊಡಲು, ಮೂವರೂ ಬೇರೆ ಬೇರೆ ಸಂಗತಿಗಳನ್ನು ಹೇಳಿದರು. ಮೂವರೂ ಸುಳ್ಳು ಸಂಗತಿಗಳನ್ನೇ ಹೇಳಿದ್ದರಿಂದ, ಪರಸ್ಪರರ ಮಾತುಗಳಲ್ಲಿ ಮೇಳ ಬೀಳುವದು ಕೇವಲ ಅಶಕ್ಯವಾಗಿತ್ತು. ಆಗ ರಾಜದೂತರಿಗೆ ಹೇಳಕೂಡದಷ್ಟು ಸಿಟ್ಟು ಬಂದಿತು. ಅವರು ತಮಾಷೆಗಾರರಲ್ಲೊಬ್ಬನಿಗೆ ವಿಚಿತ್ರ ಹಿಂಸೆಯನ್ನುಂಟುಮಾಡಲು ಅವನು ರಹಸ್ಯಸ್ಫೋಟನವನ್ನು ಮಾಡಿದನು! ಆಗ ಆತನು ನುಡಿದದ್ದೇನಂದರೆ: ''ರಾಜಸೇವಕರೇ, ನಾವೆಲ್ಲರೂ ವಿಮಲಾರಾಣಿಯವರ ಗುಪ್ತಹೇರರು. ನಿಮ್ಮ ಸಮ್ರಾಟನ ಬುಡಮೇಲು ಮಾಡುವದಕ್ಕಾಗಿ ರಾಣಿಯವರು ಭಯಂಕರ ಕಾರಸ್ಥಾನಗಳನ್ನು ನಡಿಸಿರುವರು. ನೀವು ನಮ್ಮನ್ನು ಜೀವ ಹೋಗುವ ವರೆಗೆ ಹಿಂಸಿಸಿದರೂ, ನಾವು ಆ ಕಾರಸ್ಥಾನಗಳನ್ನು ಹೇಳಲಾರೆವು.''

ತಮಾಷೆಗಾರನಿಂದ ಈ ಮಹತ್ವದ ಸುದ್ದಿಯು ತಿಳಿಯಲು ರಾಜದೂತರಿಗೆ ಪರಮಾನಂದವಾಯಿತು. ಅವರು ತಮಾಷೆಗಾರರನ್ನು ಭದ್ರವಾದ ಕಾವಲಿನಲ್ಲಿ

ರಿಸಿ ಸಮ್ರಾಟನ ಕಡೆಗೆ ಹೋದರು; ಮತ್ತು ತಮಗೆ ತಿಳಿದ ಸಂಗತಿಯನ್ನು ಆತನಿಗೆ ನಿವೇದಿಸಿದರು. ವಿಮಲೆಯು ತನ್ನ ವಿರುದ್ಧ ಕಾರಸ್ಥಾನಗಳನ್ನು ನಡಿಸಿರ ಬೇಕೆಂಬ ಕಲ್ಪನೆಯು ಸಮ್ರಾಟನ ಮನಸ್ಸಿನಲ್ಲಿ ಈ ಮೊದಲೇ ಬಂದಿತ್ತಾದ್ದ ರಿಂದ, ದೂತನ ಮಾತಿನಿಂದ ಅವನಿಗೆ ಆಶ್ಚರ್ಯವಾಗದೆ ಆನಂದವಾಯಿತು. ಯಾಕಂದರೆ ತನ್ನ ತರ್ಕವು ನಿಜವಾದದ್ದಲ್ಲದೆ, ಸಕಾಲದಲ್ಲಿ ಭಾವೀ ಸಂಕಟಗಳ ರಹ ಸ್ಯವು ತಿಳಿಯುವದು ಉದ್ದಿಷ್ಟಕಾರ್ಯದ ಸಾಧನೆಗೆ ಶುಭಚಿಹ್ನವೆಂದೇ ಆತನು ಭಾವಿಸಿದನು.

---

## ೧೩ ರಿಪುಕುಠಾರ.

ವಿಮಲಾ ರಾಣಿಯು ಸಮ್ರಾಟನನ್ನು ಬೊಕ್ಕಬೋರಲು ಹಾಕಬೇಕೆಂದು ಪ್ರತಿಜ್ಞೆ ಮಾಡಿ ಪಾವಗಡದಿಂದ ಹೊರಟವಳು, ದೇವಿಯಗುಡಿಯ ಅಡವಿಯಲ್ಲಿ ಒಂದು ಪ್ರಶಸ್ತವಾದ ಗುಹೆಯಲ್ಲಿ ವಾಸಮಾಡಿದ್ದನ್ನು ನಮ್ಮ ವಾಚಕರು ಬಲ್ಲ ರಷ್ಟೇ; ಮತ್ತು ಅದರಂತೆ ಆಕೆಗೆ ಮಾಲೋಜಿಯೆಂಬ ಸಂಸ್ಥಾನಿಕನ ಬೆಂಬಲವು ದೊರೆತದ್ದನ್ನಾದರೂ ಬಲ್ಲರು; ಆದರೆ ಮುಂದೆ ಅವಳು ತನ್ನ ಕಾರಸ್ಥಾನವು ಕೈಗೂಡುವದಕ್ಕಾಗಿ ಏನು ಮಾಡತೊಡಗಿದಳೆಂಬದನ್ನು ನಿರೀಕ್ಷಿಸುವಾ.

ಅಗ್ನಿಯಕಣವು ಸಣ್ಣದೆಂದು ಉದಾಸೀನಮಾಡಿದರೆ, ಅದು ಹೇಗೆ ತನ್ನ ಪ್ರಭಾವದಿಂದ ಸುತ್ತಲಿನ ಜ್ವಾಲಾಗ್ರಾಹಿ ಪದಾರ್ಥಗಳನ್ನು ತನ್ನ ಭಕ್ಷ್ಯಸ್ಥಾನದಲ್ಲಿ ಸೇರಿಸಿಕೊಂಡು ಅಲ್ಪಾವಧಿಯಲ್ಲಿ ಪ್ರಚಂಡವಾದ ಸ್ವರೂಪವನ್ನು ಹೊಂದಿ ಸಹಿಸ ಲಶಕ್ಯವಾಗುವದೋ, ಹಾಗೆ ಶತ್ರುವಾದರೂ ಕ್ಷುದ್ರನೆಂದು ಉದಾಸೀನ ಮಾಡಿ ದರೆ, ಮುಂದೆ ಆತನೇ ಮೃತ್ಯುವಾಗಿ ಕೂಡ್ರುವನು. ಅದರಂತೆ ಪ್ರಸ್ತುತದಲ್ಲಿ ಚಾಲುಕ್ಯ ಸಮ್ರಾಟನಿಗೂ ಅನುಭವಕ್ಕೆ ಬಂದಿತು; ವಿಮಲೆಯು ಸಾಹಸಿಯಿದ್ದ ಳೆಂದು ಹಿಂದೆ ಹೇಳಿದೆಯಷ್ಟೇ? ಅವಳು ಮಾಲೋಜಿಯ ನೆರವು ದೊರೆತ ಬಳಿಕ ಆ ಗುಹೆಯಲ್ಲಿ ಬಹಳ ದಿವಸವಿರಲಿಲ್ಲ. ಮಾಲೋಜಿಗೆ ಆಕೆಯ ಪ್ರಸನ್ನತೆಯನ್ನು ಪಡೆಯುವ ಹುಚ್ಚು ಹೊಕ್ಕಿತ್ತು. ಆದ್ದರಿಂದ ಆಕೆಯು ಕರೆದಲ್ಲಿಗೆ ಆತನು ಬರಲು ಸಿದ್ಧನಿದ್ದನು. ವಿಮಲೆಯು ಅವನೊಡನೆ ಮೊದಲು ತಮಗೆ ಪರಿಚಯು ವಿದ್ದ ಸಂಸ್ಥಾನಿಕರ ಬಳಿಗೆ ಹೋಗಿ, ಅವರನ್ನು ತನ್ನ ಉದ್ದಿಷ್ಟಹೇತುವು ಸಾಧಿಸು ವಂತೆ ಹುರಿದುಂಬಿಸಬೇಕೆಂದು ಯೋಚಿಸಿದಳು. ಈ ಯೋಚನೆಯನ್ನನುಸರಿಸಿ ಅವಳು 'ಭಂಡಾರೀ' ಎಂಬ ಸಂಸ್ಥಾನಕ್ಕೆ ಹೋದಳು. ಭಂಡಾರೀ ಸಂಸ್ಥಾನಿ ಕನು ಕಡುಗಲಿಯಿದ್ದನು; ಆತನ ದುರ್ಗವಾದರೂ ಭದ್ರವಿತ್ತು; ಆದರೆ ಅವನು ಗುರ್ಜರಸಂಸ್ಥಾನಿಕರ ಅಧಮವೃತ್ತಿಯಿಂದ ಬೆಂದು ಬೆಂಡಾಗಿ ಔದಾಸೀನ್ಯವನ್ನು

ತಾಳಿದ್ದನು; ಸಮ್ರಾಟ ಭೂಮಡನೆಂಬ ಮಸ್ತಾದಿಯು ತನ್ನ ಅತುಲಪರಾಕ್ರಮ ದಿಂದ ಗುರ್ಜರಸಂಸ್ಥಾನಿಕರನ್ನು ಪಾದಾಕ್ರಾಂತವಾಗ ಮಾಡುವನೆಂಬ ಸಂಗತಿ ಯನ್ನು ಕೇಳಿದರೂ, ಅವನಿಗೆ ಸಂತಾಪವು ಹುಟ್ಟಿಪಾಗಿತ್ತು; ಒಮ್ಮೆ ಮನುಷ್ಯನ ಮನಸ್ಸು ಯಾವದೊಂದು ವಿಷಯದಲ್ಲಿ ಔದಾಸೀನ್ಯವನ್ನು ತಾಳಿತೆಂದರೆ, ಮುಂದೆ ಅದು ಆ ವಿಷಯದಲ್ಲಿ ಹುರುಪುಗೊಳ್ಳುವದು ಜಡವೆನಿಸುತ್ತದೆ. ಹೀಗಾಗಿ ಭಂಡಾ ರೀಸಂಸ್ಥಾನಿಕನು ಇದ್ದೂ ಇಲ್ಲದಂತಾಗಿದ್ದನು. ಇಂಥ ಸ್ಥಿತಿಯಲ್ಲಿ ಅವನ ಬಳಿಗೆ ವಿಮಲೆಯು ಸಹಾಯವನ್ನು ಬೇಡಲಿಕ್ಕೆ ಹೋದಳು. ಮಾಲೋಜಿಯೂ ವಿಮ ಲೆಯೂ ಸಮ್ರಾಟನಿಂದಾಗುವ ಅನರ್ಥವನ್ನು ಎಷ್ಟು ಬಣ್ಣಿಸಿ ಹೇಳಿದರೂ ಆ ಕೆಲಸದಲ್ಲಿ ಕೈಹಾಕಲಿಕ್ಕೆ ಆತನು ಸಮ್ಮತಿಯನ್ನು ಕೊಡದಾದನು. ವಿಮಲೆಯು ಬೇಸತ್ತಳು, ಮಾಲೋಜಿಯೂ ಬೇಸತ್ತನು; ಅವರು ಹತಾಶರಾದರು. ಯಾಕಂ ದರೆ, ತಮಗೆ ಸಹಾಯ ಮಾಡಬಹುದಾದ ಸಂಸ್ಥಾನಿಕರಲ್ಲಿ ಈತನನ್ನು ಅವರು ಪ್ರಮುಖನನ್ನಾಗಿ ಭಾವಿಸಿದ್ದರು. ಕಡುಗಲಿಯೂ ಭದ್ರವಾದ ದುರ್ಗವುಳ್ಳವನೂ ಆದ ಭಂಡಾರಿರಾಜನು ಒಪ್ಪಿದರೆ, ನಮ್ಮ ಅರ್ಧ ಕೆಲಸವಾಗುತ್ತದೆಂದು ಅವರು ಲೆಕ ಹಾಕುತ್ತಿದ್ದರು; ಆದರೆ ಪ್ರಥಮಗ್ರಾಸೇ ಮಕ್ಷಿಕಾಪಾತಃ ಎಂಬಂತೆ ಮೊದ ಲಿಗೇ ದೊಡ್ಡ ಉದ್ದರಿಯು ಅಸಮ್ಮತಿಯನ್ನು ತೋರಿಸಲು, ಅವರು ಹತಾಶರಾ ದದ್ದು ಸ್ವಾಭಾವಿಕವೇ ಸರಿ; ಆದರೂ ವಿಮಲೆಯು ಧೈರ್ಯವನ್ನು ಬಿಡಲಿಲ್ಲ. ಅವಳು ಹೇಗಾದರೂ ಮಾಡಿ ಭಂಡಾರೀ ರಾಜನನ್ನು ಹಾದಿಗೆ ತರಬೇಕೆಂದು ಯುಕ್ತಿಪ್ರಯುಕ್ತಿಗಳನ್ನು ಹುಡುಕಹತ್ತಿದಳು; ಮಾಲೋಜಿಯು ಮಾತ್ರ ತೀರ ನಿರಾಶನಾಗಿ ಅಲ್ಲಿಂದ ಹೊರಡುವದಕ್ಕೆ ವಿಮಲೆಗೆ ಆಗಾಗ್ಗೆ ಹೇಳುತ್ತಿದ್ದನು.

ಮುಂದೆ ಎರಡು ದಿವಸಗಳು ಕಳೆದವು. ಭಂಡಾರೀರಾಜನು ಅರಮನೆಯ ಉದ್ಯಾನದಲ್ಲಿ ಒಬ್ಬನೇ ಏನೇನೋ ಯೋಚಿಸುತ್ತ ತಿರುಗಾಡುತ್ತಿದ್ದನು. ಅವನ ಲಕ್ಷ್ಯವು ಸೊಗಸಾದ ಆ ಉದ್ಯಾನದ ಕಡೆಗೆ ಸ್ವಲ್ಪವೂ ಇದ್ದಂತೆ ತೋರಲಿಲ್ಲ. ಮನೋಹರವಾದ ಮಲ್ಲಿಗೆ, ಸೇವಂತಿಗೆ, ಚಂಪಕ ಮೊದಲಾದ ಸೌಗಂಧಿಕಪುಷ್ಪ ಗಳು ಅದೇ ಅರಳಿ, ತಮ್ಮ ಸುಖಮಯ ಪರಾಗವನ್ನು ಗಂಧವಹನಿಗೊಪ್ಪಿಸಿ ಔದಾ ರ್ಯವನ್ನು ವ್ಯಕ್ತಗೊಳಿಸುತ್ತಿದ್ದವು. ಗಂಧವಹನಾದರೂ ಪುಷ್ಪಗಳು ವಿಶ್ವಾಸ ದಿಂದ ಅರ್ಪಿಸಿದ ಆ ಸೌಗಂಧಿಕ ಪರಾಗವನ್ನು ತನ್ನೊಬ್ಬನಿಗೋಸ್ಕರವೇ ಇಟ್ಟು ಕೊಳ್ಳುವ ಸ್ವಾರ್ಥಕ್ಕೆ ಬೀಳದೆ, ನಿಸ್ವಾರ್ಥಬುದ್ಧಿಯಿಂದ ಹಂಚ ಹೊರಟಿರು ವನೋ, ಎಂಬಂತೆ ಅಲ್ಲಲ್ಲಿ ಸುಳಿದಾಡುತ್ತಿದ್ದನು. ನಿಸ್ವಾರ್ಥಬುದ್ಧಿಯ ಗಂಧವ ಹನು ತಂದು ಬೀರಿದ ಸುಖಮಯ ಸುಗಂಧವನ್ನು ಆಘ್ರಾಣಿಸಿ, ತಣಿವುಗೊಂಡ ಪ್ರಾಣಿಮಾತ್ರಗಳು ಆ ಕ್ಷಣದಲ್ಲೇ ಸ್ವರ್ಗಸೌಖ್ಯವನ್ನನುಭವಿಸುತ್ತಿದ್ದವು. ವೃಕ್ಷ

ಗಳ ಚಂದವನ್ನಂತೂ ಬಣ್ಣಿಸಲಸದಳವು; ಅವು ಎಳೆಯ ಚಿಗುರುಗಳು, ಮೊಗ್ಗೆಗಳು, ಹೂಗಳು, ಹೀಚು-ಕಾಯಿಗಳು ಇವುಗಳಿಂದೊಪ್ಪುತ್ತ, ಸೃಷ್ಟಿದೇವನು ತಮಗೆ ಕೊಟ್ಟಿರುವ ನಿಸರ್ಗಸಿದ್ಧವಾದ ರಮಣೀಯತೆಯನ್ನು ತೋರ್ಪಡಿಸುತ್ತಲಿದ್ದವು! ಈ ನಿಸರ್ಗಸಿದ್ಧವಾದ ರಮಣೀಯತೆಯನ್ನು ನೋಡಿ ನಾಚಿಕೆಯಿಂದ ರಾಜಸ್ತ್ರೀಯರು ಕಾಲ್ದೆಗೆದಿರುವರೇನೋ ಎಂಬಂತೆ ಆ ವನದಲ್ಲಿ ರಾಜಸುಂದರಿಯರು ಕಾಣುತ್ತಿರಲಿಲ್ಲ. ಇಂಥ ರಮಣೀಯವೂ ನಿರ್ಜನವೂ ಆದ ಆ ಉಪವನದಲ್ಲಿ ಮೇಲೆ ಹೇಳಿದಂತೆ ಭಂಡಾರಿರಾಜನು ಹೆಜ್ಜೆಯಮೇಲೆ ಹೆಜ್ಜೆಯನ್ನಿಕ್ಕುತ್ತ ಅಲ್ಲಿದ್ದ ಲತಾಮಂಟಪವನ್ನು ಸುತ್ತುವರಿಯುತ್ತಿದ್ದನು. ಅವನ ಮುಖವು ಉದಾಸವಾಗಿತ್ತು. ಅವನು ಶೂನ್ಯದೃಷ್ಟಿಯಿಂದ ಯಾವಾಗಾದರೊಮ್ಮೆ ಆ ಲತಾಮಂಟಪದ ಕಡೆಗೆ ನೋಡುತ್ತಿದ್ದನು.

ರಾಜನು ಹೀಗೆ ಆ ಲತಾಮಂಟಪವನ್ನು ಸುತ್ತುವರಿಯುತ್ತಿರಲು, ಎಷ್ಟೋ ನಿಮಿಷಗಳು ಕಳೆದವು. ಆಗ ಅವನು ಶೂನ್ಯದೃಷ್ಟಿಯಿಂದ ಒಮ್ಮೆ ಆ ಲತಾಮಂಟಪದ ಕಡೆಗೆ ನೋಡಿದನು. ಕೂಡಲೆ ಅವನು ಚಕಿತನಾದನು! ದಿಟ್ಟಿಸಿ ನೋಡುತ್ತಿರಲು, ಅವನ ಕೌತುಕವು ಮತ್ತಿಷ್ಟು ಹೆಚ್ಚಿತು. ಲತಾಮಂಟಪದ ಒಳಭಾಗದಲ್ಲಿ ಓರ್ವ ಸುಂದರಿಯು ನಿರ್ಭಯದಿಂದ ನಿಂತುಕೊಂಡಿದ್ದಳು. ಆಕೆಗೆ ಒಳ್ಳೇ ತಾರುಣ್ಯವಿದ್ದು, ಸ್ವರ್ಗೀಯ ಸ್ತ್ರೀಯರನ್ನು ನಾಚಿಸುವ ಸೌಂದರ್ಯವು ಅವಳ ತಾರುಣ್ಯವನ್ನು ಮತ್ತಿಷ್ಟು ಮೋಹಕವಾಗಿ ಮಾಡಿತ್ತು. ಅವಳ ಮೈಮೇಲೆ ಬೆಲೆಯುಳ್ಳ ಅಲಂಕಾರಗಳಿದ್ದಿಲ್ಲ. ಬೆಲೆಯುಳ್ಳ ವಸ್ತ್ರಗಳಿದ್ದಿಲ್ಲ. ಆದರೂ ಅವಳ ಸೌಂದರ್ಯಕ್ಕೆ ರವಷ್ಟಾದರೂ ಕುಂದುಕವುಂಟಾಗಿರಲಿಲ್ಲ. ಭಂಡಾರೀರಾಜನು ಮೊದಮೊದಲು ಅವಳ ಅದ್ವಿತೀಯ ಸೌಂದರ್ಯವನ್ನು ನೋಡಿಯೇ ಬೆರಗಾಗಿ ನಿಂತನು; ಆದರೆ ಇಂಥ ಈ ಸುರಸುಂದರಿಯು ಎಲ್ಲಿಂದ ಬಂದಳು? ಎಂಬ ವಿಚಾರವು ಹಿಂದುಗಡೆಯಿಂದ ಹುಟ್ಟಲು, ಅವನ ಆ ಕೌತುಕವು ದ್ವಿಗುಣಿತವಾಯಿತು.

ಪ್ರಿಯವಾಚಕರೇ, ಅಪರಿಚಿತ ಆ ರಾಜಉದ್ಯಾನದಲ್ಲಿ ಬಂದ ಆ ಸುಂದರಿಯು ಯಾರೆಂಬ ಬಗ್ಗೆ ನಿಮ್ಮಲ್ಲಿಯೂ ತರ್ಕವಿತರ್ಕಗಳು ನಡೆದಿರಬಹುದು; ಆದರೆ ಭಂಡಾರೀರಾಜನಿಗೆ ಆ ಸ್ತ್ರೀಯು ಅಪರಿಚಿತಳಿದ್ದಂತೆ ನಿಮಗೆ ಅಪರಿಚಿತಳಿರುವದಿಲ್ಲ. ಯಾವ ವಿಮಲಾರಾಣಿಯು ಭಂಡಾರಿರಾಜನ ಸಹಾಯ ಕೇಳುವದಕ್ಕೆ ಮಾಲೋಜಿಯೊಡನೆ ಬಂದಿದ್ದಳೋ, ಅವಳೇ ಇವಳು; ಆದರೆ ಭಂಡಾರೀರಾಜನ ಭೆಟ್ಟಿಗೆ ಬಂದಾಗ ಅವಳು ತನ್ನ ಸ್ತ್ರೀರೂಪವನ್ನು ಆಚ್ಛಾದಿಸಿ, ಪುರುಷವೇಷವನ್ನು ಧರಿಸಿದ್ದಳು. ಆದ್ದರಿಂದ ಆ ರಾಜನಿಗೆ ವಿಮಲೆಯು ಗುರುತು ಹತ್ತಲಿಲ್ಲ.

ಇರಲಿ. ಕೌತುಕದಕ್ಷಣವು ಗತಿಸಿದ ಬಳಿಕ ರಾಜನು ಲತಾಮಂಟಪವನ್ನು ಪ್ರವೇಶಿಸಿ ಆ ಸುಂದರಿಯನ್ನು ಕುರಿತು:—"ತಂಗೀ, ನೀನಾರು? ಇಂಥ ಏಕಾಂತವಾದ ಸ್ಥಳಕ್ಕೆ ನೀನೊಬ್ಬಳೇ ಯಾಕೆ ಬಂದೆ?" ಎಂದು ಪ್ರಶ್ನೆ ಮಾಡಿದನು. ಆತನು ಪ್ರಶ್ನೆ ಮಾಡಿದ್ದೊಂದೇ ತಡ; ದಿಟ್ಟ ವಿಮಲೆಯು ತಟ್ಟನೆ ನುಡಿದಳೇನಂದರೆ:—"ಗುರ್ಜರದೇಶದ ಮರ್ಯಾದಾದೇವತೆಯು ನಾನು; ಇಲ್ಲಿಯ ಎಲ್ಲ ರಾಜಪುರುಷರು ಕೈಗಳಲ್ಲಿ ಬಳೆ ಇಟ್ಟ ಬಳಿಕ, ನಾನು ಇನ್ನು ಮುಂದೆ ಈ ರಾಷ್ಟ್ರವನ್ನೇ ತೊಲಗಬೇಕಾಗಿರುವದು. ಇಷ್ಟೇ ಸಂಗತಿಯನ್ನು ನಿಮ್ಮ ಕಿವಿಯ ಮೇಲೆ ಹಾಕತಕ್ಕದ್ದಿದ್ದದರಿಂದ, ಇಲ್ಲಿಯ ವರೆಗೆ ಬರಬೇಕಾಯಿತು. ಆಯಿತು! ನನ್ನ ಕೆಲಸವಾಯಿತು!! ಇನ್ನು ನಾನು ಹೊರಡುವೆನು."

ಸ್ತ್ರೀಯ ಈ ಮಾತುಗಳನ್ನು ಕೇಳಿ ರಾಜನು ತಟಸ್ಥನಾದನು. ಈ ಹೆಣ್ಣುಮಗಳು ಹೀಗೇಕೆ ನುಡಿಯುವಳು? ಇವಳು ನಿಜವಾಗಿಯೂ ಯಾರಾಗಿರಬಹುದು? ಎಂದು ಕ್ಷಣಹೊತ್ತು ಯೋಚಿಸಿ, ಆಕೆಯನ್ನು ಕುರಿತು:—

ರಾಜ:—ದೇವೀ, ಈ ಸಂಗತಿಯನ್ನು ನನ್ನ ಕಿವಿಯ ಮೇಲೆ ಹಾಕಲು ಕಾರಣವೇನು?

ಸ್ತ್ರೀ:—ನೀವೊಬ್ಬರು ಗುರ್ಜರ ಸಂಸ್ಥಾನಿಕರಲ್ಲಿ ಪ್ರಮುಖರಿದ್ದದರಿಂದ!

ರಾಜ:—ಅದಿರಲಿ, ನೀವು ಯಾರೆಂಬದು ನನಗೆ ಗೊತ್ತಾಗಲೊಲ್ಲದು.

ಸ್ತ್ರೀ:—ನಿಮ್ಮ ಆಶ್ರಯವನ್ನು ಹಾರೈಸಿ, ಯಾರು ನಿಮ್ಮ ಬಳಿಗೆ ಬಂದಿರುವರೋ ಅವರಲ್ಲಿ ನಾನೊಬ್ಬಳು.

ರಾಜ:—(ಚಕಿತನಾಗಿ) ನಮ್ಮ ಬಳಿಗೆ ಬಂದವರಿಬ್ಬರೂ ಪುರುಷರಿದ್ದು, ಸ್ತ್ರೀಯರಾದ ನೀವೆಲ್ಲಿಂದ ಬಂದಿರಿ?

ಸ್ತ್ರೀ:—(ತನ್ನ ಎಲ್ಲ ಸಾಗ್ರಸಂಗತಿಯನ್ನು ಹೇಳಿದಳು.)

ರಾಜನು ವಿಮಲೆಯ ವೃತ್ತಾಂತವನ್ನು ಶ್ರವಣ ಮಾಡಿ ಸ್ವಲ್ಪ ಕಳವಳಗೊಂಡನು. ಗುರ್ಜರ ರಾಷ್ಟ್ರದಲ್ಲಿ ಕಾಲಿಟ್ಟ ಚಾಲುಕ್ಯಸಮ್ರಾಟನು ಅನ್ಯಾಯಿ ಪುರುಷನೆಂದು ಅವನಿಗೆ ಅನಿಸತೊಡಗಿತು. ಆಗ ಅವನ ಮುಖಲಕ್ಷಣದಲ್ಲಿ ವಿಲಕ್ಷಣ ಕ್ರಾಂತಿಯುಂಟಾಗತೊಡಗಿತು. ಅವನ ಮನಸ್ಸು ವಿಚಾರಮಗ್ನವಾಯಿತು. ಇಂಥ ಸಂಧಿಯನ್ನೇ ನಿರೀಕ್ಷಿಸುತ್ತಿದ್ದ ವಿಮಲೆಯು ಬಳ್ಳೇ ಮಾರ್ಮಿಕವಾಗಿ ನುಡಿದಳೇನಂದರೆ:—ಸೋದರರೇ, ನಿಮ್ಮಂಥ ಬಲಸಂಪನ್ನರು ಕೈಮುಚ್ಚಿಕೊಂಡು ಕುಳಿತು, ಪರಕೀಯರು ನಿಮ್ಮ ಅಕ್ಕ-ತಂಗಿಯರ ಮಾನ ಕಳೆವುದನ್ನು ನೋಡಬಹುದೇ? ಕಳ್ಳನು ಮನೆಯನ್ನು ಹೊಕ್ಕು ಧನವನ್ನು ಲೂಟಿ ಮಾಡುತ್ತಿರಲು, ಹಾಗು ಮಾನಿನಿಯರನ್ನು ಹಿಡಿದೆಳೆಯುತ್ತಿರಲು, ಇದಾವುದನ್ನೂ ಲೆಕ್ಕಿಸದೆ

ಮನೆಯ ರಕ್ಷಕರಾದ ಪುರುಷರು ನಿದ್ದೆ ಮಾಡಬಹುದೇ? ಹಾಯ್! ಹಾಯ್! ಗಂಡಸರಾಗಿ ಹುಟ್ಟಿ ಭಗಿನಿಯರ ಮರ್ಯಾದೆಯನ್ನುಳಿಸಲಿಕ್ಕಾಗದ ಇದ್ದಂಥ ಗಂಡಸರ ಜೀವನಕ್ಕೆ ಧಿಃಕಾರವು!"

ವಿಮಲೆಯ ಈ ಮಾತುಗಳನ್ನು ಕೇಳಿಯೂ ಆಕೆಯ ಮುಖಲಕ್ಷಣವನ್ನು ನೋಡಿಯೂ ರಾಜನಿಗೆ ಒಂದು ತರದ ಕನಿಕರಭಾವವುಂಟಾಯಿತು. ಆಕೆಯು ತನ್ನ ವಾಕ್‌ಚಾತುರ್ಯದಿಂದ ತನ್ನ ವೃತ್ತಾಂತವನ್ನು ಹೇಳುವಾಗ ಈ ಮೊದಲೇ ರಾಜನ ಮನಸ್ಸು ತನ್ನ ವಿಷಯವಾಗಿಯೂ ತನ್ನ ಉದ್ದಿಷ್ಟಕಾರ್ಯದ ವಿಷಯವಾಗಿಯೂ ಸಹಾನುಭೂತಿಯುಳ್ಳದ್ದಾಗುವಂತೆ ಮಾಡಿದ್ದಳು. ಆದ್ದರಿಂದ ಪ್ರಸ್ತುತ ರಾಜಕರಣದಲ್ಲಿ ಉದಾಸೀನನಾದ ಭಂಡಾರೀ ರಾಜನ ಮನಸ್ಸಿನಲ್ಲಿ ಬಗೆಬಗೆಯ ವಿಚಾರಗಳುಂಟಾಗಿದ್ದವು. ಮೇಲೆ ಹೇಳಿದಂತೆ ವಿಮಲೆಯು ಮಾತಾಡಿದ ಬಳಿಕಂತೂ ಆತನಿಗೆ ಅತ್ಯಂತ ನಾಚಿಕೆಯುಂಟಾಯಿತು. ಗುರ್ಜರದೇಶದಲ್ಲಿ ನಾಮಾಂಕಿತರೆನಿಸುವ ತಾವಿಷ್ಟು ಜನ ಸಂಸ್ಥಾನಿಕರಿರುತ್ತಿರಲು, ಪರಚಕ್ರವು ಎಗ್ಗಿಲ್ಲದೆ ಒಳನುಗ್ಗುವದು ಎಷ್ಟು ಅಪಮಾನಕರವೆಂಬದು ಅವನ ಮನಸ್ಸಿಗೆ ಹೊಳೆಯಿತು. ಅದರಲ್ಲಿಯೂ ಶತ್ರುಗಳು ಗುರ್ಜರ ರಾಜಸ್ತ್ರೀಯರ ಮೇಲೆ ಅತ್ಯಾಚಾರ ನಡಿಸಿರುವರೆಂಬದನ್ನು ಸ್ಮರಿಸಿಯಂತು ಅವನ ಕೋಪಾಗ್ನಿಯು ಪ್ರಜ್ವಲಿಸಿತು. ಆಗ ಅವನ ಮುಖವು ಅತ್ಯುಗ್ರವಾಯಿತು; ಕಣ್ಣುಗಳು ಕೆಂಪಗಾದವು. ತುಟಿಯು ನಡುಗಹತ್ತಿತು; ಅವನ ಈ ಸ್ಥಿತಿಯನ್ನು ನೋಡಿ ವಿಮಲೆಗೆ ತುಂಬಾ ಸಂತೋಷವಾಯಿತು. ಅವಳು ತನ್ನ ಸಂತೋಷವನ್ನು ಹೊರಪಡಿಸದೆ ತನ್ನ ಗಂಭೀರಭಾವವನ್ನು ಮೊದಲಿಗಿಂತಲೂ ಹೆಚ್ಚು ವಿಕಾಸಗೊಳಿಸಿದಳು. ಅವಳು ಹೀಗೆ ಗಂಭೀರಭಾವವನ್ನು ತಳೆಯುತ್ತಿರಲು, ರಾಜನು ಆಕೆಯನ್ನು ಕುರಿತು ನುಡಿದನೇನಂದರೆ:—"ತಂಗೀ, ವಿಮಲಾದೇವಿ, ನಿನ್ನಂಥ ಸ್ತ್ರೀಗೆ ಇಷ್ಟೊಂದು ಪೌರುಷವಿದ್ದ ಬಳಿಕ ಪುರುಷರಾದ ನಾವು ಈ ಕೆಲಸದಲ್ಲಿ ಉದಾಸೀನ ಮಾಡುವದು ಅತ್ಯಂತ ಲಾಂಛನಾಸ್ಪದವಿರುತ್ತದೆ. ಅನ್ಯಾಯವು ನನಗೆ ತಿಲಮಾತ್ರವಾದರೂ ಸೇರುವದಿಲ್ಲ. ಯಾವನು ಅನ್ಯಾಯ ಮಾಡುವನೋ, ಆಗಲೇ ಅವನ ಶಾಸನ ಮಾಡಬೇಕೆಂಬ ವಿಚಾರದಲ್ಲಿ ನನ್ನ ಮನಸ್ಸು ವಿಶೇಷ ಉತ್ಸುಕವಾಗಿರುತ್ತದೆ. ನಮ್ಮ ಗುರ್ಜರ ಸಂಸ್ಥಾನಿಕಬಂಧುಗಳು ಕ್ಷುದ್ರವಿಚಾರಪರರಾದ್ದರಿಂದ, ನನಗೆ ಇವರ ಶಾಸನವು ಆಗಲೆಂಬ ಇಚ್ಛೆಯಿದ್ದದರಿಂದ, ಅನಾಯಾಸವಾಗಿ ಆದ ಚಾಲುಕ್ಯಸಮ್ರಾಟನ ಆಗಮನದಿಂದ ನಾನು ಸಮಾಧಾನವನ್ನು ತಾಳಿದ್ದೆನು; ಯಾಕಂದರೆ ನಾನು ಮಾಡಬೇಕಾದ ಕೆಲಸವನ್ನೇ ಅವನು ಮಾಡುತ್ತಾನೆಂದು ತಿಳಿದಿದ್ದೆನು. ಆದನೆ ಆತನು ಅನ್ಯಾಯೀ ಸಂಸ್ಥಾನಿಕರನ್ನಷ್ಟೇ ದಂಡಿಸುವ ಕೆಲಸ ಮಾಡದೆ, ರಾಜ್ಯಗಳಿ

ಸುವ ಮಹತ್ವಾಕಾಂಕ್ಷೆಗೆ ಬಿದ್ದದ್ದಲ್ಲದೆ, ರಾಜಸುಂದರಿಯರ ಮಾನಹರಣಕ್ಕೆ ಪ್ರಯತ್ನ ಪಡುತ್ತಿರುವನೆಂಬದು ಕೇವಲ ನಿನ್ನಿಂದಲೇ ನನಗೆ ಗೊತ್ತಾಯಿತು. ತಂಗೀ, ಸ್ತ್ರೀಯರ ಸತೀತ್ವದ ಸಂರಕ್ಷಣವು ಯಾವ ದೇಶದಲ್ಲಿ ಮಾಡಲ್ಪಡುವದಿಲ್ಲವೋ, ಆ ದೇಶದಲ್ಲಿ ಸಂಕರವರ್ಣದ ಉತ್ಪತ್ತಿಯಾಗುವದು. ಇದರಿಂದ ಪಿಂಡೋತ್ಪತ್ತಿಯು ದೂಷಿತವಾಗುವದು ಆದ್ದರಿಂದ ಹಲವು ಪ್ರಯತ್ನದಿಂದ ಸ್ತ್ರೀಯರ ಮರ್ಯಾದೆಯನ್ನು ಕಾಯಬೇಕೆಂದು ಪ್ರಾಚೀನರ ಮತವಿರುತ್ತದೆ. ಇರಲಿ; ಗುರ್ಜರ ಸ್ತ್ರೀಯರೆಂದರೆ ಆಟಿಗೆಯ ಒಡವೆಗಳೆಂದು ತಿಳಿದಿದ್ದ ಚಾಲುಕ್ಯ ಸಮ್ರಾಟನಿಗೆ ಗುರ್ಜರ ಭೂಪತಿಗಳ ಉಗುರು ಎಷ್ಟಿರುತ್ತದೆಂಬದನ್ನು ತೋರಿಸುವದು ಅವಶ್ಯವಿರುತ್ತದೆ; ದೇವೀ, ನೀನು ಇನ್ನು ಮುಂದೆ ಚಿಂತೆ ಮಾಡಬೇಡ; ನನಗೆ ಯಾರೂ ಸಹಾಯಕರಿಲ್ಲವೆಂದು ಚಿಂತಿಸಬೇಡ; ನಾನು ನಿನಗೆ ಬೇಕಾದ ಸಹಾಯವನ್ನು ಒದಗಿಸಿ ಕೊಡುತ್ತೇನೆ; ಹಾಗು ನಾನು ನನ್ನ ಸ್ವಂತ ದಂಡನ್ನು ತಕ್ಕೊಂಡು ದಂಡಯಾತ್ರೆಯನ್ನು ಬೆಳಿಸಿ, ಸಮ್ರಾಟನ ಸೊಕ್ಕನ್ನು ಮುರಿಯುತ್ತೇನೆ. ನಿನಗೆ ಮಾಲೋಜಿರಾಯನು ಎಲ್ಲಿ ಕೂಡಿದನು? ಅವನ ಹಾಗು ನಿನ್ನ ಋಣಾನುಬಂಧವು ಬೆಳೆಯುಲಿಕ್ಕೆ ನಿಮಿತ್ತವೇನು?

ವಿಮಲೆ:— ಸೋದರನೇ, ನಿನಗೂ ನನಗೂ ಋಣಾನುಬಂಧವು ಬೆಳೆಯುಲಿಕ್ಕೆ ಯಾವ ಕಾರಣವಿರುವದೋ, ಅದೇ ಕಾರಣದಿಂದಲೇ ಮಾಲೋಜಿಗೂ ನನಗೂ ಋಣಾನುಬಂಧವು ಬೆಳೆದಿರುವದು. (ಎಂದು ನುಡಿದು, ಮಾಲೋಜಿಗೂ ತನಗೂ ಭೆಟ್ಟಿಯಾದ ಪ್ರಸಂಗದ ಸಮಗ್ರ ವೃತ್ತಾಂತವನ್ನು ಹೇಳಿದಳು.)

ರಾಜ: - ವಿಮಲೇ, ನಿನ್ನ ಚರಿತ್ರವು ವಿಚಿತ್ರವಾಗಿ ತೋರುತ್ತದೆ. ನೀನು ಸಾಮಾನ್ಯ ಸ್ತ್ರೀಯಿರುವದಿಲ್ಲ.

ಈ ಮೇರೆಗೆ ಅವರಿಬ್ಬರ ಸಂಭಾಷಣವು ನಡೆದಿರಲು ಭಗವಾನ್ ಸೂರ್ಯನು ಪಶ್ಚಿಮಕಡಲನ್ನು ಸೇರಿದನು. ಸುಮನೋಹರವಾದ ಸಂಧ್ಯಾರಾಗವು ಒಪ್ಪತೊಡಗಿತು. ಬರಬರುತ್ತ ಅದು ಕೃಷ್ಣವರ್ಣವನ್ನು ಹೊಂದತೊಡಗಿತು. ಆಗ ರಾಜನು ವಿಮಲೆಯೊಡನೆ ಅರಮನೆಗೆ ನಡೆದನು. ವಿಮಲೆಯು ಲಗುಬಗೆಯಿಂದ ಮಾಲೋಜಿಯ ಬಳಿಗೆ ಹೋಗಿ, ನಡೆದ ಎಲ್ಲ ಸಂಗತಿಗಳನ್ನು ತಿಳಿಸಿದಳು. ಮಾಲೋಜಿಯು ವಿಮಲೆಯ ಕಣ್ಣುತಪ್ಪಿಸಿ, ರಾಜನಿಗೂ ಕಾಣದಂತೆ ಆ ಉದ್ಯಾನದಲ್ಲಿ ಅಡಗಿಕೊಂಡು, ಅವರಿಬ್ಬರ ಸಂಭಾಷಣವನ್ನು ಸಂಪೂರ್ಣವಾಗಿ ಕೇಳಿದ್ದನು. ವಿಮಲೆಯ ಹೃದಯದಲ್ಲಿ ಎಷ್ಟು ಪವಿತ್ರತೆಯಿರುವದೆಂಬದನ್ನು ಪರೀಕ್ಷಿಸುವದು ಮಾಲೋಜಿಯ ಉದ್ದೇಶವಾಗಿತ್ತು; ಆದರೆ ವಿಮಲೆಗೆ ಈಗ ಯಾವ ವಿಕಾರಗಳೂ ತೊಂದರೆ ಕೊಡುವ ಹಾಗಿದ್ದಿಲ್ಲ; ಯಾಕಂದರೆ ಒಮ್ಮೆ ಅವಳು

ಸಮ್ರಾಟ ಭೂಪಡನಿಗೆ ಮನಸೋತು ಭಗ್ನಮನೋರಥಳಾಗಿದ್ದಳಲ್ಲದೆ, ಯಾವ ಭೂಪಡನ ಮೂರ್ತಿಯನ್ನು ಹೃದಯದಲ್ಲಿಟ್ಟುಕೊಂಡು ಪ್ರೀತಿಸುತ್ತಿದ್ದಳೋ, ಅದೇ ಮೂರ್ತಿಯನ್ನು ನಾಶಗೊಳಿಸಲು ಈಗ ಆಕಾಶ-ಪಾತಾಳಗಳನ್ನು ಒಂದು ಮಾಡತೊಡಗಿದ್ದಳು. ಆಕೆಯ ಮನಸ್ಸು ಸರ್ವದಾ ಭೂಪಡನನ್ನು ನಾಶಗೊಳಿಸುವ ಉಪಾಯಗಳನ್ನೇ ಚಿಂತಿಸುತ್ತಿತ್ತು. ಆದ್ದರಿಂದ ಅವಳಲ್ಲಿ ಅನ್ಯಮನೋವಿಕಾರಗಳು ತೋರದಿರುವದು ಸ್ವಾಭಾವಿಕವಾಗಿತ್ತು. ಮಾಲೋಜಿಯು ವಿಮಲೆಯನ್ನು ಭೂಲೋಕದ ದೇವತೆಯೆಂದು ಭಾವಿಸಿದನು. ಆಕೆಯ ಮಾತಿನಿಂದ ಭಂಡಾರೀ ರಾಜನು ಹಾದಿಗೆ ಒಂದು ಸಹಾಯ ಮಾಡಲು ಒಪ್ಪಿಕೊಂಡದ್ದನ್ನು ಕೇಳಿಯಂತೂ ಆತನಿಗೆ ಅವಳಲ್ಲಿ ಅತ್ಯಂತ ಅಭಿಮಾನ ಪುರಸ್ಸರವಾದ ಪೂಜ್ಯಬುದ್ಧಿಯು ಉತ್ಪನ್ನವಾಗಿತ್ತು. ಹೀಗೆ ಮಾಲೋಜಿಯು ಮನದಲ್ಲಿಯೇ ಸಂತೋಷಪಡುತ್ತಿರಲು, ಮೇಲೆ ಹೇಳಿದಂತೆ ಆಕೆಯು ಅವನ ಬಳಿಗೆ ಬಂದು ನಡೆದ ವೃತ್ತಾಂತವನ್ನು ಹೇಳಲು ಮಾಲೋಜಿಯು ಅರಿಯದವನಂತೆ ನಟಿಸಿ, ಆಕೆಯನ್ನು ಮನಃಪೂರ್ವಕವಾಗಿ ಗೌರವಿಸಿದನು. ಅಷ್ಟರಲ್ಲಿ ಭಂಡಾರೀರಾಜನಿಂದ ಪ್ರೇಷಿತನಾದ ದೂತನು ಬರಲು, ವಿಮಲೆಯೂ ಮಾಲೋಜಿಯೂ ಆತನೆಡೆಗೆ ನಡೆದರು. ಒಂದು ಸುಂದರವಾದ ದಿವಾಣಖಾನೆಯಲ್ಲಿ ಕುಳಿತು ಆ ಮೂವರೂ ಬಹಳ ಹೊತ್ತಿನ ವರೆಗೆ ಆಲೋಚಿಸಿದರು. ಕಡೆಗೆ ಆ ಮೂವರ ವಿಚಾರದ ಸಾರವೆಂದು ಒಂದು ಕಪಟತಂತ್ರವು ಹೊರಹೊರಟಿತು. ಈ ತಂತ್ರವೇ ಸಮ್ರಾಟನ ನಾಶಕ್ಕೆ ''ರಿಪುಕುಠಾರ' ವೆಂಬ ಔಷಧವೆಂದು ವಿಮಲೆಯು ಹಿರಿ ಹಿರಿ ಹಿಗ್ಗಿದಳು.

---

## ೧೪ ಹೇಜೀಬಸ ಆಗಮನ.

ಅರ್ಬೂಪರ್ವತದ ಭಯಂಕರ ಪ್ರದೇಶವು. ಮುಗಿಲನ್ನು ಮುಟ್ಟುತ್ತಿರುವ ಶಿಖರಗಳು ಧರಿತ್ರಿಯ ದೂರನ್ನು ಪರಮೇಶ್ವರನಿಗೆ ತಿಳಿಸಲು ಹೊರಟ ಪ್ರತಿನಿಧಿಗಳಂತೆ ತೋರುತ್ತಿದ್ದವು. ಕಗ್ಗತ್ತಲೆಯು; ಅದರಲ್ಲಿಯೂ ಅಮಾವಾಸ್ಯೆಯು; ಕೇಳುವದೇನು? ಕತ್ತಲೆಗೆ ಕುಶಲ ಕಾರಾಗಿರನಿಂದ ಒಪ್ಪ ಹಾಕಿಸಿದಂತಾಗಿತ್ತು. ಸರ್ವತ್ರದಲ್ಲಿಯೂ ಶಾಂತಿಯ ಸಾಮ್ರಾಜ್ಯ; ನಡುನಡುವೆ ಶ್ವಾಪದಗಳ ಗುಡುಗಿನಿಂದಲೂ ಪಕ್ಷಿಗಳ ಕೂಗಿನಿಂದಲೂ ಮಾತ್ರ ಆ ಶಾಂತತೆಗೆ ಭಂಗವುಂಟಾಗುತ್ತಿತ್ತು. ಇಂಥ ಆ ಘೋರಾರಣ್ಯದಲ್ಲಿ ಒಂದು ಗುಹೆಯ ಮುಂದೆ ನಾಲ್ವರು ಏನನ್ನೋ ಆಲೋಚಿಸುತ್ತ ಕುಳಿತಿದ್ದರು. ಆ ನಾಲ್ವರೂ ಮುಖಲಕ್ಷಣದಿಂದ ವೀರರಾಗಿ ತೋರುತ್ತಿದ್ದರು; ಆದರೆ ಅವರಲ್ಲಿ ಒಬ್ಬನ ಮುಖದ ಮೇಲೆ ಮಾತ್ರ ಕೋಮಲ ಕಳೆಯು ಹೊಳೆಯುತ್ತಿತ್ತು. ಆ ನಾಲ್ವರೂ ಕೈಗಳಲ್ಲಿ ಜಡವಾದ

ಖಡ್ಗಗಳನ್ನು ಧರಿಸಿದ್ದರು. ಮೈಮೇಲೆ ಉಕ್ಕಿನಂಗಿಗಳನ್ನು ಹಾಕಿದ್ದರು. ಅವರ ಆಗಿನ ಸ್ವಾಭಾವಿಕ ಸ್ಥಿತಿಯನ್ನು ನೋಡಿದರೆ ಅವರು ಯಾವದೋ ಒಂದು ಮಹತ್ವದ ಕಾರ್ಯಕ್ಕಾಗಿ ಆ ವನಾಂತರವನ್ನು ಸೇರಿದಂತೆ ಕಂಡು ಬರುತ್ತಿತ್ತು. ಅವರ ಮುಂದೆ ಅದೇ ಆರಿದ ಗೂರವೆಯ ಕಟ್ಟಿಗೆಗಳ ತುಂಡುಗಳು ಬಿದ್ದಿದ್ದವು. ಅವುಗಳ ಹೊಗೆಯು ಸುತ್ತಲೂ ಇಡುಗಿತ್ತು. ಆಗ ಒಬ್ಬನು ತನ್ನ ಬಳಿಯಲ್ಲಿ ಕುಳಿತಿದ್ದ ಮತ್ತೊಬ್ಬನನ್ನು ಕುರಿತು:-"ರಾಮಸಿಂಗ, ಕಟ್ಟಿಗೆಗಳು ಎಲ್ಲವೂ ಆರಿದವು; ಇಕೋ, ಇದರಲ್ಲಿ ಇನ್ನೂ ಬೆಂಕಿಯು ವಿಶೇಷವಾಗಿರುವದು. ಬೇಗನೆ ಇದನ್ನು ಹೊತ್ತಿಸಿ ಉರಿ ಮಾಡು. ಇನ್ನೂ ಮುಂದೆ ಕೆಲಸಗಳು ಬಹಳ ಇರುವವು" ಎಂದು ನುಡಿದನು. ಕೂಡಲೆ ರಾಮಸಿಂಗನು ಆರುತ್ತಿರುವ ಆ ಕಟ್ಟಿಗೆಯನ್ನು ತಕ್ಕೊಂಡು ಗಾಳಿಗೆ ಚನ್ನಾಗಿ ಬೀಸಿ ಉರಿಮಾಡಿದನು. ಅದು ಧಾಳಾಗಿ ಉರಿಯತೊಡಗಲು, ಅದರ ಸಹಾಯದಿಂದ ಮತ್ತೆ ಮೂರು ಕಟ್ಟಿಗೆಗಳನ್ನು ಹೊತ್ತಿಸಿದನು. ಆ ನಾಲ್ಕು ಕಟ್ಟಿಗೆಗಳು ದೀಪದಂತೆ ಉರಿಯ ತೊಡಗಿದವು. ಅವುಗಳ ಸ್ವಚ್ಛವಾದ ಪ್ರಕಾಶದಿಂದ ಅವರು ಕುಳಿತ ಆ ಪ್ರದೇಶವು ನಿಚ್ಚಳವಾಗಿ ಕಾಣತೊಡಗಿತು. ಆ ಗವಿಯ ಮುಖವೂ ಪ್ರಶಸ್ತವಾಗಿ ತೋರಿತು.

ರಾಮಸಿಂಗನು ಪ್ರತಿಯೊಬ್ಬರ ಕೈಯಲ್ಲಿ ಒಂದೊಂದು ಉರಿಯುವ ಕಟ್ಟಿಗೆಯನ್ನು ಕೊಟ್ಟು, ತಾನೂ ಒಂದು ಕಟ್ಟಿಗೆಯನ್ನು ಹಿಡಿದನು. ಬಳಿಕ ಅವನು ನುಡಿದನೇನಂದರೆ:—"ಮಾಲೋಜಿರಾಯರೇ, ಸುಮ್ಮನೆ ಯಾಕೆ ಹೊತ್ತುಗಳೆಯುವದು? ಈಗ ಅರ್ಧ ರಾತ್ರಿಯು ಕ್ರಮಿಸಿ ಹೋಗಿರುವದು. ಏನಾಗುವದೂ ಇನ್ನುಳಿದ ಅರ್ಧರಾತ್ರಿಯಲ್ಲಿ ಆಗಲೇ ಬೇಕು. ಆದ್ದರಿಂದ ನೀವು ಬಂದ ಕಾರ್ಯವನ್ನು ಬೇಗನೆ ಮುಗಿಸಿಕೊಳ್ಳಿರಿ"

ರಾಮಸಿಂಗನು ಈ ಅವಸರವನ್ನು ನೋಡಿ ಮಾಲೋಜಿಯು ಸ್ವಲ್ಪ ಸಿಟ್ಟಿಗೆ ಬಂದನು. ಅವನು ಒಮ್ಮೆಲೆ ಅವನ ಮೈಮೇಲೆ ಹೋಗಿ:-"ನಮ್ಮ ಮೇಲೆ ಅಧಿಕಾರ ನಡಿಸಲಿಕ್ಕೇ ನಿಮ್ಮ ಮಹಾರಾಜರು ನಿನ್ನನ್ನು ಕಳಿಸಿರುವರೇನು? ನಿನ್ನ ಕೆಲಸವು ನಾವು ಹೇಳಿದಷ್ಟು ಕೇಳುವದಿರುತ್ತದೆ. ನಮ್ಮ ಕೆಲಸದ ರಹಸ್ಯವು ನಿನಗೇನು ಗೊತ್ತು?" ಎಂದು ನುಡಿದನು. ಸಿಟ್ಟಿನ ಸ್ವಭಾವದ ರಾಮಸಿಂಗನಿಗೆ ಮಾಲೋಜಿಯ ಈ ಅಪಮಾನವು ಸಹನವಾಗಲಿಲ್ಲ. ಕೆಲವು ಕ್ಷುದ್ರ ಜನರ ತಲೆಯು ಕ್ಷುಲ್ಲಕ ಸಂಗತಿಯಿಂದಲೂ ಕಾಯ್ದು ತಪ್ತವಾಗುತ್ತಿರುತ್ತದೆ. ಅಂಥ ಜನರ ಕೂಡ ಹೇಗೆ ನಡಕೊಳ್ಳಬೇಕೆಂಬ ತಾರತಮ್ಯವು ನಡಿಸಿಕೊಳ್ಳುವವನಲ್ಲಿ ಇಲ್ಲದಿದ್ದರೆ ಭಯಂಕರವಾದ ಅನರ್ಥವುಂಟಾಗುವದು. ಅದರಂತೆ ರಾಮಸಿಂಗ ಮಾಲೋಜಿಯ ನಡುವೆ ಉಂಟಾದ ಕ್ಷುದ್ರ ಪ್ರಂಗವೇ ಬೆಳೆದು, ಏಕೋಪಕ್ಕೆ

ಹೋಯಿತು. ಪ್ರಸ್ತುತ ಕೆಲಸವು ಒತ್ತಟ್ಟಿಗೆ ಉಳಿದು ಇದೇನು ಹೊಸ ಗೊಂದಲವುಂಟಾಯಿತೆಂದು ಉಳಿದಿಬ್ಬರಿಗೆ ಅಸಹ್ಯವೆನಿಸಿತು. ಅವರಲ್ಲಿ ಒಬ್ಬನು ಮಾಲೋಜಿಗೂ ಇನ್ನೊಬ್ಬನು ರಾಮಸಿಂಗನಿಗೂ ತಿಳಿಹೇಳಿ, ಅವರಿಬ್ಬರ ಜಗಳವನ್ನು ನಂದಿಸಿದರು. ಬಳಿಕ ಅವರೆಲ್ಲರೂ ಕೈಯೊಳಗಿನ ಬೆಳಕಿನ ಸಹಾಯದಿಂದ ಗವಿಯನ್ನು ಪ್ರವೇಶಿಸಿದರು. ರಾಮಸಿಂಗನು ಎಲ್ಲರಿಗಿಂತಲೂ ಮುಂದೆ ಇದ್ದುದರಿಂದ ಅವನ ಮೇಲೆ ಒಂದು ಗಂಡಾಂತರವು ಬಂದಿತು. ಜನರ ಸುಳಿದಾಟವಿಲ್ಲದ ಆ ಗವಿಯಲ್ಲಿ ಆಕಳಿಸುತ್ತ ಒಂದು ದೊಡ್ಡ ಹುಲಿಯು ಮಲಗಿಕೊಂಡಿತ್ತು. ಅದು ಜನರ ಗದ್ದಲಕ್ಕೆ ಭಯಗೊಂಡು, ರಾಮಸಿಂಗನ ಮೇಲೆ ಹಾರಿತು. ರಾಮಸಿಂಗನಾದರೂ ಶೂರನಿದ್ದನು; ಆದರೆ ಅಕಸ್ಮಾತ್ ಒದಗಿದ ಆ ಪ್ರಸಂಗದಿಂದ ಅವನು ಗಾಬರಿಯಾದನು. ಹುಲಿಯು ಅವನ ಸಮಾಚಾರ ತಕ್ಕೊಳ್ಳದೆ ಬಿಡದೆಂಬ ಡೌಲು ತೋರಿತು; ಆದರೆ ಮಾಲೋಜಿಯು ಪ್ರಸಂಗಾವಧಾನದಿಂದ ತನ್ನ ಕೈಖಡ್ಗವನ್ನು ಪ್ರಯೋಗಿಸಿ, ಒಂದೇ ಹೊಡತಕ್ಕೆ ಆ ಪ್ರಚಂಡ ಹುಲಿಯನ್ನು ಎರಡು ತುಂಡು ಮಾಡಿದನು. ಮಾಲೋಜಿಯ ಈ ಸಾಮರ್ಥ್ಯವನ್ನು ನೋಡಿ ಎಲ್ಲರೂ ಬೆರಗಾದರು. ಅದರಲ್ಲಿಯೂ ವಿಶೇಷವಾಗಿ ರಾಮಸಿಂಗನು ಆಶ್ಚರ್ಯಪಟ್ಟು ಆತನ ವಿಷಯವಾಗಿ ಅತ್ಯಂತ ಕೃತಜ್ಞತೆಯನ್ನು ವ್ಯಕ್ತಗೊಳಿಸಿದನು. ಈ ಕ್ಷಣಕ್ಕೆ ಮೊದಲು ಅವರು ಪರಸ್ಪರರನ್ನು ವಕ್ರದೃಷ್ಟಿಯಿಂದ ನೋಡುತ್ತಿದ್ದರು; ಆದರೆ ಜೀವದ ಮೇಲಿನ ಪ್ರಸಂಗವನ್ನು ನೀಗಲಾಡಿದ್ದರಿಂದ ರಾಮಸಿಂಗನು ಪ್ರಸನ್ನನಾಗಿ, ಮಾಲೋಜಿಯನ್ನು ಕೊಂಡಾಡಹತ್ತಿದನು. ವಿಚಿತ್ರಸ್ವಭಾವದ ಜನರ ಸ್ಥಿತಿಯು ಲೋಕದಲ್ಲಿ ಹೀಗೆಯೇ ಇರುತ್ತದೆ!

ಈ ಹುಲಿಯ ಪ್ರಸಂಗವು ಅಕಸ್ಮಾತ್ ಒದಗಿ ರಾಮಸಿಂಗನು ಮಾಲೋಜಿಯಿಂದ ಉಪಕೃತನಾದದ್ದನ್ನು ನೋಡಿ, ಕೋಮಲ ಕಳೆಯುಳ್ಳ ಪುರುಷನಿಗೆ ತುಂಬಾ ಸಂತೋಷವಾಯಿತು. ಯಾಕಂದರೆ ರಾಮಸಿಂಗನಲ್ಲಿ ಮಾಲೋಜಿಯ ವಿಷಯಕ್ಕೆ ಮತ್ಸರಭಾವವುಂಟಾಗಿದ್ದರೆ, ಅವರ ಕಾರ್ಯಕ್ಕೆ ಕೆಲಮಟ್ಟಿಗೆ ಹಾನಿಯೊದಗುವ ಸಂಭವವಿತ್ತು. ಇರಲಿ. ಪ್ರಸಂಗವು ಸಕ್ಕರೆಯಾತಾಗಲು, ರಾಮಸಿಂಗನು ಅಂಜುತ್ತಂಜುತ್ತ ಗವಿಯಲ್ಲಿ ಒಳಹೊಕ್ಕನು. ಅವನ ಹಿಂದಿನಿಂದ ಎಲ್ಲರೂ ಒಳಹೊಕ್ಕರು. ಗವಿಯು ಪ್ರಶಸ್ತವಾಗಿತ್ತು. ಅದರ ಹೊಟ್ಟೆಯೊಳಗೆ ಐದಾರು ಸಾವಿರ ಜನರು ಸಹಜವಾಗಿ ವಾಸ ಮಾಡಬಹುದಾಗಿತ್ತು. ನಡುವೆ ಚೌಕುಗಳಾಗಲಿ, ಕೋಣೆಗಳಾಗಲಿ ಯಾವವೂ ಇದ್ದಿಲ್ಲ. ಇಷ್ಟು ವಿಶಾಲವಾದ ಗುಹೆಯನ್ನು ಎಂದೂ ನೋಡಿದ್ದಿಲ್ಲವಾದ್ದರಿಂದ, ಮಾಲೋಜಿಯೂ ಆ ಕೋಮಲಕಳೆಯ ಪುರುಷನೂ ಬೆರಗಾಗಿ ಹೋದರು. ಶೂರಪಾಲನೆಂಬುವನು ಮಾತಾಡ

ತೊಡಗಿದನು. ಅವನು ಹೇಳಿದ್ದೇನಂದರೆ:—"ಮಾಲೋಜಿರಾಯರೇ ಹಾಗು ವಿಮಲಾದೇವಿಯವರೇ, ಈ ಗುಹೆಯು ಬಹು ಪುರಾತನದ್ದಿರುವದು. ಇಂಥ ವಿಶಾಲವಾದ ಈ ಗುಹೆಯನ್ನು ಯಾರು ಕಟ್ಟಿಸಿದರೆಂಬುದು ತಿಳಿಯುವಂತಿಲ್ಲ. ಇರಲಿ. ನಮ್ಮ ಮಹಾರಾಜರ ವಶದಲ್ಲಿದ್ದ ಗುಹೆಗಳಲ್ಲಿ ಇದು ಶ್ರೇಷ್ಠವಾದದ್ದು. ಮೇಲಾಗಿ ಇದು ರಾಜಧಾನಿಗೆ ಸಮೀಪವಾಗಿರುತ್ತದೆ. ಈ ಗುಹೆಯಿಂದ ನಮ್ಮ ಅರಮನೆಯ ವರೆಗೆ ಚೋರಮಾರ್ಗವನ್ನು ಮಾಡಿಸಬೇಕೆಂದು ನಮ್ಮ ರಾಜರ ಪೂರ್ವಜರು ಪ್ರಯತ್ನ ಮಾಡಿ, ಮತ್ತೆ ಏನು ತಿಳಿಯಿತೋ ಆ ಪ್ರಯತ್ನವನ್ನು ಅಷ್ಟಕ್ಕೇ ನಿಲ್ಲಿಸಿರುವರು. ರಾಜಧಾನಿಯಿಂದ ಹೊರಟ ಆ ಚೋರ ನೆಲಮಾರ್ಗವು ಈ ಗುಹೆಯ ಸಮೀಪಕ್ಕೆ ಬಂದಿರುವದು. ಇನ್ನು ಸ್ವಲ್ಪ ದಿನಗಳವರೆಗೆ ಪ್ರಯತ್ನ ಪಟ್ಟಿದ್ದರೆ ಇಲ್ಲಿ ಗುರುತು ಮಾಡಿದ ಈ ಸ್ಥಳದಲ್ಲಿಯೇ ಆ ಚೋರಮಾರ್ಗವು ಪಾರಾಗುತ್ತಿತ್ತು; ಆದರೆ ಅದರ ಯೋಗವು ಈ ಕಾಲಕ್ಕೆ ಇದ್ದದರಿಂದ, ಆಗ ಅದರ ಪೂರ್ತತೆಯಾಗದೆ ಉಳಿದಂತೆ ತೋರುತ್ತದೆ."

ಶೂರಪಾಲನ ಭಾಷಣವು ಮುಗಿದ ಬಳಿಕ ಅವರೆಲ್ಲರೂ ಆ ಗುಹೆಯನ್ನು ಪೂರ್ಣವಾಗಿ ಅಡ್ಡಾಡಿ ನೋಡಿದರು. ತಮ್ಮ ಕಾರಸ್ಥಾನವು ಕೈಗೂಡುವದೆಂಬ ಭರವಸೆಯು ಅವರಿಗೆ ತೋರಿತು. ಬಳಿಕ ಅವರು ಆ ಗುಹೆಯಿಂದ ಹೊರಬಿದ್ದು, ಗೊರವಿಯ ಕಟ್ಟಿಗೆಯ ಸಹಾಯದಿಂದ ರಾಜಧಾನಿಯನ್ನು ಸೇರಿದರು.

ಪ್ರಿಯವಾಚಕರೇ, ವಿಮಲಾರಾಣಿಯೂ ಮಾಲೋಜಿಯೂ ಆ ಗುಹೆಯನ್ನು ಯಾಕೆ ನೋಡಿದರೆಂಬ ಕಾರಣವು ತಿಳಿಯದ್ದರಿಂದ, ನಿಮ್ಮ ಮನಸ್ಸು ತರ್ಕ-ವಿತರ್ಕಗಳಲ್ಲಿ ಮಗ್ನವಾಗಿರಬಹುದು. ಸ್ವಲ್ಪ ನಿದಾನವ ತಾಳಿರಿ. ಎಲ್ಲ ಸಂಗತಿಯೂ ನಿಮಗೆ ತಿಳಿದು ಬರುವದು.

ಹಿಂದಿನ ಪ್ರಕರಣದ ಕೊನೆಯಲ್ಲಿ ಹೇಳಿದಂತೆ ಮಾಲೋಜಿ ಹಾಗು ವಿಮಲೆ ಮತ್ತು ಭಂಡಾರೀ ರಾಜ ಈ ಮೂವರೂ ಸೇರಿ, ಚಾಲುಕ್ಯಸಮ್ರಾಟನ ನಾಶಕ್ಕೆ ಒಂದು ಕಪಟ ಯುಕ್ತಿಯನ್ನು ಕಂಡು ಹಿಡಿದಿದ್ದರಷ್ಟೇ; ಅವರ ಆ ಕಪಟಯುಕ್ತಿಯು ಆ ಗುಹೆಯ ಮುಖಾಂತರವಾಗಿ ನೆರವೇರಬೇಕಾಗಿತ್ತು. ಭಂಡಾರೀ ರಾಜನ ರಾಜಧಾನಿಯಿಂದ ಆ ಗುಹೆಯ ವರೆಗಿರುವ ಚೋರಮಾರ್ಗವನ್ನು ಪೂರ್ತಿಗೊಳಿಸಿ, ಆ ಚೋರಮಾರ್ಗದಲ್ಲಿಯೂ ಮತ್ತು ಗುಹೆಯಲ್ಲಿಯೂ ಪ್ರಾಣಹಾರಕವಾದ ಮದ್ದನ್ನು ಸಂಗ್ರಹಿಸಿ ಇಡಬೇಕಾಗಿತ್ತು; ಮತ್ತು ಗುಹೆಯ ಮೇಲ್ಭಾಗದಲ್ಲಿ ಬೆಳೆದ ವೃಕ್ಷಾದಿಗಳನ್ನು ಕಡಿಸಿ, ಅಲ್ಲಿ ಪ್ರಶಸ್ಥವಾದ ಬೈಲನ್ನು ಮಾಡಬೇಕಾಗಿತ್ತು. ಯಾಕಂದರೆ, ಚಾಲುಕ್ಯ ಸಮ್ರಾಟನೊಡನೆ ಭಂಡಾರೀ ರಾಜನು ಸ್ನೇಹಭಾವವನ್ನು ಬೆಳಿಸಬೇಕು. ಅವನೊಡನೆ ಪತ್ರವ್ಯವಹಾರ ನಡಿಸ

ಬೇಕು. ಅವನು ಸಮೀಪದಲ್ಲಿ ಬಂದನೆ, ಅವನನ್ನು ರಾಜಧಾನಿಗೆ ಕರೆತರುವ ಸೋಗು ಹಾಕಬೇಕು. ಅವನನ್ನು ರಾಜಧಾನಿಗೆ ಕರೆತರುವಾಗ ಆ ಗುಹೆಯು ಮೇಲಿನ ಪ್ರಶಸ್ತ ದಾರಿಗೆ ಅವನನ್ನು ತರಬೇಕು. ಅವನು ಸಪರಿವಾರವಾಗಿ ಗುಹೆಯು ಮೇಲೆ ಬಂದು, ಆ ಪ್ರಶಸ್ತವಾದ ಜಾಗದಲ್ಲಿ ವಸತಿಯನ್ನು ಮಾಡುವಂತೆ ಏರ್ಪಾಡು ಮಾಡಬೇಕು. ಹೀಗೆ ಈ ಕಪಿಲಾಸಮಯ ಯೋಗವು ಕೂಡಿ ಬಂದ ಬಳಿಕ, ರಾಜಧಾನಿಯ ಚೋರಮಾರ್ಗದಿಂದ ಪಿಮಲೆಯು ಗುಹೆಯನ್ನು ಪ್ರವೇಶಿಸಿ, ಒಳಗಿನ ಮದ್ದಿನ ಸಂಗ್ರಹಕ್ಕೆ ಕೊಳ್ಳಿಯನ್ನು ಕೊಡಬೇಕು. ಈ ಪ್ರಯೋಗದಿಂದ ಸಮ್ರಾಟನ ಯುದ್ಧವನ್ನು ಮಾಡಬೇಕು, ಎಂಬ ಆ ತ್ರಿವರ್ಗದವರು ಕಪಟಯುಕ್ತಿಯನ್ನು ನಿಶ್ಚಯಿಸಿದ್ದರು. ಗುಹೆಯಲ್ಲಿ ಚೋರಮಾರ್ಗವನ್ನು ಮಾಡಿಸುವ ಕೆಲಸವನ್ನೂ ಮದ್ದನ್ನಿಡಿಸುವ ಕೆಲಸವನ್ನೂ ಪಿಮಲೆಯು ಮಾಡಿಸಬೇಕೆಂದು ಗೊತ್ತಾಗಿತ್ತು. ಈ ಕೆಲಸಕ್ಕೆ ಬೇಕಾಗುವ ಹಣವನ್ನೂ, ಆಳುಗಳನ್ನೂ ಭಂಡಾರೀ ರಾಜನು ಒದಗಿಸಿ ಕೊಡಬೇಕು. ಮಾಲೋಜಿಯು ಭಂಡಾರೀರಾಜನಲ್ಲಿಯ ಮೂರು ನಾಲ್ಕು ಜನ ವಿಶ್ವಾಸಿಕರೊಡನೆ ಗುಪ್ತಹೇರರ ಕೆಲಸವನ್ನು ಕೈಕೊಳ್ಳಬೇಕು. ಅವರು ಸಮ್ರಾಟನ ದಂಡನ್ನು ಸೇರಿ, ಅವರ ಚಲನವಲನವನ್ನು ಆಗಾಗ್ಗೆ ಭಂಡಾರೀ ರಾಜನಿಗೂ ಪಿಮಲೆಗೂ ತಿಳಿಸುತ್ತಿರಬೇಕು, ಎಂಬ ಸಂಕೇತಗಳು ಗೊತ್ತಾಗಿದ್ದವು. ಸಮ್ರಾಟನು ಕಿರುಮಂಜಿಯ ದುರ್ಗದ ಮೇಲೆ ಸ್ವಾರೀ ಮಾಡುವನೆಂಬ ಸಂಗತಿಯು ಬಳುವು ಮಾಲೋಜಿಗೂ ಪಿಮಲೆಗೂ ಹತ್ತಿತ್ತು. ಆದ್ದರಿಂದ ಅವರು ತಮ್ಮ ಈ ಕಾರಸ್ಥಾನವನ್ನು ಬಹು ಸ್ವಲ್ಪ ಕಾಲದಲ್ಲಿ ಸಿದ್ಧಪಡಿಸಬೇಕಾಗಿತ್ತು. ಆದ್ದರಿಂದ ಅವರಿಬ್ಬರು ಈ ದಿವಸ ರಾತ್ರಿಯಲ್ಲಿ ಭಂಡಾರೀರಾಜನ ವಿಶ್ವಾಸುಕರಾದ ಇಬ್ಬರನ್ನು ನೆರವಿಗೆ ಕರೆದುಕೊಂಡು ಗುಹೆಯನ್ನು ನೋಡುವದಕ್ಕೆ ಬಂದಿದ್ದರು. ಅವರು ಗುಹೆಯಲ್ಲಿ ಯಾವ ಕೆಲಸವನ್ನು ಮಾಡಿಸಿದರೂ ರಾತ್ರಿಯ ಕಾಲದಲ್ಲಿಯೇ ಮಾಡಿಸಬೇಕಾಗಿತ್ತು. ಯಾಕಂದರೆ ಸಮ್ರಾಟನ ಗುಪ್ತಚಾರರಿಗೆ ಅದರ ಸುಳುಹು ಗೊತ್ತಾದರೆ, ಅವರ ಕೆಲಸವೆಲ್ಲ ವ್ಯರ್ಥವಾಗುತ್ತಿತ್ತು. ರಾಜಕಾರಣದಲ್ಲಿ ಗೌಪ್ಯವನ್ನು ಕಾಯ್ದುಕೊಳ್ಳುವದೇ ಮಹತ್ವದ ಕೆಲಸವಾಗುತ್ತದೆ. ಗೌಪ್ಯಸ್ಫೋಟವಾದರೆ ಮಾಡಿದ ಕೆಲಸವು ಎಷ್ಟು ಮಹತ್ವದ್ದಿದ್ದರೂ, ಎಷ್ಟು ಬಲವಾದದ್ದೂ ಬೆಲೆಯುಳ್ಳದ್ದೂ ಇದ್ದರೂ ಅದಕ್ಕೆ ಮುಂದೆ ಕವಡಿಯ ಬೆಲೆಯು ಬರುವದಿಲ್ಲ. ಈ ಚೋರಮಾರ್ಗದ ಕೆಲಸದಲ್ಲಿ ಭಂಡಾರೀರಾಜನು ಪ್ರತ್ಯಕ್ಷವಾಗಿ ತೊಡಗದಿರುವದಕ್ಕೂ ಈ ಗುಪ್ತಚಾರರ ಅಂಜಿಕೆಯೇ ಕಾರಣವಾಗಿತ್ತು. ಧೂರ್ತನಾದ ಸಮ್ರಾಟನು ಯಾರ ಯಾರ ದರ್ಬಾರಿನಲ್ಲಿ ಯಾವ ಯಾವ ರೂಪದಿಂದ ಗುಪ್ತಹೇರರನ್ನಿರಿಸಿರುವನೆಂಬದು

ಯಾರಿಗೂ ತಿಳಿಯುವಂತಿದ್ದಿಲ್ಲ. ಆಗಿನ ಕಾಲದಲ್ಲಿ ಗುಪ್ತಹೇರರ ಸುಳಿದಾಟವೇ ಹಾಗಿತ್ತು. ಒಬ್ಬೊಬ್ಬ ರಾಜನಿಗೆ ಅವನ ವಿಶ್ವಾಸುಕರಾದ ಗುಪ್ತಹೇರರು ಅಸಂಖ್ಯಾಕರಾಗಿರುತ್ತಿದ್ದರು. ಆದ್ದರಿಂದ ಯಾರಾದರೂ ಮಹತ್ವದ ಕೆಲಸವನ್ನು ಮಾಡಬೇಕಾದರೆ, ಬಹಳ ಗೌಪ್ಯವನ್ನು ಕಾಯ್ದುಕೊಳ್ಳಬೇಕಾಗುತ್ತಿತ್ತು.

ಗೊತ್ತಾದ ಮೇರೆಗೆ ವಿಮುಲೆಯು ಗುಹೆಯಲ್ಲಿ ಚೋರಮಾರ್ಗವನ್ನು ಮಾಡಿಸುವ ಕೆಲಸಕ್ಕೆ ಹತ್ತಿದಳು. ಮಾಲೋಜಿಯು ಸಂಗಡಿಗರೊಡನೆ ಗುಪ್ತಹೇರಸ ಕೆಲಸಕ್ಕೆ ನಡೆದನು. ಭಂಡಾರೀ ರಾಜನು ಸಮ್ರಾಟನೊಡನೆ ಹೇಗೆ ಸ್ನೇಹಸಂಬಂಧವನ್ನು ಬೆಳಿಸಬೇಕು. ಯಾವ ನಿಮಿತ್ತದಿಂದ ಅವನೆಡೆಗೆ ರಾಯಭಾರಿಗಳನ್ನು ಕಳುಹಿಸಬೇಕು, ಎಂಬ ವಿಚಾರಗಳಲ್ಲಿ ಮಗ್ನನಾದನು. ಹೀಗೆ ಮೂವರೂ ತಮ್ಮ ತಮ್ಮ ಕೆಲಸಗಳಲ್ಲಿ ತೊಡಗಿದರು. ಇತ್ತ ಮಾಲೋಜಿಯು ಗುಪ್ತಹೇರನ ಕಾರ್ಯದಲ್ಲಿ ಅಪಯಶಸ್ಸನ್ನು ಹೊಂದಿ, ಸಮ್ರಾಟನ ಸೆರೆಯಲ್ಲಿ ಬಿದ್ದನೆಂಬುದು ನಮ್ಮ ವಾಚಕರ ಸ್ಮರಣದಲ್ಲಿರಬಹುದು. ವಿಮುಲೆಯು ತನ್ನ ಕೆಲಸವನ್ನು ಭರದಿಂದ ನಡಿಸಿದ್ದಳು. ಆಕೆಯು ಜಾತ್ಯಾ ಕಾರಸ್ಥಾನೀ ಹೆಣ್ಣುಮಗಳಾಗಿದ್ದಳು. ಅವಳಲ್ಲಿ ಪೌರುಷಪ್ರಿಯತೆಯು ಪುರುಷರಿಗಿಂತಲೂ ವಿಶೇಷವಾಗಿತ್ತು. ಈಗಂತೂ ಅವಳ ಮನೋರಥವು ಪೂರ್ಣವಾಗುವ ಕಾಲವು ಸಮೀಪಿಸಿತೆಂಬ ಸಂತೋಷವೊಂದು ಬೆರೆತದ್ದರಿಂದ, ಆಕೆಯ ಕಾರ್ಯಾವೇಶಕ್ಕೆ ಮೇರೆಯೇ ಉಳಿದಿರಲಿಲ್ಲ.

ವಿಮುಲೆ-ಮಾಲೋಜಿಯರನ್ನು ಅವರವರ ಕೆಲಸಕ್ಕೆ ಕಳಿಸಿದ ಬಳಿಕ ಭಂಡಾರೀ ರಾಜನು ಸಮ್ರಾಟನ ಕಡೆಗೆ ತನ್ನೊಬ್ಬ ರಾಯಭಾರಿಯನ್ನು ಕಳಿಸುವ ಉದ್ಯೋಗದಲ್ಲಿ ತೊಡಗಿದನು. ಅದಕ್ಕಾಗಿ ಅವನು ಸಮ್ರಾಟನಿಗೊಂದು ಪತ್ರವನ್ನು ಬರೆಯಲುಪಕ್ರಮಿಸಿದನು; ಆದರೆ ಮನಸ್ಸಿನಲ್ಲಿ ಸಮ್ರಾಟನ ವಿಷಯಕ್ಕೆ ದ್ವೇಷವಿದ್ದದರಿಂದ, ಪತ್ರದ ವಿಷಯವು ಸಮಂಜಸವಾಗಿ ಸಾಧಿಸದಂತಾಯಿತು. ಮನೋವೃತ್ತಿಗೆ ತಕ್ಕವಿದ್ದ ಕಾರ್ಯವು ಬಹು ಬೇಗ ಸಾಧಿಸುತ್ತದೆ; ಆದರೆ ಮನಸ್ಸಿನ ವಿರುದ್ಧವಾಗಿ ಕಾರ್ಯ ಮಾಡಬೇಕೆಂದರೆ ಬಹು ಜಡಹೋಗುತ್ತದೆ. ಭಂಡಾರೀ ರಾಜನು ಎರಡು-ಮೂರು ಪತ್ರಗಳನ್ನು ಹರಿದೊಗೆದನು. ಕಡೆಗೆ ಕಷ್ಟಪಟ್ಟು ಒಂದು ಪತ್ರವನ್ನು ಬರೆದನು. ಅದು ಚನ್ನಾಗಿ ಸಾಧಿಸಿತು. ಆಗ ಅವನು ಸಂತೋಷದಿಂದ ಆ ಪತ್ರವನ್ನು ಸುಂದರವಾದ ಸೋನೇರಿಯ ಸುಳುವುಗಳಿಂದಲಂಕರಿಸಿ, ಅದಕ್ಕೆ ರಾಜಮುದ್ರೆಯನ್ನು ಹಾಕಿದನು. ಬಳಿಕ ಒಂದು ಲಕ್ಕೋಟೆಯಲ್ಲಿ ಹಾಕಿ, ಅದಕ್ಕೆ ಅರಗಿನ ಮುದ್ರೆಯನ್ನು ಮಾಡಿದ್ದಲ್ಲದೆ, ಆ ಲಕ್ಕೋಟೆಯನ್ನು ಪತ್ರಕಳಿಸುವ ಕೆಲಸಕ್ಕಾಗಿಯೇ ಸಿದ್ಧಗೊಳಿಸಿರುವ ಥೈಲಿಯಲ್ಲಿ

ಹಾಕಿ, ತನ್ನ ಕೈಮುಟ್ಟಿ ಅದಕ್ಕೊ ಅರಗಿನ ಮುದ್ರೆಯನ್ನು ಮಾಡಿದನು. ಬಳಿಕ ಅವನು ರಾಯಭಾರಿಯನ್ನು ಕಳಿಸುವ ಯೋಚನೆಯನ್ನು ಬದಲು ಮಾಡಿ, ಕುಶಲನಾದ್ಯಬ್ಬ ಹೇಜೀಬನನ್ನು ಕರೆಯಿಸಿ, ಅವನ ವಶಕ್ಕೆ ಪತ್ರವನ್ನೊಪ್ಪಿಸಿ, ಸಮ್ರಾಟ ಭೂವಡನ ಮುಕ್ಕಾಮಿದ್ದಲ್ಲಿಗೆ ಮುಟ್ಟಿಸಬೇಕೆಂದು ಕಟ್ಟಪ್ಪಣೆ ಮಾಡಿದನು. ರಾಜನ ಆಜ್ಞೆಯಂತೆ ಹೇಜೀಬನು ಒಂಟೆಯ ಮೇಲೆ ಸವಾರಿ ಮಾಡಿ ನಡೆದನು.

ಹೇಜೀಬನು ಅತ್ತ ಹೋಗಲು, ಇತ್ತ ಭಂಡಾರೀ ರಾಜನ ಮನಸ್ಸಿನಲ್ಲಿ ಒಗೆಬಗೆಯ ವಿಚಾರಗಳು ಉತ್ಪನ್ನವಾಗಲುಪಕ್ರಮಿಸಿದವು. ಆಗ ಅವನು ಆಲೋಚಿಸಿದ್ದೇನಂದರೆ:—"ಇದೇನು ಚಮತ್ಕಾರವು? ಇಷ್ಟು ದಿವಸ ಭೂವಡನ ವಿಷಯವಾಗಿ ಔದಾಸೀನ್ಯವನ್ನು ತಾಳಿದ್ದ ನಾನು, ವಿಮಲೆಯ ಮಾತಿನ ಮೇಲಿಂದ ಇಷ್ಟೊಂದು ದ್ವೇಷ ತಾಳಬೇಕಾಯಿತಲ್ಲ! ಒಂದುವೇಳೆ ದ್ವೇಷ ತಾಳಿದರೂ ಚಿಂತೆಯಿಲ್ಲ; ಪ್ರಸಿದ್ಧರೀತಿಯಿಂದ ತಾಳಿದ್ದರೆ ಅದೊಂದು ಕ್ಷಾತ್ರವೃತ್ತಿಗೆ ಭೂಷಣವೇ ಅನಿಸುತ್ತಿತ್ತು; ಆದರೆ ಬಹಿರಂಗದಲ್ಲಿ ಸ್ನೇಹವನ್ನು ತೋರಿಸಿ, ಅಂತರಂಗದಲ್ಲಿ ಕಾಲಕೂಟವಿಷವನ್ನು ಸಂಗ್ರಹಿಸಿಡುವ ಅಧಮವೃತ್ತಿಯನ್ನು ನಾನು ತಂದುಕೊಂಡ ಹಾಗಾಯಿತು. ಇಂಥ ಅಧಮ ಕೆಲಸಕ್ಕೆ ನನ್ನ ಮನಸ್ಸಾದರೂ ಹೇಗೆ ಒಪ್ಪಿಕೊಂಡಿರಬಹುದು? ಯಾವ ಕೆಲಸಗಳಿಂದ ನಮ್ಮ ಕುಲ-ಶೀಲಗಳಿಗೆ ಕಲಂಕವುಂಟಾಗುವದೋ, ಅಂಥ ಕೆಲಸಗಳನ್ನು ನಾನು ಮಾಡಬಹುದೇ? ವಿಮಲೆಯ ಮಧುರ ಮಾತಿಗೆ ನಾನು ಮರುಳಾದೆನು. ಸ್ತ್ರೀಯು ಮೂರ್ತಿಮಂತ ಮಾಯಾಸ್ವರೂಪವೆಂಬದು ಸುಳ್ಳಲ್ಲ. ಅವಳ ಬಲೆಯಲ್ಲಿ ಸಿಕ್ಕವರು ಸ್ವಾತಂತ್ರ್ಯವಿಹೀನರೇ ಆಗುವರು. ವಾಸ್ತವವಾಗಿ ನೋಡಿದರೆ ಪ್ರಕೃತಿಯು ಪುರುಷನಿಗೆ ಆಧೀನವಾಗಿರಬೇಕು. ಹೀಗಿದ್ದು, ಸ್ತ್ರೀಗೆ ನಾವು ಒಂದಿಲ್ಲೊಂದು ಪ್ರಕಾರದಿಂದ ಆಧೀನರಾಗಿ ನಡೆಯುವದೆಂದರೆ ನಮ್ಮ ದಡ್ಡತನವೇ ಸರಿ! ನಾನು ವಿಷಯಾಸಕ್ತನಾಗಿರದಿದ್ದರೂ ವಿಮಲೆಯ ಮಾತುಗಳನ್ನು ತಿರಸ್ಕರಿಸುವದು ನನಗೆ ಅಶಕ್ಯವೇ ಆಯಿತು. ನನ್ನಂಥವನ ಸ್ಥಿತಿಯೇ ಹೀಗಾದ ಬಳಿಕ, ವಿಷಯಲಂಪಟರುಗಳ ಸ್ಥಿತಿಯನ್ನು ಕೇಳುವವರಾರು? ವಿಮಲೆಗೆ ಸಹಾಯ ಮಾಡುವದು ನನ್ನ ಮನಸ್ಸಿನಲ್ಲಿದ್ದರೆ, ಸಮ್ರಾಟನೊಡನೆ ನಾನು ಪ್ರತ್ಯಕ್ಷವಾಗಿ ಹೋರಾಡಬಹುದಾಗಿತ್ತು."

ಎಂಬ ಹಲವು ವಿಚಾರಗಳು ಅವನಲ್ಲಿ ಬರಹತ್ತಿದವು. ಈ ವಿಚಾರಗಳಿಂದ ಅವನ ಮನಸ್ಸು ಹೈರಾಣವಾಗಹತ್ತಿತು. ಲೋಕದಲ್ಲಿ ಕೆಲಕೆಲವು ಜನರ ಸ್ಥಿತಿಯು ಹೀಗೆಯೇ ಇರುತ್ತದೆ. ಅವರು ಯಾವದೊಂದು ಕೆಲಸಕ್ಕೆ ಪೂರ್ಣ ವಿಚಾರವಿಲ್ಲದೆ ಕೈ ಹಾಕುವರು. ಕೆಲಸವು ಕೈ ಏರಿದ ಬಳಿಕ ಪಶ್ಚಾತ್ತಾಪಕ್ಕೆ ಗುರಿಯಾಗುವರು.

ಭಂಡಾರೀರಾಜನು ಹೇಜೀಬನನ್ನು ತಿರುಗಿ ಕರೆಸಬೇಕೆಂದು ಮಾಡಿದನು. ವಿಮಲೆಯು ಕೈಕೊಂಡಿರುವ ಸಂಪ್ರೂಗೆಯ ಕಾರ್ಯವನ್ನು ಅಷ್ಟಕ್ಕೇ ನಿಲ್ಲಿಸಬೇಕೆಂದು ಮಾಡಿದನು; ಆದರೆ ಮನಸ್ಸಿನಲ್ಲಿ ಯಾವದೂ ನಿರ್ಧಾರವಿಲ್ಲದ್ದರಿಂದ ಅವನ ಒಂದೂ ವಿಚಾರಗಳು ದೃಢವಾಗಿ ನಿಲ್ಲದಾದವು. ಕಡೆಗೆ ಅವನು ಅಷ್ಟಕ್ಕೇ ಆ ವಿಚಾರವನ್ನು ನಿಲ್ಲಿಸಿ, ವಿಮಲೆಯು ಚರಿತ್ರವನ್ನು ಶೋಧಿಸುವ ಯೋಚನೆಯನ್ನು ಮಾಡಿದನು. ವಿಮಲೆಯ ವಿಚಿತ್ರ ಚರಿತ್ರೆಯು ಅವನಿಗೆ ಆಶ್ಚರ್ಯವನ್ನುಂಟು ಮಾಡತೊಡಗಿತು. ವಿಮಲೆಯು ಚರಿತ್ರವನ್ನು ಶೋಧಿಸಿ ಮುಂದೆ ಮಾಡತಕ್ಕದ್ದನ್ನು ಮಾಡಬೇಕೆಂಬ ವಿಚಾರಗಳು ಬರಲು, ಅವನಿಗೆ ತಕ್ಕಮಟ್ಟಿಗೆ ಸಮಾಧಾನವಾಯಿತು.

ಹೀಗೆ ಭಂಡಾರೀರಾಜನು ಮನಸ್ಸಿಗೆ ಸಮಾಧಾನ ಹಚ್ಚಿಕೊಂಡು ವಿಮಲೆಯ ಚರಿತ್ರದ ಶೋಧಾರ್ಥವಾಗಿ ಸೂಕ್ಷ್ಮ ಬುದ್ಧಿಯ ಗುಪ್ತಹೇರರನ್ನು ನಿಯಮಿಸಿ ಸ್ವಸ್ಥವಾಗಿ ಇರುತ್ತಿರಲು, ಇತ್ತ ಅವನಿಂದ ಕಳುಹಲ್ಪಟ್ಟ ಹೇಜೀಬನು ಪಯಣದ ಮೇಲೆ ಪಯಣ ಮಾಡುತ್ತ ಸಮ್ರಾಟನ ಪಾಳಯವನ್ನು ಸೇರಿದನು.

ಹೇಜೀಬನು ಬಂದಾಗ ಭೂವಡನು ಪಯಣದ ಮೇಲಿದ್ದನು. ಅವನು ಒಂದು ನದೀತೀರದಲ್ಲಿ ಬೀಡನ್ನು ಬಿಟ್ಟು ವಿಶ್ರಾಂತಿಯನ್ನು ಹೊಂದುತ್ತಿದ್ದನು; ಗುರ್ಜರ ಭೂಮಿಯಲ್ಲಿಯ ಅನಾಯಕತ್ವದ ಮೂಲಕವಾಗಿ ಇದುವರೆಗೂ ಅಂಥ ಪ್ರತಿಸ್ಪರ್ಧೆಯುಳ್ಳ ಶತ್ರುವು ಗಂಟುಬೀಳದ್ದರಿಂದ, ಸೈನಿಕರ ತೋಳ ತಿಂಡೆಯು ಹೆಚ್ಚಾಗಿತ್ತು. ಅವರು ತಮಗೆ ಯಾರೂ ಎದುರಿಲ್ಲವೆಂದು ತಿಳಿದಿದ್ದರು. ಆದ್ದರಿಂದ ಅವರು ನಿರ್ಭಯದಿಂದ ಆ ನದೀತೀರದಲ್ಲಿ ವಸ್ತಿಯನ್ನು ಮಾಡಿದ್ದರು.

ಯಾರಿಗೆ ಯಾವ ಕೆಲಸವಿರಬೇಕೋ ಆ ಕೆಲಸವಿರದಿದ್ದರೆ ಅವರ ಮನಸ್ಸು ವಾಮಮಾರ್ಗ ಪ್ರವರ್ತಕವಾಗುವದು ಸ್ವಾಭಾವಿಕವಾಗಿದೆ. ಅದರಂತೆ ಯುದ್ಧದ ಗೊಂದಲವಿಲ್ಲದ ಸಮ್ರಾಟನ ಸೈನಿಕರು ತಮ್ಮ ಮನಸ್ಸಿಗೆ ವಿನೋದವಾಗಬೇಕೆಂದು ಬಯಸುತ್ತಿದ್ದರು. ಸಮ್ರಾಟನು ನ್ಯಾಯನಿಷ್ಠುರನೆಂಬದನ್ನು ಅರಿತಿದ್ದರೂ, ಅವರು ಪ್ರಸಂಗವಶಾತ್ ತಮ್ಮ ದುರ್ಬುದ್ಧಿಯನ್ನು ಹೊರಗೆಡವುತ್ತಿದ್ದರು. ಸೈನಿಕರಲ್ಲಿ ಕೆಲವರು ನದೀತೀರ ಹಿಡಿದು ವಿನೋದಾರ್ಥ ಸಂಚರಿಸುತ್ತಿರುವಾಗ ಮೇಲೆ ಹೇಳಿದ ಹೇಜೀಬನು ಅವರಿಗೆ ಭೆಟ್ಟಿಯಾದನು. ಹೇಜೀಬನನ್ನು ಕಂಡ ಕೂಡಲೆ ಸೈನಿಕರು ಅವನನ್ನು ಮುತ್ತಿ ಅವನ ಥೈಲಿಯನ್ನು ಕಸಕೊಂಡರು; ಹಾಗು ಒಂಟೆಯನ್ನು ಹುಚ್ಚೆಬ್ಬಿಸಿ ಓಡಿಸಿ ಬಿಟ್ಟರು. ಹೇಜೀಬನು ತಾನು ಭೂವಡ ಸಮ್ರಾಟರ ಬಳಿಗೆ ಹೋಗತಕ್ಕವನಿರುವೆನೆಂದು ಎಷ್ಟು ಬಗೆಯಿಂದ ಹೇಳಿದರೂ ಆ ಹುಂಬ ಸೈನಿಕರಿಗೆ ಬುದ್ಧಿ ಬಾರದಾಯಿತು. ಕೊನೆಗೆ ಹೇಜೀಬನನ್ನು ಅವಾ

ನುಷವಾಗಿ ಅಪಮಾನಗೊಳಿಸಿ, ಅವನು ತಂದಿದ್ದ ಥೈಲಿಯನ್ನು ಒಡೆದರು. ಒಳಗಿನ ಸುಂದರವಾದ ಲಕೋಟೆಯ ಮೇಲೆ ಸಮ್ರಾಟನ ಒಕ್ಕಣಿಕೆಯಿತ್ತು. ಆ ಒಕ್ಕಣಿಕೆಯನ್ನು ನೋಡಿ ಅವರ ಕಣ್ಣುಗಳು ನಿಚ್ಚಳವಾಗಿ ತೆರೆದವು. ಅವರ ಮೈಯಲ್ಲಿ ಕಂಪನವುಂಟಾಯಿತು. ತಮ್ಮಿಂದ ಎಂಥ ಅಪರಾಧವು ಸಂಭವಿಸಿತಲ್ಲ! ಎಂದು ಅವರು ಚಿಂತಿಸಿದರು. ಕೂಡಲೆ ಹೇಜೀಬನ ಕ್ಕೆ ಕಾಲು ಕಟ್ಟಿಕೊಂಡು ಅವನ ಕ್ಷಮೆಯನ್ನು ಯಾಚಿಸಿದರು. ಹೇಜೀಬನು ದೊಡ್ಡ ಮನಸ್ಸಿನಿಂದ ಅವರ ಅಪರಾಧವನ್ನು ಕ್ಷಮಿಸಿದನು. ಬಳಿಕ ಅವರು ಅವನನ್ನು ಪಾಳಯಕ್ಕೆ ಕರೆದೊಯ್ದು, ಅವನನ್ನು ಸನ್ಮಾನಿಸಿ, ರಾಜಸನ್ನಿಧಿಗೆ ಕಳುಹಿಸಿದರು. ಹೇಜೀಬನು ಸಮ್ರಾಟನನ್ನು ಕಂಡು ಆತನಿಗೆ ತಾನು ತಂದಿದ್ದ ಥೈಲಿಯನ್ನೊಪ್ಪಿಸಿದನು. ಅಕಸ್ಮಾತ್ತಾಗಿ ಬಂದ ಈ ಹೇಜೀಬನು ಯಾರೆಂದು ಯೋಚಿಸುತ್ತ ರಾಜನು ಕೈಯಲ್ಲಿ ಥೈಲಿಯನ್ನು ತಕ್ಕೊಂಡನು.

## ೧೫ ಏಕಪತ್ನೀ ವ್ರತಪ್ರಭಾವ.

ಸಮ್ರಾಟನು ಒಮ್ಮೆಲೆ ಥೈಲಿಯನ್ನೊಡೆಯದೆ ಹೇಜೀಬನನ್ನು ದಿಟ್ಟಿಸಿ ನೋಡಿದನು. ಯಾಕಂದರೆ ಅವನಿಗೆ ಥೈಲಿಯ ಮೇಲಿನ ಮೋಹರಿನಲ್ಲಿ ಯಾವ ರಾಜನ ಹೆಸರೂ ಕಂಡು ಬರಲಿಲ್ಲ. ಓದಲಿಕ್ಕೆ ಬಾರದ ಅಸ್ಪಷ್ಟ ಅಕ್ಷರಗಳು ಮಾತ್ರ ಅದರಲ್ಲಿ ಮೂಡಿದ್ದವು. ಸಮ್ರಾಟನು ತನ್ನನ್ನು ದಿಟ್ಟಿಸಿ ನೋಡಲು ಆ ಚಾಣಾಕ್ಷ ಹೇಜೀಬನಿಗೆ ಅವನ ಅಭಿಪ್ರಾಯವು ಹೊಳೆಯದಿರಲಿಲ್ಲ. ಆಗ ಅವನು ಗಂಭೀರ ಭಾವವನ್ನು ತಾಳಿ ಸುಮ್ಮನೆ ನಿಂತುಕೊಂಡನು. ಮೋಹರಿನ ವಿಷಯವಾಗಿ ಸಂಶಯ ಬಂದದ್ದರಿಂದ, ಸಮ್ರಾಟನು ತನ್ನನ್ನು ಏನಾದರೂ ಕೇಳಬಹುದೆಂದು ಆ ಧೂರ್ತನು ತಿಳಿದನು; ಆದರೆ ಸಮ್ರಾಟನು ಆಗ ಅದರ ಗೊಡವೆಗೆ ಹೋಗದೆ, ಹೇಜೀಬನನ್ನು ವಿಶ್ರಾಂತಿಗಾಗಿ ಕಳುಹಿಸಿ, ಥೈಲಿಯನ್ನು ಒಡೆದನು. ಅದರಲ್ಲಿ ಸುಂದರವಾದ ಮತ್ತೊಂದು ಚೀಲವಿತ್ತು; ಅದರ ಮೇಲಿನ ಮೋಹರು ಬುದ್ಧಿಪೂರ್ವಕವಾಗಿ ಒಡೆದಂತೆ ತೋರುತ್ತಿತ್ತು. ಬಳಿಕ ಆತನು ಚೀಲದಲ್ಲಿಯ ಪತ್ರವನ್ನು ತಕ್ಕೊಂಡನು. ಆ ಪತ್ರವಾಚನದಿಂದ ಸಮ್ರಾಟನಿಗೆ ಸಂತೋಷವಾಯಿತು; ಆದರೆ ದಾರಿಯಲ್ಲಿ ಹೇಜೀಬನು ಥೈಲಿಯನ್ನು ಒಡೆದು ನೋಡಿರುವನೆಂಬ ಸಂಶಯವು ಅವನನ್ನು ಬಾಧಿಸತೊಡಗಿತು. ಕೂಡಲೆ ಅವನು ಹೇಜೀಬನನ್ನು ಕರೆಯಿಸಿಕೊಂಡನು. ಹೇಜೀಬನು ಬಂದು ಪ್ರಣಾಮ ಮಾಡಿ ನಿಂತುಕೊಂಡನು. ಅವನ ಮುಖದ ಮೇಲೆ ಒಂದು ಬಗೆಯ ಆವೇಶವು ವ್ಯಕ್ತವಾಗುತ್ತಿತ್ತು. ಸಮ್ರಾಟನು ಅವನ ಮುಖಲಕ್ಷಣದ ಮೇಲಿಂದ ಇವನಿಂದ ಈ ಕೆಲ

ಸವು ಆಗಿರುವದಿಲ್ಲ ಈತನ ಮನಸ್ಸಿನಲ್ಲಿ ಏನೋ ಹೇಳುವದಿರುತ್ತದೆ, ಎಂದು ತರ್ಕಿಸಿ, ಅವನನ್ನು ಕುರಿತು ನುಡಿದನೇನಂದರೆ:—"ನೀವು ತಂದ ಚೀಲದ ಮೇಲಿನ ಮೊಹರು ಒಡೆದ ಕಾರಣವೇನು?"

ಸಮ್ರಾಟನು ವಿಚಾರಮಾಡಿದ್ದೊಂದೇ ತಡ; ಹೇಜೀಬನು ಪ್ರಣಾಮಮಾಡಿ ಮಹಾಸ್ವಾಮಿನ್, ಅಪ್ಪಣೆಯಾದರೆ ಹೇಳುವೆನು, ಎಂದನು. ಸಮ್ರಾಟನು ಅಭಯವನ್ನು ಕೊಟ್ಟನು. ಬಳಿಕ ಹೇಜೀಬನು ತನಗೆ ಸಮ್ರಾಟನ ದಂಡಿನಲ್ಲಿ ಕೆಲವರು ಕೊಟ್ಟ ಹಿಂಸೆಯನ್ನೂ, ಅವರು ಥೈಲಿಯನ್ನು ಒಡೆದು ಸಮ್ರಾಟರ ಒಕ್ಕಣಿಕೆಯನ್ನು ನೋಡಿ ಗಾಬರಿಯಾಗಿ, ತನಗೆ ಹೇಳಿಕೊಂಡದ್ದನ್ನೂ ಒಂದೂ ಉಳಿಯದಂತೆ ಹೇಳಿದನು. ಅವರ ಮಾತು ಮುಗಿದ ಕೂಡಲೆ ಸಮ್ರಾಟನ ಮುಖವು ಉಗ್ರವಾಯಿತು. ಯುದ್ಧಕಾಲದಲ್ಲಿಯು ಹೊರತು ಉಳಿದ ವೇಳೆಯಲ್ಲಿ ಪರರಿಗೆ ಹಿಂಸೆ ಕೊಡುವದು ಕ್ಷಾತ್ರಧರ್ಮವಲ್ಲೆಂದು ಆತನ ನಿಶ್ಚಿತ ಮತವಿತ್ತು. ಈ ಮತದಂತೆ ನಡೆಯುವದಕ್ಕೆ ಆತನ ಸೈನಿಕರಿಗೆ ಮೇಲಿಂದ ಮೇಲೆ ಹೇಳುತ್ತಿದ್ದನು. ಈ ವಿಷಯದಲ್ಲಿ ಸೇನಾಪತಿಗೂ ಕಟ್ಟಪ್ಪಣೆ ಮಾಡಿದ್ದನು; ಆದರೆ ಆ ಆಜ್ಞೆಯನ್ನು ಪಾಲಿಸದೆ ಸೈನಿಕರು ಈ ರೀತಿಗೊಂದಲ ಹಾಕಿದ್ದನ್ನು ತಿಳಿದು ಸಮ್ರಾಟನ ಪಿತ್ಥವು ತಲೆಗೇರಿತು. ಅವನು ಹೇಜೀಬನನ್ನು ಕುರಿತು: "ಯಾವ ಭಾಗದ ಸೈನಿಕರು? ಅವರ ರಾಹುಟಿಗಳು ಯಾವ ದಿಕ್ಕಿಗಿರುವವು? " ಎಂದು ಕೇಳಿದನು; ಆದರೆ ಆ ವಿಸ್ತೀರ್ಣವಾದ ಪಾಳಯದಲ್ಲಿ ಇಂಥ ದಿಕ್ಕಿಗೆಂದು ಅವನಿಗೆ ಹೇಳಲಿಕ್ಕೆ ಆಗದ್ದರಿಂದ ಸಮ್ರಾಟನು ಅವನೊಡನೆ ಕೆಲವು ಜನ ಸಿಪಾಯಿಗಳನ್ನು ಕೊಟ್ಟನು ಹೇಜೀಬನು ತನ್ನನ್ನು ಹಿಂಸಿಸಿದ ಸೈನಿಕರ ರಾಹುಟಿಗಳನ್ನು ತೋರಿಸಿದನು; ಆಗ ಅಲ್ಲಿದ್ದ ಸಿಪಾಯಿಗಳು ರಾಜಾಜ್ಞೆಯಂತೆ ದರ್ಬಾರಕ್ಕೆ ತರಲ್ಪಟ್ಟರು. ಸಮ್ರಾಟನು ಅವರ ಅಪರಾಧವು ನಿಜವೆಂದು ಕಂಡು ಬಂದ ಬಳಿಕ, ಅವರಿಗೆ ಕಡುತರವಾದ ಶಿಕ್ಷೆಯನ್ನು ಕೊಟ್ಟನು. ಸಮ್ರಾಟನ ಈ ನ್ಯಾಯನಿರ್ಣಯ ಪದ್ಧತಿಯನ್ನು ನೋಡಿ ಹೇಜೀಬನಿಗೆ ಸಂತೋಷವಾಯಿತು.

ಬಳಿಕ ಸಮ್ರಾಟನು ಹೇಜೀಬನೊಡನೆ ಏಕಾಂತದಲ್ಲಿ ಕುಳಿತು ತನಗೆ ಬೇಕಾದ ಸಂಗತಿಗಳನ್ನು ಕೇಳಿಕೊಂಡನು. ಸಮ್ರಾಟನು ಬಹು ಧೂರ್ತನಿದ್ದದರಿಂದ ಯಾರ ನಂಬಗೆಯನ್ನೂ ಹಿಡಿಯುತ್ತಿದ್ದಿಲ್ಲ; ಪ್ರತಿಯೊಂದು ಸಂಗತಿಯನ್ನೂ ಚಿಕಿತ್ಸಕ ಬುದ್ಧಿಯಿಂದ ವಿಚಾರಿಸುವದು ಅವನ ಹುಟ್ಟುಗುಣವಾಗಿತ್ತು. ಅದರಂತೆ ಅವನು ಹೇಜೀಬನನ್ನು ವಿಚಾರಿಸಿ ಭಂಡಾರೀ ರಾಜನ ದೋಷವೇನಾದರೂ ಹೊರಬೀಳುವದೇನೆಂದು ನೋಡಿದನು; ಆದರೆ ಹೇಜೀಬನಾದರೂ ಕಡಿಮೆಯವನಿದ್ದಿಲ್ಲ. ಅವನು ತನಗೆ ಗೊತ್ತಿದ್ದ ಸಂಗತಿಗಳನ್ನು ಸಹ ಹೇಳದೆ ಯುಕ್ತಿಯಿಂದ

ಪಾರಾದನು. ಸಮ್ರಾಟನು ಪ್ರಕೃತೋಚಿತವಾದ ಪ್ರತ್ಯುತ್ತರವನ್ನು ಬರೆಯಿಸಿ ಹೇಜೀಬನ ಕೈಯಲ್ಲಿ ಕೊಟ್ಟು ಅವನಿಗೆ ಅಪ್ಪಣೆ ಕೊಟ್ಟನು.

ಹೇಜೀಬನು ಹೊರಟು ಹೋದ ಬಳಿಕ ಸಮ್ರಾಟನು ಭಂಡಾರೀ ರಾಜನ ಪತ್ರವನ್ನು ಪುನಃ ಕೈಯಲ್ಲಿ ತಕ್ಕೊಂಡು ಓದತೊಡಗಿದನು. ಪತ್ರವನ್ನು ಓದುತ್ತ:—"ನಿಮ್ಮ ಸ್ನೇಹವನ್ನು ಸಂಪಾದಿಸುವ ಇಚ್ಛೆಯು ನನಗಿರುತ್ತದೆ" ಎಂಬ ವಾಕ್ಯದ ವರೆಗೆ ಬಂದನು. ಆ ಮಾತು ಅವನಿಗೆ ಉಪಚಾರವೆಂದು ತೋರಹತ್ತಿತು. ಯಾಕಂದರೆ ತಾನು ಇಡಿ ಗುರ್ಜರ ಭೂಪ್ರದೇಶವನ್ನು ಕೈವಶ ಮಾಡಿಕೊಳ್ಳಲು ಹವಣಿಸುತ್ತಿರಲು, ಭಂಡಾರೀ ರಾಜನಂಥ ತೇಜಸ್ವಿಗಳಿಗೆ ಸಿಟ್ಟು ಬಾರದೆ ಹೋಗುವದು ಅಸಂಭವವೆಂದು ಅವನು ತಿಳಿದಿದ್ದನು; ಆದರೆ ಭಂಡಾರೀ ರಾಜನ ಈ ಪತ್ರದಲ್ಲಿ ಏನಾದರೂ ಮೋಸವಿರಬೇಕೆಂದು ಅವನು ನಿಶ್ಚಯಿಸಿದನು. ಅವನು ಮಹಾ ಬಲಿಷ್ಠನಿದ್ದದರಿಂದ ಯಾರ ಮೋಸಗಾರಿಕೆಗೂ ಸೊಪ್ಪು ಹಾಕುತ್ತಿದ್ದಿಲ್ಲ. ಆದ್ದರಿಂದ ಅವನು ಆ ವಿಷಯದ ಕಡೆಗೆ ದುರ್ಲಕ್ಷ್ಯ ಮಾಡಿ, ಪಾಳಯವನ್ನು ಮುಂದೆ ಹೊರಡಿಸಬೇಕೆಂದು ಯೋಚಿಸಿ, ಸೇನಾಪತಿಯನ್ನು ಕರೆ ಕಳುಹಿದನು.

ಅಪ್ಪಣೆಯ ಮೇರೆಗೆ ಸೇನಾಪತಿಯು ಬರಲು ಸಮ್ರಾಟನು ಅವನಿಗೆ ರಹಸ್ಯವಾಗಿ ಭಂಡಾರೀ ರಾಜನ ಪತ್ರವನ್ನು ತೋರಿಸಿ, ಶತ್ರುಗಳು ಮೆಲ್ಲಗೆ ಉಪಾಯದಿಂದ ನಮ್ಮನ್ನು ಕಷ್ಟಕ್ಕೀಡು ಮಾಡಬೇಕೆಂದು ಹವಣಿಸುವಂತೆ ತೋರುತ್ತದೆ; ಆದರೆ ನಾವು ಹೀಗೆ ಸುಖಲೋಲುಪರಾಗಿ ಕುಳಿತುಕೊಳ್ಳುವದು ಹಿತವಲ್ಲ. ವೃದ್ಧ ಲಕ್ಷ್ಮಣದಾಸನಿಗೆ ವಚನಕೊಟ್ಟಂತೆ, ನಾವು ಕಿರುಮಂಜೀ ಕೋಟೆಯನ್ನು ಬೇಗನೆ ಮುಟ್ಟುವದು ಅವಶ್ಯವಿರುವದು. ನಮ್ಮ ಚಾರರು ಇನ್ನೂ ಬರಲಿಲ್ಲವಷ್ಟೇ; ಆದರೂ ಚಿಂತೆಯಿಲ್ಲ, ನಾಳೆಗೆ ಬೆಳಿಗ್ಗೆ ಇಲ್ಲಿಂದ ಪಾಳಯವನ್ನು ಕಿರುಮಂಜೆಗೆ ಹೊರಡಿಸಬೇಕು; ಇದರಂತೆ ಸೈನ್ಯದಲ್ಲಿ ಡಂಗುರವನ್ನು ಸಾರಿಸಿರಿ, ಎಂದು ಅಪ್ಪಣೆ ಮಾಡಿದನು. ಸೇನಾಪತಿಯು ಮಹದಾಜ್ಞೆಯೆಂದು ಅದರಂತೆ ಪಾಳಯದಲ್ಲಿ ಡಂಗುರವನ್ನು ಹೊಡೆಯಿಸಿದನು.

ಗೊತ್ತಾದ ಮೇರೆಗೆ ಪಾಳಯವು ಸ್ಥಳವನ್ನು ಬಿಟ್ಟಿತು. ಅದು ಮೆಲ್ಲ ಮೆಲ್ಲಗೆ ಸಾಗುತ್ತ ಒಂದು ದೊಡ್ಡ ಅರಣ್ಯವನ್ನು ಪ್ರವೇಶಿಸಿತು. ಆ ಅರಣ್ಯವು ವೃಕ್ಷಗಳಿಂದ ನಿಬಿಡವಾಗಿತ್ತು. ಅಲ್ಲಲ್ಲಿಗೆ ಗುಡ್ಡಗಳೂ ಕಂದರಗಳೂ ಭಯಾನಕವಾಗಿ ತೋರುತ್ತಿದ್ದವು. ಶ್ವಾಪದಗಳಿಗಂತೂ ಲೆಕ್ಕವೇ ಇದ್ದಿಲ್ಲ. ಸಮ್ರಾಟನ ಸೈನಿಕರು ಆ ಭಯಾನಕ ಅರಣ್ಯವನ್ನು ಕೌತುಕದಿಂದ ನಿರೀಕ್ಷಿಸುತ್ತ ಬಾಜಾರ ಬುಣುಗಿನವರು ಮಾಡಿದ ದಾರಿಯನ್ನು ಹಿಡಿದು ಸಾಗುತ್ತಿದ್ದರು. ಅಷ್ಟರಲ್ಲಿ

ಆರ್ತಧ್ವನಿಯು ಕೇಳಿಸಿತು. ಸ್ವರವು ಸ್ತ್ರೀಕಂಠದಿಂದ ಹೊರಟಿದ್ದಿರಬೇಕೆಂದು ತರ್ಕಿಸಲಿಕ್ಕೆ ಪ್ರಮಾಣಗಳೇ ಬೇಡಾಗಿದ್ದವು; ಆದರೆ ಯಾವ ದಿಕ್ಕಿನಿಂದ ಸ್ವರವು ಕೇಳಬರುತ್ತದೆಂಬುದನ್ನು ಸಮ್ರಾಟನು ಲಕ್ಷ್ಯಗೊಟ್ಟು ಕೇಳಿದನು ಆ ಕೂಡಲೆ ಅವನು ಬಳಿಯಲ್ಲಿದ್ದ ಸೇನಾನಾಯಕನಿಗೆ ಅಪ್ಪಣೆ ಮಾಡಿದನು. ಸೇನಾಪತಿಯು ಚಿಕ್ಕದೊಂದು ಪಥಕವನ್ನು ತಕ್ಕೊಂಡು ಸ್ವರವು ಕೇಳಬರುವ ದಿಕ್ಕಿಗೆ ಸಾಗಿದನು. ಆತನ ಸೈನಿಕರೂ ವೇಗಶಾಲಿಗಳಾದ ಕುದುರೆಗಳನ್ನೇರಿ ಒಂದು ಗುಡ್ಡವನ್ನು ಹತ್ತಿ ಇಳಿದರು. ಆಗ ಒಂದು ಭಯಂಕರ ನೋಟವು ಅವರ ಕಣ್ಣಿಗೆ ಬಿತ್ತು. ಗುಡ್ಡದ ಕೆಳಗೆ ಒಂದು ವಿಶಾಲವಾದ ಬೈಲು ಪ್ರದೇಶವಿತ್ತು; ಆ ಪ್ರದೇಶದಲ್ಲಿ ಒಂದು ಸುಂದರವಾದ ಡೋಲಿಯು ಇದ್ದು, ಅದರ ಬಳಿಯಲ್ಲಿ ಇಪ್ಪತ್ತು-ಇಪ್ಪತ್ತೈದು ಜನ ಸಿಪಾಯಿಗಳು ಆದೇ ಧಾರಾತೀರ್ಥದಲ್ಲಿ ಪತನ ಹೊಂದಿದ್ದರು. ಅವರಲ್ಲಿ ಕೆಲವರು ಇಹಲೋಕದಿಂದ ಮುಕ್ತರಾಗಿದ್ದರು. ಕೆಲವರು ಇಹಲೋಕದಲ್ಲಿ ಒಂದು ಕಾಲು, ಪರಲೋಕದಲ್ಲಿ ಒಂದು ಕಾಲು ಇಟ್ಟು ನರಳುತ್ತಿದ್ದರು ಅವರು ಒಮ್ಮೊಮ್ಮೆ ನೀರು-ನೀರು ಎಂದು ಕೂಗುತ್ತಿದ್ದರು. ನಾಲ್ಕೆಂಟು ಜನರು ಸಶಸ್ತ್ರವಾಗಿ ಡೋಲಿಯ ಸುತ್ತುವರೆದು ನಿಂತು, ಡೋಲಿಯಲ್ಲಿದ್ದ ಒಬ್ಬ ಸ್ತ್ರೀಯ ಮೇಲೆ ಬಲಾತ್ಕಾರವನ್ನು ನಡಿಸಿದ್ದರು. ಅವರ ಆ ರಾಕ್ಷಸೀ ವೃತ್ತಿಯಿಂದ ಭೀತಳಾದ ಆ ಸ್ತ್ರೀಯು ಭಗವಂತನಿಗೆ ಮೊರೆ ಇಡುವದಕ್ಕಾಗಿಯೋ-ಏನೋ ಎಂಬಂತೆ ಒಂದೇಸವನೆ ಚೀರುತ್ತಿದ್ದಳು. ಈ ಸ್ತ್ರೀಯ ಚೀರಾಟವೇ ಸಮ್ರಾಟನ ಕಿವಿಯ ವರೆಗೆ ಬಂದಿತ್ತು.

ಈ ಮೇರೆಗಿರುವ ನೋಟವನ್ನು ನೋಡಿ ಸಮ್ರಾಟನ ಸೇನಾನಾಯಕನಿಗೆ ವಿದ್ಯಮಾನ ಪರಿಸ್ಥಿತಿಯು ತಟ್ಟನೆ ಹೊಳೆಯಿತು. ಯಾವಳೋ ಒಬ್ಬ ಶ್ರೇಷ್ಠ ಮನೆತನದ ಹೆಣ್ಣುಮಗಳು ಯಾವ ಕಾರಣದಿಂದಲೋ ತನ್ನ ಅನುಚರರೊಡನೆ ಎಲ್ಲಿಗೋ ಹೊರಟಿರುವಾಗ ದಾರಿಯಲ್ಲಿ ಕೆಲ ಜನ ವಿಷಯಲಂಪಟಿಗಳು ಅವಳ ಡೋಲಿಯನ್ನು ತರುಬಿ ಈ ಅನರ್ಥವನ್ನು ನಡಿಸಿರಬೇಕು ಎಂಬ ವಿಚಾರಗಳು ಅವನ ತಲೆಯಲ್ಲಿ ತುಂಬಿದವು ಅವನು ಲಗುಬಗೆಯಿಂದ ಡೋಲಿಯ ಬಳಿಗೆ ಧಾವಿಸಿದನು. ಈ ಆಗಂತುಕನು ಬರುವದನ್ನು ನೋಡಿ ಡೋಲಿಯನ್ನು ಮುತ್ತಿದ್ದ ಆ ವಿಷಯಾಂಧರು ಕಾಲ್ದೆಗೆದರು. ಇದೇನು ಸೋಜಿಗವೆಂದು ಡೋಲಿಯಲ್ಲಿ ಹುದುಗಿಕೊಂಡು ಕುಳಿತಿದ್ದ ಸ್ತ್ರೀಯು ಬೊಗ್ಗಿ ನೋಡಿದಳು. ತನ್ನ ಮೇಲೆ ಅತ್ಯಾಚಾರ ನಡಿಸಿದ ಚಾಂಡಾಲರು ದಾರಿ ಸಿಕ್ಕತ್ತ ಓಡುತ್ತಿರಲು, ತನ್ನ ಬಳಿಗೆ ಮತ್ತೊಂದು ಸೈನಿಕರ ಗುಂಪು ಬರುವದೆಂದು ತಿಳಕೊಂಡಳು. ಆಗ ಅವಳು ಮತ್ತಷ್ಟು ಗೊಂದಲದಲ್ಲಿ ಬಿದ್ದು, ದೇವರಿಗೆ ಮೊರೆ ಇಡಲಾರಂಭಿಸಿದಳು. ಅಷ್ಟ

ರಲ್ಲಿ ಸಮ್ರಾಟನ ಸೇನಾಪತಿಯು ಅಲ್ಲಿಗೆ ಬಂದನು. ಅವನು ತನ್ನ ಸೈನಿಕರಲ್ಲಿ ಕೆಲವರನ್ನು ಡೋಲಿಯ ಮೇಲೆ ಅತ್ಯಾಚಾರ ನಡಿಸಿದ ನೀಚರನ್ನು ಬೆನ್ನಟ್ಟಿ ಹಿಡ ತರಲು ಈ ಮೊದಲೇ ಕಳುಹಿಸಿದ್ದನು. ಸ್ವಲ್ಪ ಹೊತ್ತಿನಲ್ಲಿ ಅವರು ಆ ಚಾಂಡಾ ಲರನ್ನು ಹಿಡತಂದರು.

ಸೇನಾಪತಿಯು ಡೋಲಿಯಲ್ಲಿದ್ದ ಸ್ತ್ರೀಯನ್ನು ನೋಡಿದನು. ಸ್ತ್ರೀಯು ಅತ್ಯಂತ ಲಾವಣ್ಯವತಿಯಾಗಿದ್ದಳು. ಆಕೆಯ ವಯಸ್ಸು ಇಪ್ಪತ್ತರ ಒಳಹೊರ ಗಿರಬಹುದು. ಅವಳ ಅಂಗಕಾಂತಿಯು ಸುಮನೋಹರವಾದ ಕೇತಗೀ ವರ್ಣ ದಿಂದ ನೋಟಕರಲ್ಲಿ ಆನಂದವನ್ನುಂಟು ಮಾಡುತ್ತಿತ್ತು. ಅವಳ ಅವಯವಗಳ ಸೌಷ್ಟವವು ವರ್ಣಿಸಲಶಕ್ಯವಾಗಿತ್ತು; ಜಿಂಕೆಯನ್ನ ಜಯಿಸುವ ಅವಳ ವಿಶಾಲ ನೇತ್ರಗಳೂ, ಸರಳವಾದ ನಾಶಿಕವೂ, ತಿದ್ದಿ ಮಾಡಿದಂತಿರುವ ಕುಡಿಹುಬ್ಬುಗಳೂ ಬ್ರಹ್ಮನ ಕೌಶಲ್ಯವನ್ನು ಚನ್ನಾಗಿ ಬೈಲಿಗಿಡುತ್ತಿದ್ದವು. ಒಟ್ಟಿಗೆ ಆ ಸ್ತ್ರೀಯು ಮಾನವೀ ಪ್ರಾಣಿಗಿರತಕ್ಕ ಸ್ವಾಭಾವಿಕ ಸೌಂದರ್ಯವನ್ನು ಮೀರಿದ್ದಳು. ಅವಳ ಆ ಅಪ್ರತಿಮ ಸೌಂದರ್ಯಕ್ಕೆ ಸಮ್ರಾಟನ ಸೇನಾಪತಿಯು ಕ್ಷಣಹೊತ್ತು ಸ್ತಂಭಿ ತನಾದನು. ಆ ಸಮಯದಲ್ಲಿ ಅವನು ಉಸಿರನ್ನು ಸಹ ಆಡಿಸಲಿಲ್ಲ; ಕಣ್ಣುಗಳ ರೆಪ್ಪೆಗಳನ್ನೂ ಬಡಿಯಲಿಲ್ಲ.

ಬಳಿಕ ಉತ್ತರಕ್ಷಣದಲ್ಲಿ ಸೇನಾಪತಿಯು ತನ್ನ ಸ್ಥಿತಿಯನ್ನು ನೋಡಿ ನಾಚಿ ಕೊಂಡನು. ಅವನು ಶುದ್ಧಿಯ ಮೇಲೆ ಬಂದು ತಾನು ಭ್ರಾಂತನಂತೆ ನೋಡು ವಾಗ ಆ ಸ್ತ್ರೀಯು ಮನಸ್ಸಿನಲ್ಲಿ ಬಹಳವಾಗಿ ಕಳವಳಗೊಂಡಿರಬಹುದೆಂದು ಯೋಚಿಸಿ, ಅತ್ಯಂತ ಸೌಜನ್ಯವನ್ನು ತಾಳಿದನು; ಮತ್ತು ಆ ಸ್ತ್ರೀಯನ್ನು ಕುರಿತು ನುಡಿದನೇನಂದರೆ:—"ಭಗಿನೀ, ನಿನ್ನ ಸುಸ್ವರೂಪವನ್ನು ನೋಡಿ ಬೆರಗಾಗಿ ಕ್ಷಣಹೊತ್ತು ನಿರ್ಲಜ್ಜತನದಿಂದ ನಿನ್ನ ರೂಪವನ್ನು ನೋಡಿದೆನು. ಇದಕ್ಕಾಗಿ ನಾನು ನಿನ್ನ ಕ್ಷಮೆಯನ್ನು ಬೇಡುತ್ತೇನೆ. ನನ್ನಲ್ಲಿ ನಿನ್ನ ವಿಷಯವಾಗಿ ಪಾಪ ಬುದ್ಧಿಯು ತಿಲಮಾತ್ರವಾದರೂ ಹುಟ್ಟಿರುವದಿಲ್ಲ. ನಾನು ನಿನ್ನನ್ನು ಒಡಹುಟ್ಟಿದ ತಂಗಿಯೆಂದು ಭಾವಿಸುತ್ತೇನೆ. ನನ್ನ ಗುರುತು ನಿನಗಿಲ್ಲ-ನಿನ್ನ ಗುರುತು ನನಗಿಲ್ಲ; ಆದರೂ ದೈವಯೋಗವು ವಿಚಿತ್ರವಾದದ್ದು. ಈ ದಿವಸ ನಿನ್ನ ಪಾತಿವ್ರತ್ಯವನ್ನು ಸಂರಕ್ಷಿಸುವ ಮಹತ್ಕಾರ್ಯವು ದೈವಯೋಗದಿಂದಲೇ ನನಗುಂಟಾಗಿರುತ್ತದೆ. ನೀನು ಅಧೈರ್ಯಗೊಳ್ಳಬೇಡ. ನಾನು ಚಾಲುಕ್ಯ ಸಮ್ರಾಟನ ಸೇನಾನಾಯಕ ನಿರುತ್ತೇನೆ. ನಮ್ಮ ದಂಡು ಇಲ್ಲಿಯೇ ಸಮೀಪವಲ್ಲಿ ಹಾದು ಹೋಗುತ್ತಿ ರಲು, ನಿನ್ನ ಆರ್ತಧ್ವನಿಯು ನಮಗೆ ಕೇಳಿಸಿತು. ಕೂಡಲೆ ನಮ್ಮ ಸಮ್ರಾ ಟರು ನಮ್ಮನ್ನು ಇಲ್ಲಿಗೆ ಕಳಿಸಿದರು. ಸಂಕಟಕ್ಕೀಡಾದವರನ್ನು ಬಿಡಿಸುವದ

ರಲ್ಲಿ ನಮ್ಮ ಸಮ್ರಾಟರ ಪ್ರಸಿದ್ಧಿಯು ಒಹಳಿರುತ್ತದೆ. ಹೆಚ್ಚು ಹೇಳಲೇನು? ನಿನ್ನ ಪಾತಿವ್ರತ್ಯ ಪ್ರಭಾವವು ವಿಶೇಷವಾಗಿರುವದೆಂತಲೇ ನೀನು ನಮ್ಮ ಮಹಾ ರಾಜರ ದಯೆಗೆ ಪಾತ್ರಳಾಗಿರುತ್ತೀ; ನೀನು ಯಾರೆಂಬದನ್ನು ಹೇಳು.''

ಈ ಮೇರೆಗೆ ಸೇನಾಪತಿಯು ಮಾತನಾಡಲು, ಡೋಲಿಯಲ್ಲಿದ್ದ ಸ್ತ್ರೀಗೆ ಸ್ವಲ್ಪ ಧೈರ್ಯವು ಬಂತು. ಸಮ್ರಾಟನ ಹೆಸರನ್ನು ಅವಳು ಕೇಳಿದ್ದಳು. ಏನೇ ಆಗಲಿ, ದುಷ್ಟರ ಹಾವಳಿಯು ತಪ್ಪಿತೆಂದು ಮನಸ್ಸಿನಲ್ಲಿ ಸ್ವಲ್ಪ ಸಮಾಧಾನ ಹಚ್ಚಿ ಕೊಂಡು ತನ್ನ ವೃತ್ತಾಂತವನ್ನು ಹೇಳತೊಡಗಿದಳು:

"ಸೋದರರೇ, ಕಟುಕರ ಕೈಯಲ್ಲಿ ಸಿಕ್ಕ ಬಡ ಆಕಳದಂತೆ ನಾನು ಸಂಕಟಕ್ಕೀಡಾಗಿರುವಾಗ, ನೀವು ಬಂದದ್ದು ದೇವರ ಅನುಗ್ರಹವೆಂತಲೇ ತಿಳಿಯು ತ್ತೇನೆ. ನಮ್ಮ ಗುರ್ಜರ ದೇಶವು ಈಗ ಪಾಪಮಯವಾಗಿರುತ್ತದೆ; ಪಾಪ-ಪುಣ್ಯ ಧರ್ಮಾಧರ್ಮಗಳ ವಿಚಾರವು ಎಲ್ಲಿಯೂ ಉಳಿದಿರುವದಿಲ್ಲ; ನಾನು ಭದ್ರ ಗಡದ ರಾಜನ ಧರ್ಮ ಪತ್ನಿಯು; ಭಂಡಾರೀ ರಾಜನ ತಂಗಿಯು; ಭದ್ರಗಡವು ಇಲ್ಲಿಂದ ಬಹು ದೂರ ಇರುವದು. ಕೆಲವು ದಿವಸಗಳ ಹಿಂದೆ ವಿಷಯಲಂಪಟ ಯಾದ ಕೀರ್ತಿಸಿಂಹನೆಂಬೊಬ್ಬ ನೀಚ ಸಂಸ್ಥಾನಿಕನು ದುಷ್ಟಬುದ್ಧಿಯಿಂದ ನಮ್ಮ ರಾಜಧಾನಿಗೆ ಮುತ್ತಿಗೆಯನ್ನು ಹಾಕಿದನು. ಕೀರ್ತಿಸಿಂಹನು ಅತ್ಯಂತ ನೀಚನೂ ಕ್ರೂರನೂ ಇದ್ದದರಿಂದ, ನನ್ನ ಪತಿಯು ನನ್ನನ್ನು ಅರಮನೆಯ ಚೋರ ಮಾರ್ಗ ದಿಂದ ನನ್ನ ತವರು ಮನೆಗೆ ಕಳುಹಿಸಬೇಕೆಂದು ಯೋಚಿಸಿ, ಅದರಂತೆ ಯೋಗ್ಯ ವ್ಯವಸ್ಥೆಯನ್ನು ಮಾಡಿ ಕಳುಹಿಸಿ ಕೊಟ್ಟನು. ಇದುವರೆಗೆ ನಾನು ಸುರಕ್ಷಿತ ವಾಗಿ ಬಂದೆನು; ಆದರೆ ಈ ದಿನ ಅಕಸ್ಮಾತ್ ಯಾರೋ ದುಷ್ಟರು ದ್ರವ್ಯಲೋಭ ದಿಂದ ನಮ್ಮ ಜನರನ್ನು ಮುತ್ತಿ ಕಾದಾಡಿದರು. ಆ ಜನರ ಸಂಖ್ಯೆಯು ಹೆಚ್ಚು ಇದ್ದದರಿಂದ ನಮ್ಮ ಸಿಪಾಯಿಗಳು ಈಡಾಗಲಿಲ್ಲ. ಎರಡು-ಮೂರು ತಾಸುಗ ಳಲ್ಲಿಯೇ ಅವರೆಲ್ಲರೂ ನೆಲಕ್ಕೆ ಬಿದ್ದರು. ಪಾಪ! ನನ್ನ ಸಲುವಾಗಿ ಆ ನಮ್ಮ ಸೇವಕರು ಪ್ರಾಣಕ್ಕೆ ಎರವಾದರು! ಉಪಾಯವಿಲ್ಲ'' ಎಂದು ಕಣ್ಣಿಗೆ ನೀರು ತಂದಳು.

ಸ್ತ್ರೀಯ ಮಾತು ಕೇಳಿ ಗುರ್ಜರ ದೇಶದ ರಾಜಕೀಯ ಸ್ಥಿತಿಯ ನಕ್ಷೆಯು ಒಮ್ಮೆಲೆ ಸೇನಾಪತಿಯ ಹೃದಯದಲ್ಲಿ ಮೂಡಿದಂತಾಯಿತು. ಅವನು ಆಕೆಯ ವಿಷಯವಾಗಿ ಕನಿಕರಪಟ್ಟು: ತಂಗೀ, ಇನ್ನು ಹೆದರಬೇಡ; ನಡೆ ನಮ್ಮ ಸಮ್ರಾಟನ ಕಡೆಗೆ; ಆ ನಂತರ ನಮ್ಮ ಸಮ್ರಾಟನ ಅಪ್ಪಣೆ ಪಡೆದು, ನಿನ್ನನ್ನು ನಿನ್ನ ತವರು ಮನೆಗೆ ಸುರಕ್ಷಿತವಾಗಿ ಮುಟ್ಟುವಂತೆ ವ್ಯವಸ್ಥೆ ಮಾಡಿ ಕಳಿಸುವೆನು, ಎಂದನು, ಸೇನಾಪತಿಯ ಈ ಮಾತಿನಂತೆ ಆ ಸ್ತ್ರೀಯು ಅವನೊಡನೆ ಹೊರಡುವದಕ್ಕೆ ಸ್ವಲ್ಪ

ಅನುಮಾನ ಮಾಡಹತ್ತಿದಳು. ಅದನ್ನು ತಿಳಿದು ಸೇನಾಪತಿಯು ಸಮ್ರಾಟನ ಪಾಪಭೀರುತನವು ಎಷ್ಟೆಂಬದನ್ನು ವಿವರಿಸಿ ಹೇಳಿದನು. ಸ್ತ್ರೀಯು ಉಪಾಯವಿಲ್ಲದೆ ಸಮ್ರಾಟನೆಡೆಗೆ ಹೋಗಲಿಕ್ಕೆ ಒಡಂಬಟ್ಟಳು. ಅಷ್ಟರಲ್ಲಿ ಸೇನಾಪತಿಯು ಕೆಲವು ಜನ ಸಿಪಾಯರು ಗಾಯವಾಗಿ ಬಿದ್ದ ಕೆಲ ಜನ ಸಿಪಾಯಿಗಳಿಗೆ ಉಪಚಾರವನ್ನು ನಡಿಸಿದ್ದರಿಂದ, ಕೆಲಕೆಲವರು ಶುದ್ಧಿಯ ಮೇಲೆ ಬಂದಿದ್ದರು. ಉಳಿದವರು ಇಹಲೋಕವನ್ನು ಬಿಟ್ಟು ಹೋಗಿದ್ದರು. ಬಳಿಕ ಸೇನಾಪತಿಯು ಶವಗಳ ವ್ಯವಸ್ಥೆಯನ್ನು ಮಾಡಿಸಿ ಶುದ್ಧಿಯ ಮೇಲೆ ಬಂದ ಸಿಪಾಯಗಳನ್ನೂ ಆ ತರುಣಿಯನ್ನೂ ಕರಕೊಂಡು ಪಾಳಯದ ಕಡೆಗೆ ತಿರುಗಿದನು. ಹಾದಿಯಲ್ಲಿ ಸೇನಾಪತಿಯ ಮನಸ್ಸಿನಲ್ಲಿ ಬಗೆಬಗೆಯ ವಿಚಾರಗಳು ಬರತೊಡಗಿದವು. "ನಾನು ಈ ತರುಣಿಯನ್ನಂತೂ ಸಮ್ರಾಟನೆಡೆಗೆ ಕರಕೊಂಡು ಹೊರಟೆನು. ಸಮ್ರಾಟನು ಪರನಾರೀಸೋದರನೂ ಪಾಪಭೀರುವೂ ಜಿತೇಂದ್ರಿಯನೂ ಇರುವದು ನಿಜ; ಆದರೆ ಯಾರಿಗೆ ಗೊತ್ತು? ಮನುಷ್ಯನ ಮನಸ್ಸು ಯಾವ ವೇಳೆಯಲ್ಲಿ ಹೇಗೆ ತಿರುಗುತ್ತದೆಂಬದನ್ನು ಹೇಳುವದಕ್ಕೆ ಬರುವದಿಲ್ಲ. ಇಂಥ ಲೋಕೋತ್ತರ ಸುಂದರಿಯನ್ನು ನೋಡಿ ಸಮ್ರಾಟನ ಮನಸ್ಸು ವಿಷಯಾಸಕ್ತವಾದರೆ ಆಗಬಾರದೇಕೆ? ಅಹಾ! ಎಂಥ ದಿವ್ಯ ಸೌಂದರ್ಯವಿದು! ಮುಖವೆಷ್ಟು ಮನೋಹರ! ಅಂಗಕಾಂತಿಯ ಸೊಬಗನ್ನಂತೂ ಬಣ್ಣಿಸುವ ಹಾಗಿಲ್ಲ. ನನಗಂತೂ ಇವಳ ಲಾವಣ್ಯವನ್ನು ಸೂರೆಗೊಳ್ಳುವವನೇ ಧನ್ಯನೆಂದು ಅನಿಸುತ್ತದೆ. ಇದರಲ್ಲಿ ನಮ್ಮ ಸಮ್ರಾಟನ ಪರೀಕ್ಷೆಯು ಆಗಿ ಹೋಗುತ್ತದೆ. ಯಾಕಂದರೆ ಈಕೆಯನ್ನು ನೋಡಿದ ಮಹರ್ಷಿಗಳಲ್ಲಿ ಕೂಡ ಪಾಪಬುದ್ಧಿಯುಂಟಾಗಬಹುದು! ನಮ್ಮ ಮಹಾರಾಜರ ಸ್ಥಿತಿಯು ಹೇಗೆ ಆಗುತ್ತದೋ ನೋಡುವಾ "

ಈ ಪ್ರಕಾರ ಸೇನಾಪತಿಯು ಯೋಚಿಸುತ್ತ ನಡೆದಿರಲು ಪಾಳಯವು ಸಮೀಪಿಸಿತು. ಅದರ ಪ್ರಚಂಡ ಸಪ್ಪಳವನ್ನು ದೂರಿನಿಂದಲೇ ಕೇಳಿ ಆ ಸ್ತ್ರೀಯು ವಿಸ್ಮಿತಳಾದಳು. ಸೇನಾಪತಿಯು ಕುದುರೆಗಳನ್ನು ಒತ್ತರದಿಂದೋಡಿಸುತ್ತ ಪಾಳಯವನ್ನು ಸೇರಿ ಸಮ್ರಾಟನೆಡೆಗೆ ಹೋದನು. ಬಳಿಕ ಅವನು ನಡೆದ ಎಲ್ಲ ಸಂಗತಿಗಳನ್ನು ಸಮ್ರಾಟನಿಗೆ ರಹಸ್ಯವಾಗಿ ಹೇಳಿದನು. ಮತ್ತು ಸಂಗಡ ಕರಕೊಂಡು ಬಂದಿದ್ದ ಆ ತರುಣಿಯನ್ನು ಅವನಿಗೊಪ್ಪಿಸಿ ಗಾಯಹೊಂದಿದ ಜನರನ್ನು ತೋರಿಸಿದನು. ಸಮ್ರಾಟನು ಆ ತರುಣಿಯ ಬಗ್ಗೆ ಎಲ್ಲ ಸಂಗತಿಗಳನ್ನು ಕೇಳಿ ಕಳವಳಗೊಂಡು ಆಕೆಯನ್ನು ಕುರಿತು:—"ತಂಗೀ, ದುಃಖಪಡಬೇಡ; ಭಂಡಾರೀ ರಾಜನು ನಿನಗೆ ಅಣ್ಣನೆಂದ ಬಳಿಕ ನನ್ನನ್ನೂ ಅಣ್ಣನೆಂದು ತಿಳಿ; ಯಾಕಂದರೆ ಆತನು ನಮ್ಮ ಮಿತ್ರತ್ವವನ್ನು ಬೆಳೆಸಲು ಬಯಸಿ ಪತ್ರವನ್ನು ಬರೆದಿ

ರುವನು, ಇರಲಿ; ಪ್ರಸಂಗ ಬಂದರೆ ನಾವೂ ಭಂಡಾರೀ ರಾಜನ ಆತಿಥ್ಯವನ್ನು ಕೈಕೊಳ್ಳಬೇಕಾಗುವದು; ಅಲ್ಲಿಯ ವರೆಗೆ ನೀನು ನಮ್ಮ ಪಾಳೆಯದಲ್ಲಿರುತ್ತಿದ್ದರೆ ಸುಖವಾಗಿ ಇರಬಹುದು. ನಿನಗೆ ಯಾರಿಂದಲೂ ಯಾವ ಬಗೆಯಿಂದಲೂ ತೊಂದರೆಯಾಗಲಾರದು. ಒಂದುವೇಳೆ ನೀನು ಇಲ್ಲಿ ಇರಲು ಇಚ್ಛಿಸದಿದ್ದರೆ, ನಿನ್ನನ್ನು ನಿನ್ನ ತವರು ಮನೆಗೆ ಸುರಕ್ಷಿತವಾಗಿ ಮುಟ್ಟಿಸುವ ವ್ಯವಸ್ಥೆ ಮಾಡುವೆನು, ಎಂದು ನುಡಿದನು. ಸಮ್ರಾಟನ ಈ ಉದಾರ ಹೃದಯವನ್ನು ನೋಡಿ ಆ ಸ್ತ್ರೀಗೆ ತುಂಬಾ ಸಂತೋಷವಾಯಿತು. ಅವಳು ಸಮ್ರಾಟನನ್ನು ಕುರಿತು ನುಡಿದಳೇನಂದರೆ:—"ಸಮ್ರಾಟನೇ, ನನ್ನನ್ನು ಇಲ್ಲಿ ಇಟ್ಟುಕೊಳ್ಳುವ ಗೊಡವೆಗೆ ಹೋಗಬೇಡ. ನನ್ನನ್ನು ಸುಖವಾಗಿ ತವರುಮನೆಗೆ ಹೋಗಗೊಡು; ನೀನು ನನ್ನನ್ನು ಆಪತ್ಕಾಲದಲ್ಲಿ ರಕ್ಷಿಸಿ ಕೀರ್ತಿವಂತನಾಗಿರುವೆ. ಅದರಂತೆ ನನ್ನನ್ನು ನನ್ನ ತವರುಮನೆಗೆ ಕಳುಹಿಸಿ ಕೀರ್ತಿಶಾಲಿಯಾಗು."

ಸಮ್ರಾಟನು ಪಾಪಭೀರುವೂ ನೀತಿವಂತನೂ ಆದ್ದರಿಂದ ಪರಸ್ತ್ರೀಯನ್ನು ಹತ್ತರ ಇಟ್ಟುಕೊಳ್ಳುವದು ಅಪಕೀರ್ತಿಗೆ ಸಾಧನವೆಂದು ತಿಳಿದು, ಕೂಡಲೆ ಆಕೆಯನ್ನು ತವರುಮನೆಗೆ ಕಳುಹಿಸುವ ಏತ್ತುಗಡೆ ಮಾಡಿದನು. ಆತನು ತನ್ನ ಒಡಹುಟ್ಟಿದ ಅಕ್ಕ ತಂಗಿಯರಂತೆ ಆಕೆಯನ್ನು ಗೌರವಿಸಿ, ಅವಳ ಯೋಗ್ಯತೆಗೆ ಸರಿಯಾದ ಉಡುಗರೆಯನ್ನು ಕೊಟ್ಟನು. ಸಮ್ರಾಟನ ಈ ಸರಳಹೃದಯವನ್ನು ನೋಡಿ, ತರುಣಿಗೆ ತುಂಬಾ ಸಂತೋಷವಾಯಿತು. ಬಳಿಕ ಆತನು ತನ್ನ ಸೈನ್ಯದಲ್ಲಿಯ ಒಂದು ಪಥಕವನ್ನು ಆಕೆಯ ಸಂರಕ್ಷಣೆಯಗೋಸುಗ ನೇಮಿಸಿ, ಆಕೆಯನ್ನು ಆಕೆಯ ತವರು ಮನೆಗೆ ಕಳುಹಿಸಿಕೊಟ್ಟನು. ಸಮ್ರಾಟನ ಈ ವರ್ತನವನ್ನು ನೋಡಿ ಆತನ ಪರಿವಾರವು ಬೆರಗು ಕಚ್ಚಿತು! ಸೇನಾಪತಿಯಂತೂ ಸಮ್ರಾಟನನ್ನು ಬಹಳವಾಗಿ ಕೊಂಡಾಡಿದನು. ತರುಣಿಯನ್ನು ನೋಡಿ ಸಮ್ರಾಟನ ಸ್ಥಿತಿಯು ಎಲ್ಲಿ ಚಂಚಲವಾಗುವದೋ ಎಂದು ಶಂಕಿಸುತ್ತಿದ್ದ ಸೇನಾಪತಿಗೆ ಸಮ್ರಾಟನ ಪವಿತ್ರ ಹೃದಯವನ್ನು ನೋಡಿ ದಂಗುಬಡಿದು ಹೋಯಿತು. ಆಗ ಸಮಸ್ತರಿಗೂ ರಾಜನ ನೀತಿಯು ತಿಳಿದು ಬಂದಿತು. ಅವನ ಈ ಅಖಂಡ ವಿಜಯಕ್ಕೂ ಇಂಥ ಸುಂದರಿಯನ್ನು ನೋಡಿ ಮನಸ್ಸು ಕರಗದೆ ಇರುವದಕ್ಕೂ ಅವನ ಏಕಪತ್ನೀ ವ್ರತಪ್ರಭಾವವೇ ಕಾರಣವೆಂದು ಎಲ್ಲರೂ ಮನಗಂಡರು.



## ೧೫ ವಿಮಲೆಯ ಚಿಂತೆ.

ಈ ಮೇರೆಗೆ ಸಮ್ರಾಟ ಭೂವಡನು ಪರಸ್ತ್ರೀ ವಿಷಯವಾಗಿ ಪವಿತ್ರ ಹೃದಯವನ್ನು ಬೈಲಿಗಿಡಲು, ಅವನ ಸೇನಾನಾಯಕರೇ ಮೊದಲಾದವರು ನಡುಗಿದರು. ಅವರು ಸಮ್ರಾಟನನ್ನು ಮೊದಲಿಗಿಂತಲೂ ಹೆಚ್ಚು ಪೂಜ್ಯಬುದ್ಧಿಯಿಂದ ಗೌರವಿಸಹತ್ತಿದರು. ಆತನ ಈ ಕೀರ್ತಿಯಿಂದ ದಂಡಿನವರ ಶೀಲವು ಬೆಳೆಯಿತು. ಅನ್ಯಾಯಗಳನ್ನು ಆಚರಿಸುವದಕ್ಕೆ ಅವರ ಮನಸ್ಸು ಹಿಂಜರಿಯಹತ್ತಿತು. ಹೀಗೆ ಸಮ್ರಾಟನ ನೀತಿಮತ್ತತೆಯು ಸರ್ವರನ್ನೂ ವ್ಯಾಪಿಸಿದ್ದರಿಂದ, ಆತನ ಸೈನ್ಯವು ಎಲ್ಲಿ ಹೋದರೂ ಎಲ್ಲಿ ಇಳಿದುಕೊಂಡರೂ ಜನರಿಗೆ ಹಿಂಸೆಯು ತಟ್ಟದಾಯಿತು. ಇಂಥ ಪ್ರಚಂಡ ಸೇನೆಯು ಭೂವಡ ಸಮ್ರಾಟನದಾಗದೆ ಇನ್ನೊಬ್ಬನದಾಗಿದ್ದರೆ ಇಷ್ಟೊತ್ತಿಗೆ ಗುರ್ಜರ ದೇಶದಲ್ಲಿ ಹಾ-ಹಾಕಾರವೆದ್ದು ಹೋಗುತ್ತಿತ್ತು. ಊರು-ಕೇರಿಗಳು ಅಗ್ನಿನಾರಾಯಣನ ಭಕ್ಷ್ಯಸ್ಥಾನದಲ್ಲಿ ಬೀಳುತ್ತಿದ್ದವು. ಎಷ್ಟೋ ಜನ ಪತಿವ್ರತೆಯರು ಶಾಪವನ್ನುಚ್ಚರಿಸುತ್ತ ಪ್ರಾಣತ್ಯಾಗ ಮಾಡುತ್ತಿದ್ದರು! ಆದರೆ ಈ ಯಾವ ಅನರ್ಥಗಳೂ ಒದಗದೆ ಸೈನ್ಯವು ತನ್ನ ದಾರಿಯನ್ನು ಹಿಡಿದು ಹೋಗುತ್ತಿರುವದರಿಂದ ಗುರ್ಜರ ನಿವಾಸಿಗಳು ಸಮ್ರಾಟನನ್ನು ಬಹು ವಿಧವಾಗಿ ಕೊಂಡಾಡುವರಲ್ಲದೆ, ತಾವಾಗಿಯೇ ಆತನ ಸೈನ್ಯಕ್ಕೆ ಆಹಾರವನ್ನು ಒದಗಿಸಿ ಸಹಾಯಮಾಡುತ್ತಿದ್ದರು. ಈ ಪ್ರಕಾರ ಸಮ್ರಾಟನು ತನ್ನ ಅಮೌಲ್ಯವಾದ ಶೀಲದಿಂದ ಅಪರಿಚಿತವಾದ ಗುರ್ಜರ ಭೂಮಿಗೆ ಪ್ರಿಯವಾಗುತ್ತ ಸೈನ್ಯವನ್ನು ಸಾಗಿಸಿಕೊಂಡು ನಡೆದಿರಲು, ಇತ್ತ ಅವನ ಶತ್ರುಗಳು ತಮ್ಮ ಸಿದ್ಧತೆಯನ್ನು ಭರದಿಂದ ನಡಿಸಿದ್ದರು.

ಈ ಕಾಲಕ್ಕೆ ಸಮ್ರಾಟನ ಶತ್ರುಗಳೆಂದರೆ ವಿಮಲೆಯೂ ಆಕೆಯ ಹಸ್ತಕರೂ ಆಗಿದ್ದರೆಂಬದು ನಮ್ಮ ವಾಚಕರಿಗೆ ಗೊತ್ತಿರುವದು. ಅವರಿಗೆ ಮುಖ್ಯ ಆಶ್ರಯದಾತೃವು ಭಂಡಾರೀ ರಾಜನಾಗಿದ್ದನು. ಆ ರಾಜನ ಗೌರವವು ಗುರ್ಜರ ಪ್ರದೇಶದಲ್ಲಿ ವಿಶೇಷವಾಗಿತ್ತು. ಆದ್ದರಿಂದ ಆತನ ಆಶ್ರಯದಿಂದ ಆ ಕಾಂಸ್ಥಾನಿಯಾದ ವಿಮಲೆಯು ಮತ್ತೆ ಇಬ್ಬರು-ಮೂವರು ಸಂಸ್ಥಾನಿಕರ ಸಹಾಯವನ್ನು ಸಂಪಾದಿಸಿದ್ದಳು. ಅವಳ ದೀರ್ಘ ಪ್ರಯತ್ನದಿಂದ ಭಂಡಾರೀ ರಾಜನ ರಾಜಧಾನಿಗೂ ಗುಹೆಗೂ ಚೋರಮಾರ್ಗವನ್ನು ಮಾಡಿಸಿದಳು; ಮತ್ತು ಬಹು ಚಾತುರ್ಯದಿಂದ ಆ ಗುಹೆಯಲ್ಲಿ ಮದ್ದಿನ ಚೀಲಗಳನ್ನಿರಿಸಿದಳು. ಈ ಅವಧಿಯಲ್ಲಿ ಗುಹೆಯ ಮೇಲ್ಭಾಗವೂ ಪ್ರಶಸ್ತವಾಯಿತು. ಸಂದಣಿತವಾಗಿ ಬೆಳೆದ ಸಣ್ಣ ದೊಡ್ಡ ವೃಕ್ಷಗಳು ಸಮೂಲವಾಗಿ ಅಗಿಸಲ್ಪಟ್ಟಿದ್ದರಿಂದ, ಆ ಸಮಪಾತಳಿಯು ಗುಹೆಯ ಮೇಲ್ಭಾಗವು ಒಂದು ವಿಶಾಲವಾದ ಬೈಲಿನಂತೆ ಮನೋಹರವಾಗಿ

ತೋರಹತ್ತಿತು. ಸಮ್ರಾಟನ ಸೈನ್ಯಕ್ಕೆ ಎಷ್ಟು ಪ್ರದೇಶವು ಬೇಕೆಂಬದನ್ನು ಬಲ್ಲ ವಿಮಲೆಯು ಅಷ್ಟು ಪ್ರದೇಶವನ್ನು ಚೊಕ್ಕಾಗಿ ಮಾಡಿಸಿದಳು. ತನ್ನ ಕೆಲ ಸವು ಹೀಗೆ ಸಮೀಪಕ್ಕೆ ಬರಹತ್ತಲು, ಅವಳು ಸಮ್ರಾಟನ ದಂಡಿನಲ್ಲಿ ಗುಪ್ತಹೇರ ರಾಗಿ ಹೋಗಿದ್ದ ತನ್ನ ಕಡೆಯವರಿಗೆ ಸುದ್ದಿ ಮುಟ್ಟಿಸಬೇಕೆಂದು ಮೇಲಿಂದ ಮೇಲೆ ಗುಪ್ತಹೇರರನ್ನು ಕಳಿಸುತ್ತಿದ್ದಳು; ಆದರೆ ಆ ಗುಪ್ತಹೇರರೆಲ್ಲರೂ ಸಮ್ರಾಟನ ಸೈನ್ಯದಲ್ಲಿ ಗುಪ್ತರಾಗಿಯೇ ಹೋಗುತ್ತಿದ್ದದರಿಂದ, ವಿಮಲೆಗೆ ಅದರ ಸುದ್ದಿಯು ತಿಳಿಯದಾಯಿತು. ತಾನು ಇಷ್ಟು ಕೆಲಸವನ್ನು ಮಾಡಿಸಿದರೂ ತನ್ನ ಗುಪ್ತಹೇರರಲ್ಲಿ ಒಬ್ಬನಾದರೂ ಸಮ್ರಾಟನ ವಿಷಯವಾಗಿ ಒಂದೂ ಸುದ್ದಿಯನ್ನು ತಿಳಿಸಲಿಲ್ಲ; ಇದಕ್ಕೆ ಏನು ಕಾರಣವಿದ್ದೀತು? ಎಂದು ಚಿಂತಿಸತೊಡಗಿದಳು. ಒರಬಗುತ್ತ ದಿವಸಗಳು ಹಚ್ಚಾದಂತೆ ಆಕೆಯ ಚಿಂತೆಯೂ ಹೆಚ್ಚಾಗ ತೊಡಗಿತು ಆಕೆಯಲ್ಲಿ ಬಗೆಬಗೆಯ ಕಲ್ಪನೆಗಳು ಹುಟ್ಟತೊಡಗಿದವು. ಮಾಲೋಜಿಯು ಫಿತೂರನಾಗಿರಬಹುದೇನು? ಹಾಗಿಲ್ಲದಿದ್ದರೆ ಅವನು ಇದು ವರೆಗೆ ನನಗೆ ಒಮ್ಮೆಯಾದರೂ ಯಾಕೆ ಸುದ್ದಿಯನ್ನು ಕಳಿಸಿರಲಿಕ್ಕಿಲ್ಲ? ಉಳಿದ ಗುಪ್ತಹೇರರಾದರೂ ಯಾಕೆ ತಿರುಗಿ ಬರಬಾರದು? ಏನು, ಇವರೆಲ್ಲರೂ ಆ ದುಷ್ಟ ಸಮ್ರಾಟನ ಹದ್ದಿನಂಥ ಕಣ್ಣಿಗೆ ಬಿದ್ದಿರಬಹುದೇನು? ನಿಜವಾಗಿಯೂ ಸಮ್ರಾಟನು ಅವರನ್ನು ಸೆರೆಯಿರಿಸಿರಬಹುದೇ? ಹಾಯ್! ಹಾಯ್!! ನನ್ನ ಕೆಲಸವು ಹೇಗೆ ಕೈಗೂಡೀತು? ಆ ಸಮ್ರಾಟನು ನನ್ನೆದುರಿಗೆ ಯಾವಾಗ ದಗ್ಧನಾಗಿ ಹೋಗುವನು? ಎಂಬ ವಿಚಾರಗಳು ಆಕೆಯನ್ನು ನುಗ್ಗು ಮಾಡತೊಡಗಿದವು; ಆಗ ಆಕೆಗೆ ವಿಲಕ್ಷಣವಾದ ಗಾಹವು ಆಗತೊಡಗಿತು. ಅವಳಿಗೆ ಅಂತರಂಗದಲ್ಲಿ ಸಮಾಧಾನವಿಲ್ಲದಾಯಿತು. ಅವಳು ಗವಿಯಲ್ಲಿಯೇ ವಾಸಮಾಡಿದ್ದಳು. ನೋಡುವವರಿಗೆ ಯಾವಳೊಬ್ಬ ಯೋಗಿನಿಯಂತೆ ತೋರುತ್ತಿದ್ದಳು; ಆದರೆ ಆಕೆಯು ಸಮ್ರಾಟನನ್ನು ಕೊಲ್ಲ ಹವಣಿಸುವ ಕಾಲಸರ್ಪಿಣಿಯೆಂಬದು ಅನ್ಯರಿಗೆ ತಿಳಿಯದಾಯಿತು!

ಈ ಮೇರೆಗೆ ಅವಳು ಬಹು ವಿಧವಾಗಿ ಯೋಚಿಸಿ, ಬಹು ಚಾಣಾಕ್ಷನಾದ ಮತ್ತೊಬ್ಬ ಗುಪ್ತಹೇರನನ್ನು ಕಳುಹಿಸಿದಳು. ಆತನು ಉಪಾಯಾಂತರಗಳಿಂದ ಸಮ್ರಾಟನ ದಂಡನ್ನು ಸೇರಿ ಇಂದಿನ ವರೆಗೆ ಬಂದ ಗುಪ್ತಹೇರರೆಲ್ಲರೂ ಸಮ್ರಾಟನ ಸೆರೆಯಲ್ಲಿ ಬಿದ್ದಿರುವರೆಂಬದನ್ನು ತಿಳಿದನು; ಮತ್ತು ಅವನು ಅಲ್ಲಿ ಇರುವಾಗಲೇ ಭಂಡಾರೀರಾಜನ ತಂಗಿಯು ಅವನಿಂದ ಗೌರವ ಹೊಂದಿ ತವರುಮನೆಗೆ ಕಳುಹಲ್ಪಟ್ಟಳು. ಇದೆಲ್ಲ ವಿಚಿತ್ರ ಪ್ರಕಾರವನ್ನು ನೋಡಿ ಆ ಗುಪ್ತಹೇರನು ದಂಗುಬಡಿದು ಹೋದನು! ಮತ್ತು ಅವನು ಕೂಡಲೆ ಆ ಸೈನ್ಯದಿಂದ ನುಸುಳಿ ವಿಮಲೆಯ ಕಡೆಗೆ ಧಾವಿಸಿ ಬಂದನು. ಅವನ ಮುಖದಿಂದ ಸಮಸ್ತ

ಸಂಗತಿಗಳನ್ನು ಕೇಳಿ ವಿಮಲೆಯು ನೊಂದೆಯೊಣಗಿತು. ಅವಳ ದೇಹದಲ್ಲಿ ಕಂಪನವುಂಟಾಯಿತು. ತನ್ನ ಎಲ್ಲ ಗುಪ್ತಹೇರರೂ ಸಮ್ರಾಟನ ಸೆರೆಯಲ್ಲಿ ಬಿದ್ದ ಬಳಿಕ ತನ್ನ ಕಥೆಯೇ ಮುಗಿಯಿತೆಂದು ಅವಳು ಭಾವಿಸಿದಳು. ಇಷ್ಟೇ ಅಲ್ಲ, ಉದಾರನಾದ ಸಮ್ರಾಟನು ವಿಪತ್ತಿನಲ್ಲಿ ಸಿಕ್ಕ ಭಂಡಾರೀ ರಾಜನ ತಂಗಿಯನ್ನು ಬಿಡಿಸಿ, ಆಕೆಯನ್ನು ಗೌರವಿಸಿ, ತನ್ನ ಪರಿವಾರದೊಡನೆ ಆಕೆಯನ್ನು ಭಂಡಾರೀ ರಾಜನ ಕಡೆಗೆ ಕಳುಹಿಸಿ, ಭಂಡಾರೀ ರಾಜನ ಮೇಲೆ ಉಪಕಾರದ ಹೊರೆಯನ್ನು ಹೊರಿಸಿದನು. ಅಂದಬಳಿಕ ಭಂಡಾರೀ ರಾಜನು ಸಮ್ರಾಟನ ಪ್ರಾಣಹರಣಕ್ಕೆ ಉದ್ಯುಕ್ತನಾಗುವದು ಅಶಕ್ಯವಾಗಿ ತೋರಿತು. ಈ ಎಲ್ಲ ಸಂಗತಿಗಳು ಒಮ್ಮೆಲೆ ಕರ್ಣಪಟಲದ ಮೇಲೆ ಬಿದ್ದು, ವಿಮಲೆಯ ಅಂತಃಕರಣವನ್ನು ಕಮರಿಸಿ ಬಿಟ್ಟವು! ಆಕೆಗೆ ಮುಂದೆ ಏನೂ ತೋಚದಾಯಿತು. ಶತ್ರುಪಕ್ಷಕ್ಕೆ ಅನುಕೂಲತೆಯು ಹೆಚ್ಚುತ್ತ ನಡೆಯಲು, ಮನುಷ್ಯನ ಸ್ಥಿತಿಯು ಹೀಗೆ ಆಗುವದು ಸ್ವಾಭಾವಿಕವಿರುವದು. ಹೀಗೆ ವಿಮಲೆಯು ಭಯಂಕರ ಚಿಂತೆಗೆ ಒಳಗಾಗಿರಲು, ಅತ್ತ ಭಂಡಾರೀ ರಾಜನೂ ಚಿಂತೆಗೆ ಗುರಿಯಾದನು.

ಭಂಡಾರೀ ರಾಜನು ವಿಮಲೆಗೆ ಅಭಿವಚನ ಕೊಟ್ಟಿದ್ದನಷ್ಟೇ; ಮತ್ತು ಅವನು ಆಕೆಯ ವರ್ತನವನ್ನು ಪರೀಕ್ಷಿಸುವದಕ್ಕೆ ಬೇರೆ ಕೆಲವು ಜನ ಗುಪ್ತಹೇರರನ್ನು ನೇಮಿಸಿದ್ದನು. ವಿಮಲೆಯ ಆಚರಣೆಯು ಅತ್ಯಂತ ಪರಿಶುದ್ಧವಿದ್ದದ್ದನ್ನು ಭಂಡಾರೀ ರಾಜನು ಗುಪ್ತಹೇರರ ಮುಖಾಂತರವಾಗಿ ತಿಳಿದು ಆಕೆಯ ವಿಷಯಕ್ಕೆ ಒಳ್ಳೇ ಆದರಭಾವವನ್ನು ತಾಳಿ, ತನ್ನ ಶಕ್ತಿಮೀರಿ ಆಕೆಗೆ ಸಹಾಯ ಮಾಡಬೇಕೆಂದು ಯೋಚಿಸಿದ್ದನು. ಆಕೆಗೆ ಸಹಾಯ ಮಾಡುವದೆಂದರೆ, ಗುರ್ಜರ ದೇಶಕ್ಕೆ ಕಲ್ಯಾಣ ಮಾಡುವದೇ ಎಂದು ಅವನು ನಂಬಿದ್ದನು. ವಿಮಲೆಯು ತೆಗೆದ ಯುಕ್ತಿಯಿಂದ ಸಮ್ರಾಟನ ಅಂತವಾಗಿ ಹೋದರೆ, ಗುರ್ಜರ ದೇಶಕ್ಕೆ ಬಂದ ಪರಚಕ್ರವು ಅನಾಯಾಸವಾಗಿ ನಿರ್ಮೂಲವಾಗುವದೆಂದು ಅವನು ಆ ಕೆಲಸಕ್ಕೆ ಕೈ ಹಾಕಿದ್ದನು. ಬಲಿಷ್ಠ ಶತ್ರುವನ್ನು ನಾಶಗೊಳಿಸಬೇಕಾದರೆ, ರಾಜನೀತಿಗೆ ಸರಿಯಾಗಿ ಕಪಟೋಪಾಯಗಳನ್ನು ಕೈಕೊಂಡರೆ, ದೋಷವಿಲ್ಲೆಂದು ಮನಸ್ಸಿಗೆ ಸಮಾಧಾನ ಹಚ್ಚಿಕೊಂಡಿದ್ದನು. ಒಟ್ಟಿಗೆ ಆತನು ಸಮ್ರಾಟನ ಶತ್ರುವಾಗಿ ಅವನ ನಾಶಕ್ಕೆ ಹೇಗೆ ಹೇಗೆ ಸಿದ್ಧತೆಯನ್ನು ಮಾಡಬೇಕೋ ಹಾಗೆ ಹಾಗೆ ಮಾಡಿ ಇಟ್ಟುಕೊಂಡಿದ್ದನು. ಸಮ್ರಾಟನು ತನ್ನ ರಾಜಧಾನಿಯ ಸನಿಯಕ್ಕೆ ಬರುವ ಮಾರ್ಗಪ್ರತೀಕ್ಷೆಯೊಂದನ್ನೇ ಅವನು ಮಾಡುತ್ತಿದ್ದನು. ಅಷ್ಟರಲ್ಲಿ ಸಮ್ರಾಟನ ಕಡೆಗೆ ಹೋಗಿದ್ದ ಹೇಜೀಬನು ಬಂದು ಪ್ರತ್ಯುತ್ತರವನ್ನು ತಂದು ಕೊಡಲು, ರಾಜನು ಸಂತೋಷಬಟ್ಟು, ಸಮ್ರಾಟನು ನಿಶ್ಚಯವಾಗಿ ತನ್ನ ಆತಿಥ್ಯ

ವನ್ನು ಕೈಕೊಳ್ಳಲು ಬರುವನೆಂದು ತಿಳಿದನು ಅದಕ್ಕಾಗಿ ಅವನು ತನ್ನ ರಾಜ್ಯದ ಗಡಿಯಲ್ಲಿ ಕೆಲವು ದಂಡನ್ನು ಇಟ್ಟು, ಸಮ್ರಾಟನ ಸ್ವಾಗತಕ್ಕೆ ಒಬ್ಬ ಕುಶಲ ಸೇನಾಪತಿಯನ್ನು ನೇಮಿಸಿದನು.

ಈ ರೀತಿಯಾಗಿ ಭಂಡಾರೀ ರಾಜನು ಸಮ್ರಾಟನ ವಿರುದ್ಧವಾಗಿ ಗುಪ್ತ ಕಾರಸ್ಥಾನಗಳನ್ನು ನಡೆಸಿರಲು, ಹಿಂದಿನ ಪ್ರಕರಣದಲ್ಲಿ ಹೇಳಿದಂತೆ ಸಮ್ರಾಟ ನಿಂದ ಕಳುಹಲ್ಪಟ್ಟ ಅವನ ತಂಗಿಯು ರಾಜಧಾನಿಯನ್ನು ಸುರಕ್ಷಿತವಾಗಿ ಮುಟ್ಟಿ ದಳು. ಸಮ್ರಾಟನ ಸೈನ್ಯವು ಆಕೆಯನ್ನು ಮುಟ್ಟಿಸಿ ಹಿಂದಿರುಗಿತು. ಹೀಗೆ ಅಕ ಸ್ಮಾತ್ ತಂಗಿಯು ಬರಲು, ಭಂಡಾರೀ ರಾಜನು ಯೋಚನೆಗೊಳಗಾದನು; ಆದರೆ ಚಂಪಾದೇವಿಯು ಬಹಳ ಧೂರ್ತಳೂ ಚಾಣಾಕ್ಷಳೂ ಇದ್ದದರಿಂದ, ಕೂಡಲೆ ಅಣ್ಣನ ಬಳಿಗೆ ಹೋಗಿ ತಾನು ಮನೆಯಿಂದ ಹೊರಬೀಳಲು ಸಂಭವಿಸಿದ ಸಂಕಟ ವನ್ನೂ, ದಾರಿಯಲ್ಲುಂಟಾದ ಸಂಕಟವನ್ನೂ, ಸಮ್ರಾಟನಿಂದ ಅದು ನಿವಾರಣ ವಾದ ಬಗೆಯನ್ನೂ, ಸಮ್ರಾಟನು ತನ್ನ ಮೇಲೆ ಮಾಡಿದ ಮಹದುಪಕಾರವನ್ನೂ ಸವಿಸ್ತಾರವಾಗಿ ಹೇಳಿದಳು. ಭಂಡಾರೀ ರಾಜನು ತಂಗಿಯು ಹೇಳುವ ಸಂಗತಿ ಗಳನ್ನು ಕೇಳಿ ಬೆಪ್ಪನಾಗಿ ಕುಳಿತನು! ಗುರ್ಜರ ಸಂಸ್ಥಾನಿಕರ ಅಧಮತನವೂ, ಸಮ್ರಾಟನ ಉದಾರತನವೂ ಅವನ ಕಣ್ಣು ಮುಂದೆ ಕಟ್ಟಿದವು. ಮೊದಲೇ ಅವನ ಮನಸ್ಸು ಗುರ್ಜರ ಸಂಸ್ಥಾನಿಕರ ವಿಷಯವಾಗಿ ಕಲುಷಿತವಾಗಿತ್ತು; ಅದರಲ್ಲೂ ತನ್ನ ಪ್ರತ್ಯಕ್ಷ ತಂಗಿಯ ಮೇಲೆ ಇಂಥ ಅನಿಷ್ಟಪ್ರಸಂಗ ಬಂದದ್ದನ್ನು ನೋಡಿ, ಅವನ ಮನಸ್ಸು ಕೊಡವಿತು. ವಿಮಲೆಯ ಮಾತಿನಿಂದ ಆತನು ಯಾವ ಸಮ್ರಾ ಟನು ಪರಮ ದುಷ್ಟನೆಂದು ಭಾವಿಸಿದ್ದನೋ, ಆ ಸಮ್ರಾಟನು ತನ್ನ ತಂಗಿಯ ಪಾತಿವ್ರತ್ಯವನ್ನು ಉಳಿಸಿ ತನ್ನ ಮರ್ಯಾದೆಯನ್ನು ಕಾದದ್ದರಿಂದ, ಭಂಡಾರೀ ರಾಜನು ವಿಚಾರಶೂನ್ಯನಾದನು. ಪ್ರತ್ಯಕ್ಷ ಅನುಭವಕ್ಕೆ ಬಂದ ಸಂಗತಿಯು ಕೇಳಿಕೆಯ ಮಾತಿಗಿಂತ ಹೆಚ್ಚು ವಿಶ್ವಸನೀಯವಾದದ್ದಷ್ಟೇ; ಆತನು ಸ್ವಾಭಾವಿಕ ವಾಗಿ ವಿಮಲೆಯ ಮಾತಿನಲ್ಲಿ ಅಪನಂಬಿಗೆಯನ್ನು ತಾಳಿದನು. ಸಮ್ರಾಟನು ಬಹು ಚಲುವೆಯಾದ ತನ್ನ ತಂಗಿಯ ಕಡೆಗೆ ಪಾಪಬುದ್ಧಿಯಿಂದ ನೋಡದೆ, ಆಕೆ ಯನ್ನು ಸೋದರಿಯಂತೆ ಭಾವಿಸಿ, ಆಕೆಯೊಡನೆ ತನ್ನ ಸೈನ್ಯವನ್ನು ಕೊಟ್ಟು ಕಳಿಸಿ ದ್ದರಿಂದ, ಆತನು ಅತ್ಯಂತ ಪಾಪಭೀರುವೂ ವಿಚಾರವಂತನೂ ಇರುವನೆಂಬದು ಭಂಡಾರೀ ರಾಜನ ಅನುಭವಕ್ಕೆ ಬಂದಿತು. ಇಂಥ ಸದ್ಗುಣವಂತನಾದ ಸಮ್ರಾ ಟನನ್ನು ಮೋಸದಿಂದ ಕೊಲ್ಲಬೇಕಾಗಿ ಬಂದಿರುವದರಿಂದ, ಅವನ ಮನಸ್ಸಿಗೆ ಹೇಗೆ-ಹೇಗೋ ಅನಿಸಹತ್ತಿತು. ಇತ್ತ ವಿಮಲೆಗೆ ವಚನ ಕೊಟ್ಟದ್ದರಿಂದ ಅವನು ಅದನ್ನು ತಪ್ಪಿಸುವ ಹಾಗೂ ಇದ್ದಿಲ್ಲ. ವಚನಭಂಗ ದೋಷಕ್ಕೂ ವಿಶ್ವಾಸಘಾತುಕ

ತನಕರ್ೂ ಅವನು ಬಹಳವಾಗಿ ಹೆದರುತ್ತಿದ್ದನು. ವಿಮಲೆಗೆ ಕೊಟ್ಟ ವಚನವನ್ನು ಪಾಲಿಸಬೇಕೆಂದರೆ, ಸಮ್ರಾಟನ ಚಾರಿತ್ರ್ಯವು ಅದಕ್ಕೆ ತಡೆಯನ್ನುಂಟು ಮಾಡು ತ್ತಿತ್ತು. ಸಮ್ರಾಟನ ಸಚ್ಚರಿತ್ರವನ್ನೂ ಆತನು ಮಾಡಿದ ಉಪಕಾರವನ್ನೂ ನೋಡ ಬೇಕೋ ಅಥವಾ ವಿಮಲೆಗೆ ಕೊಟ್ಟ ವಚನದ ಕಡೆಗೆ ನೋಡಬೇಕೋ? ಎಂಬ ಎರಡು ಪ್ರಶ್ನೆಗಳು ಅವನಲ್ಲಿ ತಾಕಲಾಡಹತ್ತಿದವು. ಅವುಗಳಿಗೆ ಸಮಾಧಾನ ವನ್ನು ಹುಡುಕುವದೇ ಅಶಕ್ಯವಾಯಿತು.

ಒಂದು ದಿನ ಭಂಡಾರೀ ರಾಜನು ಏಕಾಂತದಲ್ಲ ಕುಳಿತು ಬಹು ವಿಧವಾಗಿ ಯೋಚಿಸಿದನು. ಈ ಸಂಕಟದೊಳಗಿಂದ ಹೇಗೆ ಪಾರಾಗಬೇಕೆಂಬ ಯುಕ್ತಿಯು ಅವನಿಗೆ ಬಗೆಹರಿಯದಾಯಿತು. ಅಷ್ಟರಲ್ಲಿ ಅವನ ಪ್ರೀತಿಯ ತಂಗಿಯಾದ ಚಂಪೆ ಯು ಅಲ್ಲಿಗೆ ಬಂದಳು. ಅಣ್ಣನ ಚಿಂತೆಯ ಕಾರಣವು ಅವಳಿಗೆ ತಿಳಿದಿತ್ತು; ಆದರೂ ಅವಳು ಅಣ್ಣನಿಂದಲೇ ಚಿಂತೆಯ ಕಾರಣವನ್ನು ಕೇಳಿ ತಿಳಿಯಬೇಕೆಂದು ಆತನನ್ನು ಕುರಿತು ಪ್ರಶ್ನೆ ಮಾಡಿದಳು. ಭಂಡಾರೀ ರಾಜನು ತಂಗಿಯನ್ನು ವಿಶೇಷ ವಾಗಿ ಪ್ರೀತಿಸುತ್ತಿದ್ದನು. ಚಂಪೆಯಾದರೂ ಅವನೊಡನೆ ಬಹಳ ಸಲಿಗೆಯಿಂದ ನಡೆಯುತ್ತಿದ್ದಳು. ಆದ್ದರಿಂದ ತಂಗಿಯು ಚಿಂತೆಯ ಕಾರಣವನ್ನು ಕೇಳುತ್ತಿ ರಲು, ಅದನ್ನು ಆಕೆಯಿಂದ ಮುಚ್ಚಿಡುವದು ಅವನಿಂದಾಗದಾಯಿತು. ಆಗ ಅವನು ಆಕೆಯ ಮುಂದೆ ತನ್ನ ಚಿಂತೆಯ ಕಾರಣವನ್ನು ರಹಸ್ಯವಾಗಿ ಹೇಳಿದನು. ಬಳಿಕ ಅವಳು ಮೊದಲೇ ಯೋಚಿಸಿಕೊಂಡಿಟ್ಟ ಒಂದು ಉಪಾಯವನ್ನು ಅಣ್ಣ ನಿಗೆ ಹೇಳಿದಳು ಆಕೆಯ ಆ ಉಪಾಯವು ಭಂಡಾರೀರಾಜನ ಮನಸ್ಸಿಗೆ ಬಂದಿತು. ಬಳಿಕ ಅವನು ತಂಗಿಗೆ ಹೇಳತಕ್ಕದ್ದನ್ನು ಹೇಳಿ ಆಕೆಯನ್ನು ಕಳುಹಿ, ಸೇನಾಪತಿ ಯನ್ನು ಕರೆಕಳುಹಿದನು.

ಮುಂದೆ ಸ್ವಲ್ಪ ಹೊತ್ತಿನಲ್ಲಿ ಸೇನಾಪತಿಯು ಬರಲು ಭಂಡಾರೀರಾಜನು ಅವನೊಡನೆ ರಹಸ್ಯವಾಗಿ ಯೋಚಿಸಿ, ನಗರ ರಕ್ಷಣೆಗೆ ಅರ್ಧಸೈನ್ಯವನ್ನು ಬಿಟ್ಟು, ಉಳಿದ ಅರ್ಧಸೈನ್ಯದೊಡನೆ ಭದ್ರಗಡಕ್ಕೆ ಪ್ರಯಾಣ ಬೆಳೆಸಿದನು. ಹೋಗುವಾಗ ಭದ್ರಗಡಕ್ಕೆ ಶತ್ರುಗಳು ಮುತ್ತಿಗೆ ಹಾಕಿದ್ದರಿಂದ, ನಾನು ಅತ್ತ ಕಡೆಗೆ ಸಹಾಯ ಕ್ಕಾಗಿ ಹೋಗಬೇಕಾಗಿದೆಯೆಂದು ವಿಮಲೆಗೆ ಹೇಳಿಕಳಿಸಿದನು. ತನ್ನ ಕೆಲಸಕ್ಕೆ ಭಂಡಾರೀ ರಾಜನಿಂದ ಇನ್ನು ಮುಂದೆ ವಿಘ್ನವುಂಟೆಂದು ತಿಳಿದಿದ್ದ ವಿಮಲೆಗೆ ಆತನ ಈ ನಗರತ್ಯಾಗವು ಪಥ್ಯಕರವಾಗಿ ಪರಿಣಮಿಸಿತು. ಅವಳು ಬಹಿರಂಗದಲ್ಲಿ ವಿಷಾದವನ್ನು ವ್ಯಕ್ತಪಡಿಸಿದರೂ ಮನಸ್ಸಿನಲ್ಲಿ ಬಹು ಆನಂದಪಟ್ಟಳು; ಆದರೆ ಉತ್ತರ ಕ್ಷಣದಲ್ಲಿ ಮತ್ತೊಂದು ಚಿಂತೆಯು ಅವಳನ್ನು ಆವರಿಸಿತು.

"ಭಂಡಾರೀ ರಾಜನು ನಗರ ಬಿಟ್ಟು ಅನ್ಯಕಡೆಗೆ ಹೋದದ್ದರಿಂದ, ಸಮ್ರಾ

ಟನು ಇಲ್ಲಿಗೇತಕ್ಕೆ ಬರುವನು? ಅವನನ್ನು ಇಲ್ಲಿಗೆ ಕರೆತರುವವರಾರು? ಆತನು ಇಲ್ಲಿಗೆ ಬಾರದಿದ್ದ ಬಳಿಕ ಈ ಎಲ್ಲ ಪ್ರಯತ್ನಗಳ ಪ್ರಯೋಜನವೇನು?'' ಎಂಬ ವಿಚಾರಗಳು ಅವಳಲ್ಲಿ ಹುಟ್ಟಿದವು. ಈ ವಿಚಾರಗಳಿಂದ ಆಕೆಯ ಮನಸ್ಸು ಮತ್ತೆ ಹೈರಾಣವಾಯಿತು. ಇಂಥ ಅಸಾಧ್ಯ ಕೆಲಸಕ್ಕೆ ಯಾಕೆ ಕೈ ಹಾಕಿದೆ ನೆಂಬ ಪಶ್ಚಾತ್ತಾಪವೂ ಆಕೆಗೆ ಆಗಹತ್ತಿತು. ಆದರೂ ಅವಳು ಧೈರ್ಯಗುಂದ ಲಿಲ್ಲ. ಮತ್ತೆ ಬೇರೆ ಉಪಾಯಗಳನ್ನು ಯೋಚಿಸಿ, ಹಿಡಿದ ಕಾರ್ಯವನ್ನು ಸಾಧಿ ಸಿಯೇ ತೀರಬೇಕೆಂದು ಆವೇಶಗೊಂಡಳು. ಲೋಕದಲ್ಲಿ ಕೆಲವರು ತಮ್ಮ ಕೆಲಸಕ್ಕೆ ವಿಘ್ನಗಳು ಬರಹತ್ತಿದ ಕೂಡಲೆ ಕೈಕಾಲುಗೆಟ್ಟು ಕೆಲಸವನ್ನು ಕೆಡಿಸಿ ಕೊಳ್ಳುವರು; ಕೆಲವರು ವಿಘ್ನಪರಂಪರೆಯು ಬೆನ್ನು ಹತ್ತಿದ ಹಾಗೆ ಹೆಚ್ಚು ಹೆಚ್ಚು ಹುರುಪುಗೊಳ್ಳುವರು. ಈ ಎರಡನೆಯ ವರ್ಗದಲ್ಲಿಯೇ ವಿಮಲೆಯು ಸಮಾವೇಶವಾಗುತ್ತಿತ್ತು. ಅಂತೇ ಅವಳ ಉತ್ಸಾಹವು ಕುಗ್ಗಲಿಲ್ಲ.

ವಿಮಲೆಯು ಕೂಡಲೆ ಹೊಸ ಹಂಚಿಕೆಗಳನ್ನು ಹುಡುಕಿದಳು. ಆಕೆಗೆ ಅಭಯವನ್ನಿತ್ತ ಬೇರೆ ಸಂಸ್ಥಾನಿಕರನ್ನು ಕರೆತಂದು ತನ್ನ ಕಾರ್ಯವನ್ನು ಸಾಧಿಸ ಬೇಕೆಂದು ಮೊದಮೊದಲು ಯೋಚಿಸಿದಳು; ಆದರೆ ಭೂವಡ ಸಮ್ರಾಟನು ಸಮೀಪಕ್ಕೆ ಬಂದದ್ದರಿಂದ, ಸಂಸ್ಥಾನಿಕರನ್ನು ಕರಕೊಂಡು ಬರುವಷ್ಟು ಅವಕಾ ಶವುಳಿದಿರಲಿಲ್ಲ. ಆದ್ದರಿಂದ ಅವಳು ಆ ವಿಚಾರವನ್ನು ಬಿಟ್ಟುಕೊಟ್ಟು ಯೋಗಿನಿಯ ವೇಷವನ್ನು ಹಾಕಿದಳು; ಮತ್ತು ತನ್ನ ಹಸ್ತಕರಿಗೆ ಯೋಗಿಗಳ ವೇಷವನ್ನು ಹಾಕಿಸಿದಳು. ಏಳೆಂಟು ಜನರು ಕಾವೀವಸ್ತ್ರದಿಂದ ಪರಿಶೋಭಿಸುತ್ತ ಆಕೆಯು ಹೇಳಿದ ಕೆಲಸವನ್ನು ಮಾಡಲು ಅಪ್ಪಣೆಯ ದಾರಿಯನ್ನು ಕಾಯತೊಡಗಿದರು. ಆಕೆಯು ಗುಪ್ತಚಾರರ ಮುಖಾಂತರವಾಗಿ ಭಂಡಾರೀ ರಾಜನು ತನ್ನ ರಾಜ್ಯದ ಗಡಿಯಲ್ಲಿ ಸಮ್ರಾಟನ ಸ್ವಾಗತಕ್ಕಾಗಿ ಇಟ್ಟ ಸೈನಿಕರಿಗೆ ತಾನು ಊರು ಬಿಟ್ಟು ಹೋದ ಸಂಗತಿಯನ್ನು ತಿಳಿಸಿರಲಿಲ್ಲವೆಂಬದನ್ನು ತಿಳಕೊಂಡಳು. ಬಳಿಕ ಅವಳು ತನ್ನ ಸೇವಕರ ಮುಖಾಂತರ ಗಡಿಯಲ್ಲಿರುವ ಸೇನಾಪತಿಗೆ ಹೇಳಿ ಕಳಿಸಿದಳು. ಅದೇನಂದರೆ:—'ಸೇನಾಪತೀ, ಭಂಡಾರೀ ರಾಜರ ಆಜ್ಞೆಯಂತೆ ನಿನಗೆ ತಿಳಿಸು ವದೇನಂದರೆ, ನೀನು ಇನ್ನು ಸ್ವಲ್ಪ ದಿವಸಗಳಲ್ಲಿಯೇ ಬರತಕ್ಕ ಸಮ್ರಾಟನನ್ನು ಬಹು ಯುಕ್ತಿಯಿಂದ ಮತ್ತು ರಹಸ್ಯವಾಗಿ ಹೊಸದಾಗಿ ಸಿದ್ಧಪಡಿಸಿಟ್ಟಿರುವ ಗುಹೆಯ ಉಪವನಕ್ಕೆ ಕರೆತರಬೇಕು. ಈ ಉಪವನದಲ್ಲಿ ನಮ್ಮ ರಾಜಗುರು ಗಳಿರುವರೆಂದು ಹೇಳಿ, ಮೊದಲು ಉಪವನಕ್ಕೇ ಕರೆತಂದು, ನಾವು ಯೋಜಿಸಿದ ಕಾರ್ಯವು ಕೊನೆಗಾಣುವಂತೆ ಏರ್ಪಡಿಸಬೇಕು. ಅಂದರೆ ಕಾರ್ಯಾಂತ್ಯದಲಿ ನಿನಗೆ ಬಹುಮಾನವು ಕೊಡಲ್ಪಡುವದು.''

ಯೋಗಿನಿಯ ವೇಷದ ವಿಮಲೆಯ ಸೇವಕರು ಈ ಸಂಗತಿಯನ್ನು ಗಡಿಯಲ್ಲಿರುವ ಭಂಡಾರೀ ರಾಜನ ಸೇನಾಪತಿಗೆ ಬಹು ಯುಕ್ತಿಯಿಂದ ಹೇಳಿದರು. ಯಾವ ಪಾಪವನ್ನೂ ಅರಿಯದ ಆ ಸೇನಾಪತಿಯು ವಿಮಲಾದೇವಿಯು ಹೇಳಿಕಳುಹಿದ ಸಂಗತಿಯು ನಿಜವೆಂದು ನಂಬಿದನು. ಅವನು ಸಮ್ರಾಟನು ಎಷ್ಟು ದೂರ ಇರುವನು? ಅವನು ನಮ್ಮ ನಗರದ ಕಡೆಗೆ ಬರುವನೋ ಅಥವಾ ಬೇರೆ ಯಾವದೊಂದು ದುರ್ಗಕ್ಕೆ ಹೋಗುವನೋ ಎಂಬದನ್ನು ಗೊತ್ತು ಹಚ್ಚುವದಕ್ಕಾಗಿ ತನ್ನ ಕಡೆಯುವರನ್ನು ಕಳುಹಿಸಿದನು. ವಿಮಲೆಯ ಸೇವಕರು ಸೇನಾಪತಿಗೆ ಯಾರಾದರೂ ನಿಜಸಂಗತಿಯನ್ನು ಹೇಳಬಾರದೆಂದು ಸರ್ವಕಾಲದಲ್ಲಿಯೂ ಅವನ ಸನ್ನಿಧಿಯನ್ನು ಕಾಯ್ದುಕೊಂಡು ನಿಂತರು; ಮತ್ತು ಆತನು ತಾವು ಹೇಳಿದ ಸಂಗತಿಗಳಿಗೆ ಒಪ್ಪಿಕೊಂಡದ್ದನ್ನು ವಿಮಲೆಗೆ ತಿಳಿಸುವದಕ್ಕೆ ತಮ್ಮೊಳಗಿನ ಒಬ್ಬಿಬ್ಬರನ್ನು ಕಳಿಸಿಕೊಟ್ಟರು.

ಈ ಮೇರೆಗೆ ವಿಮಲೆಯು ಭಂಡಾರೀ ರಾಜನು ಹೋದದ್ದೊಂದು ಸುಖವಾಯಿತೆಂದು ತನ್ನ ಮನಬಂದಂತೆ ಕಾರಸ್ಥಾನಗಳನ್ನು ನಡೆಸಿರಲು, ಇತ್ತ ಭಂಡಾರೀ ರಾಜನ ಅರಮನೆಯಲ್ಲಿ ಚಂಪೆಯು ಅಣ್ಣನಿಂದ ವಿಮಲೆಯ ಕಾರಸ್ಥಾನಗಳನ್ನೆಲ್ಲ ತಿಳಿದುಕೊಂಡು, ಸಮ್ರಾಟನ ವಿಷಯಕ್ಕೆ ಇವಳು ಇಷ್ಟೇಕೆ ಹಗೆತನ ತಾಳಿರಬಹುದು? ಒಂದುವೇಳೆ ಸಮ್ರಾಟನು ಈಕೆಯ ಗಂಡನ ರಾಜ್ಯವನ್ನು ಕಸಿದುಕೊಂಡಿದ್ದರೆ, ಇವಳು ಪತಿಯೊಡನೆ ಇದ್ದುಕೊಂಡು ತನ್ನ ಹಗೆತನವನ್ನು ಸಾಧಿಸಬಹುದಾಗಿತ್ತಲ್ಲವೆ? ಗಂಡನಿಗೆ ಇರದೆ ಇದ್ದ ಸಿಟ್ಟು ಪೌರುಷವೂ ಇವಳಲ್ಲಿದೆಯಲ್ಲವೆ? ಗಂಡನನ್ನು ಬಿಟ್ಟು ಇವಳು ಹೀಗೆ ಅಸಾಧ್ಯ ಕಾರಸ್ಥಾನಗಳನ್ನು ಹೂಡಿದ್ದರಲ್ಲಿ ಏನು ಗುಪ್ತ ಕಾರಣವಿದೆಯೋ ತಿಳಿಯದು! ನನಗಂತೂ ಇದು ಸಮಂಜಸವಾಗಿ ತೋರುವದಿಲ್ಲ. ನಮ್ಮ ಅಣ್ಣನು ಹೇಳಿದ ಸಂಗತಿಗಳ ಮೇಲಿಂದ ಈಕೆಯ ಚರಿತ್ರವು ಅದ್ಭುತವಾಗಿ ತೋರುತ್ತದೆ. ಆದ್ದರಿಂದ ಇವಳು ವಿಕ್ಷಿಪ್ತ ಮನುಷ್ಯಳೇ ಇರಬಹುದು. ಎಲಾ! ಇದೆಂಥ ಸೋಜಿಗವು! ಪತಿಯನ್ನು ಬಿಟ್ಟು ಇವಳು ಹೀಗೆ ತಿರುಗಿ ಯಾವ ಸಾಮ್ರಾಜ್ಯವನ್ನು ಸೂರೆಗೊಳ್ಳುವಳು? ಪರಪುರುಷರ ಸ್ನೇಹ ಮಾಡಿ, ಅವರಿಂದ ತನ್ನ ಕಾರಸ್ಥಾನಗಳು ನಡೆಯಬೇಕೆಂದು ಹವಣಿಸುವದಕ್ಕಿಂತ, ಇವಳು ತನ್ನ ಪತಿಯ ಮುಖಾಂತರ ತನ್ನ ಕಾರಸ್ಥಾನಗಳನ್ನು ನಡಿಸಿ, ಗಂಡನಿಗೆ ರಾಜ್ಯವನ್ನೊದಗಿಸಿ ಕೊಟ್ಟಿದ್ದರೆ, ಇವಳು ಲೋಕವಂದ್ಯಳಾಗುತ್ತಿದ್ದಿಲ್ಲವೆ? ಮತ್ತು ಆರ್ಯಸ್ತ್ರೀಯರಿಗೆ ಇದು ಉಚಿತವೂ ಆಗಿತ್ತಲ್ಲವೇ? ಎಂದು ಯೋಚಿಸಿದಳು. ಈ ಯೋಚನೆಯಿಂದ ಅವಳು ವಿಮಲೆಯ ನಡತೆಯಲ್ಲಿ ಏನಾದರೂ ದೋಷವಿರಬಹುದೆಂದು ತರ್ಕಿಸಿದಳು. ಬಳಿಕ ಅವಳು

ಒಂದು ದಿನ ವಿಮಲೆಯ ಭೆಟ್ಟಿಯನ್ನು ತಕ್ಕೊಳ್ಳಬೇಕೆಂದು ಇಚ್ಛಿಸಿ, ಸರಂಜಾಮು ದೊಡನೆ ಆಕೆಯ ಬಳಿಗೆ ಹೋದಳು; ಆದರೆ ಚಂಪೆಯ ಈ ಕೃತಿಯು ವಿಮಲೆಗೆ ಅತ್ಯಂತ ಬರಷಣವಾಯಿತು. ಯಾಕಂದರೆ ಅವಳು ಇದುವರೆಗೆ ಗುಹೆಯಲ್ಲಿ ನಡಿಸಿದ ಕಾರಸ್ಥಾನಗಳು ಯಾರಿಗೂ ಗೊತ್ತಿರಲಿಲ್ಲ. ಅದು ಚಂಪೆಯ ಈ ಕೃತಿ ಯಿಂದ ಒಮ್ಮೆಲೆ ಹೊರಬೀಳುವ ಹೊತ್ತು ಬಂದಿತು. ಆದ್ದರಿಂದ ವಿಮಲೆಯು ಕ್ರೋಧಸಂತಪ್ತಳಾಗಿದ್ದಳು. ಆಕೆಯು ಚಂಪೆಯನ್ನು ನೋಡಿದ ಕೂಡಲೆ ನಿರ್ಭಯದಿಂದ ಆಕೆಯ ನಿರ್ಭರ್ತ್ಸನೆಯನ್ನು ಮಾಡಿದಳು. ಚಂಪೆಯು ಬಹು ಮರ್ಯಾದೆವಂತಳಾದ್ದರಿಂದ ಅವಳು ಒಂದು ಕ್ಷಣ ಸಹ ಅಲ್ಲಿ ನಿಲ್ಲದೆ, ಬಂದ ದಾರಿಯಿಂದ ಹಿಂತಿರುಗಿದಳು. ತಿರುಗುವಾಗ ಅವಳು ವಿಮಲೆಯ ಕಡೆಗೆ ಒಮ್ಮೆ ಕ್ರೂರದೃಷ್ಟಿಯಿಂದ ನೋಡಿದಳು ಮಾತ್ರ; ಚಂಪೆಯ ಪರಿವಾರವು ಕಣ್ಣಿಗೆ ಕಾಣದಂತಾದ ಬಳಿಕ ವಿಮಲೆಯು ಗುಹೆಯ ಒಳಕ್ಕೆ ಬಂದು, ಒಂದು ದೀರ್ಘ ಶ್ವಾಸಗರೆದು ಕುಳಿತುಕೊಂಡಳು. ಹಲವು ಬಗೆಯಿಂದ ವಿಘ್ನಗಳು ಬರಹತ್ತಿದ್ದ ರಿಂದ, ಕಾರ್ಯವು ಸಾಧಿಸುವ ಲಕ್ಷಣವಿಲ್ಲೆಂದು ಅವಳು ಬಹು ದೀರ್ಘಚಿಂತೆಗೆ ಒಳಗಾದಳು.

---

## ೧೭ ಚಂಪೆಯ ಸರಳಹೃದಯ!

ಸಮ್ರಾಟನು ಭಂಡಾರೀ ರಾಜ್ಯದ ಸನಿಯಕ್ಕೆ ಬಂದನು. ವಿಮಲೆಯ ಸೂಚನೆ ಯಂತೆ ಅದೇ ದಾರಿಯನ್ನು ಕಾಯ್ದುಕೊಂಡಿದ್ದ ಸೇನಾಪತಿಯು ತುಸ ಮುಂದಕ್ಕೆ ಸಾಗಿ ಸಮ್ರಾಟನ ಸ್ವಾಗತವನ್ನು ಮಾಡಿದನು. ಭಂಡಾರೀ ರಾಜನ ವ್ಯವಸ್ಥೆ ಯನ್ನು ನೋಡಿ ಸಮ್ರಾಟನಿಗೆ ಆನಂದವಾಯಿತು. ಆ ಕೂಡಲೆ ಗುಪ್ತಚಾರರು ವಿಮಲೆಯ ಕಡೆಗೆ ವೇಗದಿಂದ ಸಾಗಿ ಆಕೆಗೆ ಈ ಎಲ್ಲ ಸಂಗತಿಗಳನ್ನು ಹೇಳಿದರು. ಚಾರರು ಹೇಳಿದ ಈ ಸುದ್ದಿಯಿಂದ ವಿಮಲೆಗೆ ಹೇಳಕೂಡದಷ್ಟು ಸಂತೋಷ ವಾಯಿತು. ಆಕೆಯು ಆಶ್ರಮದ ವ್ಯವಸ್ಥೆಯನ್ನು ಉತ್ತಮವಾಗಿ ನೆಲೆಗೊಳಿಸಿ, ಕೆಲ ಜನ ಶಿಷ್ಯರೊಡನೆ ಫಲ-ಮಂತ್ರಾಕ್ಷತೆಗಳನ್ನು ಕೊಟ್ಟು ಸಮ್ರಾಟನೆಡೆಗೆ ಕಳುಹಿದಳು.

ಮೈಯಲ್ಲಿ ಕಾವಿಯ ಕಫನಿ, ಕೊರಳಲ್ಲಿ ರುದ್ರಾಕ್ಷಿಯ ಮಾಲೆ, ಹಣೆ ಯಲ್ಲಿ ಶುಭ್ರ ಭಸ್ಮ, ಕಾಲಲ್ಲಿ ಆವುಗೆ ಇವುಗಳಿಂದ ಪರಿಶೋಭಿಸುತ್ತಿದ್ದ ವಿಮ ಲೆಯ ಶಿಷ್ಯರು ಸಮ್ರಾಟನನ್ನು ಕಂಡು ಫಲ-ಮಂತ್ರಾಕ್ಷತೆಗಳನ್ನು ಸಮರ್ಪಿಸಿ ದರು. ಆಗ ಸಮ್ರಾಟನು ಭಂಡಾರೀ ರಾಜನ ಸೇನಾಪತಿಯನ್ನು ಕುರಿತು, ಅವರ ಗುರುತು ಪರಿಚಯಗಳನ್ನು ವಿಚಾರಿಸಿದನು. ಪೂರ್ವ ಸಂಕೇತದಂತೆ

ಸೇನಾಪತಿಯಾದರೂ ವಿಮಲೆಯು ಆ ಶಿಷ್ಯರನ್ನು ಹೆಚ್ಚಾಗಿ ಶ್ಲಾಘಿಸಿ, ಇವರು ನಮ್ಮ ರಾಜಗುರುಗಳ ಶಿಷ್ಯರೆಂದು ಹೇಳಿದನು. ಸೇನಾಪತಿಯು ಈ ಮಾತುಗಳು ಸಮ್ರಾಟನಿಗೆ ನಿಜವೆಂದು ಕಂಡು ಬಂದವು. ಅವನು ರಾಜಗುರುಗಳ ದರುಶನವನ್ನಿಚ್ಛಿಸಿದನು. ಸಮ್ರಾಟನ ಈ ಇಚ್ಛೆಯಿಂದ ಅನಾಯಾಸವಾಗಿ ಕೆಲಸವಾಯಿತೆಂದು ಸೇನಾಪತಿಯು ಹಿಗ್ಗಿದನು. ಬಳಿಕ ಅವನು ವಿನಯದಿಂದ:—"ದೊರೆಗಳ ಚಿತ್ತಕ್ಕೆ ಬಂದಂತೆ ನಡಕೊಳ್ಳುವೆನು" ಎಂದು ನುಡಿದು, ತನ್ನ ದಂಡಿನವರಿಗೆ ಗುಹೆಯ ಕಡೆಗೆ ಸಮ್ರಾಟನ ದಂಡನ್ನು ಹೊರಳಿಸುವಂತೆ ಆಜ್ಞಾ ಮಾಡಿದನು.

ಸಮ್ರಾಟನು ಭಂಡಾರೀ ರಾಜನ ಆಮಂತ್ರಣವನ್ನು ಮನ್ನಿಸಿ ಮೊದಲು ರಾಜಗುರುಗಳ ಸಂದರ್ಶನ ಮಾಡಿಕೊಳ್ಳಬೇಕೆಂದು ಹೊರಟನು. ಆ ಗಡಿ ಪ್ರದೇಶದಿಂದ ಗುಹೆಯು ಹೇಳಿಕೊಳ್ಳುವಷ್ಟು ದೂರವಿದ್ದಿಲ್ಲವಾದ್ದರಿಂದ, ಮೂರು-ನಾಲ್ಕು ದಿನಗಳಲ್ಲಿಯೇ ಸಮ್ರಾಟನು ಗುಹೆಯ ಪ್ರದೇಶವನ್ನು ಸಮೀಪಿಸಿದನು. ಹೀಗೆ ಸಮ್ರಾಟನು ಶುದ್ಧ ಮನಸ್ಸಿನಿಂದ ರಾಜಗುರುವೆಂದು ವಿಮಲೆಯ ಭೆಟ್ಟಿಗೆ ಬರುತ್ತಿರಲು, ಇತ್ತ ಕುಟಿಲ ಹೃದಯದ ವಿಮಲೆಯು ಸಮ್ರಾಟನು ಬಂದ ಕೂಡಲೆ ಅವನ ಪರಿವಾರವನ್ನು ಯಾವ ಯಾವ ಕ್ರಮದಿಂದ ಇಳಿಸಬೇಕು? ಸಮ್ರಾಟನನ್ನು ಎಲ್ಲಿ ಇಳಿಸಬೇಕು? ಭಂಡಾರೀ ರಾಜನ ಸೈನ್ಯವನ್ನು ಎಲ್ಲಿ ಇಳಿಸಬೇಕು? ಇಷ್ಟೆಲ್ಲ ಆದ ಬಳಿಕ ನಮ್ಮ ಕಾರ್ಯವನ್ನು ಹೇಗೆ ಕೊನೆಗಾಣಿಸಿಕೊಳ್ಳಬೇಕು? ಇದುವರೆಗೆ ಮುಖ್ಯ ಸಂಗತಿಯನ್ನು ನಾನು ಭಂಡಾರೀ ರಾಜನ ಹೊರತು ಅನ್ಯರಾರಿಗೂ ಹೇಳಿರುವದಿಲ್ಲ; ನನ್ನ ಶಿಷ್ಯರು ನನ್ನನ್ನು ಒಬ್ಬ ಮಹಾತ್ಮಳೆಂದು ಭಾವಿಸಿ, ಇಗುವರೆಗೆ ನಾನು ಹೇಳಿದ್ದನ್ನು ಪಾಲಿಸುತ್ತ ಬಂದಿರುವರು; ಹಾಗು ಇದೇ ಭಾವನೆಯಿಂದಲೇ ಮುಂದಾಗರೂ ವರ್ತಿಸುವರು; ಆದರೆ ನನ್ನ ಈ ದುಷ್ಕೃತಿಯ ಗಾಳಿಯು ಕೂಡ ಅವರಿಗೆ ಬಡಿಯುವಂತಿಲ್ಲ; ಹಾಗಾದ ಪಕ್ಷದಲ್ಲಿ ನನ್ನ ಕಾರಸ್ಥಾನಗಳೆಲ್ಲ ನಿಮಿಷಾರ್ಧದಲ್ಲಿ ಬೈಲಿಗೆ ಬಿದ್ದು ಹೋಗುವವು. ಆದ್ದರಿಂದ ಮುಖ್ಯವಿಧಿಯನ್ನು ನಾನೇ ನೆರವೇರಿಸಬೇಕು, ಎಂದು ಬಹು ವಿಧವಾಗಿ ಯೋಚಿಸಿದಳು. ಬಳಿಕ ಅವಳು ತನ್ನ ಶಿಷ್ಯರನ್ನು ಕರೆದು ಸಮ್ರಾಟನ ಸೈನ್ಯವು ಬಂದಕೂಡಲೆ ಯಾವ ಯಾವ ವ್ಯವಸ್ಥೆ ಮಾಡಬೇಕೆಂಬದನ್ನು ವಿವರವಾಗಿ ತಿಳಿಸಿದಳು; ಮತ್ತು ಸಮ್ರಾಟನು ಬಂದ ಕೂಡಲೆ ಅವನನ್ನು ನನ್ನ ಬಳಿಗೆ ಕರೆತರದೆ ಸೈನ್ಯದ ಬೀಡು ಬಿಡಿಸಿದ ಬಳಿಕ ದರುಶನಕ್ಕೋಸ್ಕರ ಅವನನ್ನು ಕರೆತರಬೇಕು. ಹೊರಗಿನ ಈ ಆಶ್ರಮದಲ್ಲಿ ನನಗೋಸ್ಕರ ಒಂದು ಆಸನವನ್ನೂ ಸಮ್ರಾಟನಿಗೋಸ್ಕರ ಒಂದು ಆಸನವನ್ನೂ ಸಿದ್ಧಪಡಿಸಬೇಕು, ಎಂದು ಹೇಳಿದಳು.

ಈ ಮೇರೆಗೆ ವಿಮಲೆಯು ಶಿಷ್ಯರನ್ನು ಕುರಿತು ಹೇಳಿ, ಸಮ್ರಾಟನು ತೀರ

ಹತ್ತರ ಬಂದ ಸುದ್ದಿಯನ್ನು ಕೇಳಿ ಗುಹೆಯನ್ನು ಸೇರಿದಳು; ಮತ್ತು ಗುಹೆಯ ದ್ವಾರವನ್ನು ಮುಚ್ಚಿಸಿ ಸಮ್ರಾಟನ ಸೈನ್ಯವು ತಳವೂರಿದ ಬಳಿಕ ನನಗೆ ವರದಿಯನ್ನು ಮುಟ್ಟಿಸಬೇಕೆಂದು ವಿಶ್ವಾಸಕ್ಕೆ ಪಾತ್ರರಾದ ಕೆಲಜನ ಶಿಷ್ಯರಿಗೆ ಹೇಳಿದಳು. ಬಳಿಕ ಅವಳು ಸ್ವೇಚ್ಛೆಯಿಂದ ಆಡ್ಡಾಡುತ್ತ ಈ ದಿನ ತನ್ನ ಮನಸ್ಸು ತೃಪ್ತವಾಗುವ ಯೋಗವು ಬಂತೆಂದು ಹಿಗ್ಗಿ, ತನಗೆ ಸರಿಕಂಡಂತೆ ಮುದ್ದಿನ ಚೀಲಗಳನ್ನು ಸಾಲ್ಗೊಳಿಸುವ ಕ್ರಮವನ್ನು ನಡಿಸಿದಳು.

ಹೀಗೆ ವಿಮಲೆಯು ತನ್ನ ಒಳಸಂಚಿನಲ್ಲಿ ಮಗ್ನಳಾಗಿರಲು, ಇತ್ತ ಸಮ್ರಾಟನು ಗುಹೆಯ ಪ್ರದೇಶವನ್ನು ಮುಟ್ಟಿದನು ಆ ಪ್ರದೇಶವು ಬಹು ರಮ್ಯವಾಗಿತ್ತು; ಅಲ್ಲಿ ಸುಂದರವಾದ ಪುಷ್ಪ-ಫಲವೃಕ್ಷಗಳು ಅದೇ ಚಿಗಿತು ಸೊಗಸನ್ನು ಬೀರುತ್ತಿದ್ದವು. ವಿಶಾಲವಾದ ಬೈಲು, ಮೇಲೆ ಉನ್ನತ ಸ್ಥಳ; ದಂಡಾಳುಗಳಿಗೆ ನೀರು-ನೆಳಲುಗಳಿಗೆ ಕೊರತೆಯಿಲ್ಲ; ಅಲ್ಲಲ್ಲಿಗೆ ಚಿಕ್ಕ ಚಿಕ್ಕ ಹೌದುಗಳು ಮಧುರ ನೀರಿನಿಂದ ಒಪ್ಪುತ್ತಿದ್ದವು. ಸಮ್ರಾಟನಿಗೆ ಅದೊಂದು ರಮಣೀಯವಾದ ಉದ್ಯಾನವೆಂಬಂತೆ ತೋರಿತು; ಆದರೆ ಸಮ್ರಾಟನಿಗೆ ಉದ್ಯಾನವು ಹೊಸದೆಂದು ಕಂಡು ಬರಲು, ಅವನು ಈ ಉದ್ಯಾನವನ್ನು ನಮ್ಮ ಸಲುವಾಗಿಯೇ ರಚಿಸಿರುವರೋ-ಹೇಗೆಂದು ಯೋಚಿಸತೊಡಗಿದನು. ಅವನು ಭಂಡಾರೀರಾಜನ ಸೇನಾಪತಿಯನ್ನು ವಿಚಾರಿಸಿದನು. ರಾಜಗುರುಗಳು ಬಂದು ನಿಂತಂದಿನಿಂದ ಈ ಎಲ್ಲ ವ್ಯವಸ್ಥೆಯು ನಡೆದಿದೆ, ಎಂದು ಹೇಳಿ ಸೇನಾಪತಿಯು ಪಾರಾದನು; ಆದರೆ ಅಲ್ಲಿ ರಾಜಗುರುಗಳಲ್ಲಿರತಕ್ಕ ಠೀವಿಯು ಕಂಡು ಬರದ್ದರಿಂದ, ಸಮ್ರಾಟನಿಗೆ ಸೇನಾಪತಿಯ ಮಾತಿನ ವಿಷಯಕ್ಕೆ ಬಲವಾದ ಸಂಶಯ ಬರಹತ್ತಿತು. ಭಂಡಾರೀ ರಾಜನು ನಿಜವಾಗಿ ನಮ್ಮ ವಿಷಯಕ್ಕೆ ಆದರಬುದ್ಧಿಯುಳ್ಳವನಿದ್ದರೆ, ಅವನ ರಾಜಧಾನಿಯ ಸಮೀಪಕ್ಕೆ ಬಂದರೂ ಅವನು ನಮ್ಮ ಭೆಟ್ಟಿಗೆ ಬರಲಿಲ್ಲವಲ್ಲ? ಇಲ್ಲಿ ಅವನ ಗುರುಗಳು ಇದ್ದರೆ ಅವನು ತನ್ನ ವೈಭವದಿಂದ ಇಲ್ಲಿಯೇ ನಮ್ಮನ್ನು ಎದುರುಗೊಳ್ಳಬಹುದಾಗಿತ್ತಲ್ಲವೆ? ಇಲ್ಲಿ ರಾಜಪರಿವಾರವೇ ಇದ್ದಂತೆ ತೋರುವದಿಲ್ಲ. ಹಾಗಾದರೆ ಇಷ್ಟೊಂದು ಕಷ್ಟಪಟ್ಟು ಈ ಗುಡ್ಡದಲ್ಲಿ ಈ ಉದ್ಯಾನವನ್ನು ಯಾಕೆ ಮಾಡಿಸಿರಬಹುದು! ಎಂದು ಯೋಚಿಸಿ, 'ರಾಜಗುರುಗಳೆಲ್ಲಿ? ಮೊದಲು ಅವರ ಧೂಲಿ ದರುಶನವನ್ನು ತೆಗೆದುಕೊಳ್ಳೋಣ' ಎಂದು ಸೇನಾಪತಿಗೆ ಹೇಳಿದನು. ಅಷ್ಟರಲ್ಲಿ ವಿಮಲೆಯ ಶಿಷ್ಯರು ಸಮ್ರಾಟನನ್ನು ಕಂಡು 'ಕೆಲ ಹೊತ್ತು ವಿಶ್ರಮಿಸಿಕೊಳ್ಳಿರಿ. ನಿಮ್ಮ ಸೈನ್ಯವು ಬೀಡು ಬಿಟ್ಟು ಎಲ್ಲ ಕಡೆಗೂ ಶಾಂತವಾಯಿತೆಂದರೆ ನಿಮ್ಮನ್ನು ಗುರುಗಳ ಬಳಿಗೆ ಕರೆದೊಯ್ಯುವೆವು. ಗುರುಗಳು ಈಗ ಯೋಗ ಸಮಾಧಿಸ್ಥರಾದ್ದರಿಂದ, ಅವರ ಭೆಟ್ಟಿಯು ಆಗಲಾರದು. ಒಂದು ಮುಹೂರ್ತ

ಕಾಲ ಮಾತ್ರ ವಿಶ್ರಮಿಸಿಕೊಳ್ಳಿರಿ' ಎಂದು ಮಧುರ ಮಾತುಗಳನ್ನಾಡಿ ಮೊದಲೇ ಸಿದ್ಧಪಡಿಸಿಟ್ಟ ಮಂಟಪದಲ್ಲಿ ಅವನನ್ನು ಇಳಿಸಿದರು. ಸಮ್ರಾಟನಿಗೆ ಇದೆಲ್ಲ ವಿಚಿತ್ರವಾಗಿ ತೋರಿತು. ಅವನ ಎಡಗಣ್ಣು-ಎಡಭುಜಗಳು ಸ್ಫುರಣಗೊಳ್ಳಲಾರಂಭಿಸಿದವ. ಶಕುನಗಳ ಮೇಲೆ ವಿಶ್ವಾಸವುಳ್ಳ ಸಮ್ರಾಟನಿಗೆ ಅಸಮಾಧಾನವಾಗಲಾರಂಭಿಸಿತು. ಈ ದಿನ ನಾನು ಇಲ್ಲಿಗೆ ಬಂದದ್ದರಲ್ಲಿ ಏನೋ ದುರ್ಯೋಗವಿರುತ್ತದೆಂದು ಅವನಿಗೆ ಅನಿಸಹತ್ತಿತು. ಈ ಅಸಮಾಧಾನದಲ್ಲಿಯೇ ಅವನು ರಾಜಗುರುಗಳ ಸಂದರ್ಶನದ ಮಾರ್ಗಪ್ರತೀಕ್ಷೆ ಮಾಡುತ್ತ ಸುಮ್ಮನೆ ಕುಳಿತುಕೊಂಡನು.

ಸಮ್ರಾಟನ ದಂಡು ಬೀಡು ಬಿಡತಕ್ಕ ಸ್ಥಳದಲ್ಲಿ ತಳವೂರಲಾರಂಭಿಸಿತು. ಕುದುರೆ, ಒಂಟೆ, ಆನೆಗಳ ಪ್ರಚಂಡ ಧ್ವನಿಗಳಿಂದ ಆ ಪ್ರದೇಶವು ನಿನಾದಮಯುವಾಯಿತು. ರಮ್ಯವಾದ ಆ ಉದ್ಯಾನವು ಅಸಂಖ್ಯ ಸೈನಿಕರ ತುಳಿತಕ್ಕೆ ಹುಡಿಯೊಡೆದು ಕೆಂದೂಳವು ಆಕಾಶಕ್ಕೆ ಉಡ್ಡಾಣ ಮಾಡತೊಡಗಿತು. ಆ ದೂಳವು ವಿಮಲೆಯ ಕೃಷ್ಣಹೃದಯವನ್ನು ಜಗತ್ತಿಗೆ ನಿವೇದಿಸುವದಕ್ಕಾಗಿ ಮೇಲಕ್ಕೆ ಸಾಗುವದೋ ಎಂಬಂತೆ ತೋರಿತು. ಹೀಗೆ ಗುಹೆಯ ಹೊರಭಾಗದಲ್ಲಿ ಗೊಂದಲವು ನಡೆದಿರಲು, ಗುಹೆಯೊಳಕ್ಕೆ ಸೇರಿದ ವಿಮಲೆಯು ಸಮ್ರಾಟನ ಆಗಮನವನ್ನು ಶಿಷ್ಯರಿಂದ ಕೇಳಿ ತಿಳಿದಳು; ಮತ್ತು ಬಹು ಸಂಭ್ರಮದಿಂದ ಕೈಯಲ್ಲಿ ಉರಿಯುತ್ತಿರುವ ಕಕ್ಕಡವನ್ನು ಹಿಡಿದು ಮದ್ದಿನ ಚೀಲಗಳಿಗೆ ಕೊಳ್ಳಿಯನ್ನು ಕೊಡುವದಕ್ಕಾಗಿ ನಡೆದಳು. ಗುಹೆಯಲ್ಲಿ ವಿಮಲೆಯೊಬ್ಬಳೇ; ಅವಳು ಒಳಗೆ ಯಾರನ್ನೂ ಬರಗೊಟ್ಟಿದ್ದಿಲ್ಲ. ಸಮ್ರಾಟನ ಪ್ರಾಣಹರಣ ಮಾಡುವ ಆ ಮಹಾಸತ್ರದಲ್ಲಿ ತಾನೂ ಉದ್ಧೃತಳಾಗಬೇಕೆಂದು ನಿರ್ಧರಿಸಿದ್ದಳು ಅವಳು ಆ ಗುಹೆಯಲ್ಲಿ ಮದ್ದಿನ ನೂರಾರು ಚೀಲಗಳನ್ನು ಮಂಡಿಸಿದ್ದಳು. ಆ ಮದ್ದಿನ ಅರ್ಧಭಾಗವು ಸುಟ್ಟರೆ ಸಾಕು; ಇಡಿ ಗುಹೆಯು ಹಾರಿ ಅದರ ಮೇಲಿದ್ದ ಹಾಗು ಅದರ ಸುತ್ತುಮುತ್ತಲಿನ ಜನರು ಚೂರು-ಚೂರಾಗಿ ಹೋಗುತ್ತಿದ್ದರು! ಇರಲಿ.

ವಿಮಲೆಯು ಎಲ್ಲ ಚೀಲಗಳಲ್ಲಿಯ ಮದ್ದು ಒಮ್ಮೆಲೆ ಹಾರಬೇಕೆಂದು ಒಂದು ಯುಕ್ತಿಯನ್ನು ಮಾಡಿದ್ದಳು. ಮೊದಲನೆಯ ಚೀಲಕ್ಕೆ ಕೊಳ್ಳಿ ಕೊಟ್ಟ ಬಳಿಕ ಅದು ಕಡೆಯ ಚೀಲಕ್ಕೆ ಕೊಳ್ಳಿ ಮುಟ್ಟುವ ವರೆಗೆ ಹಾರಬಾರದೆಂದು ಆ ಚೀಲಕ್ಕೆ ಮಂದ ಜ್ವಾಲಾಗ್ರಾಹಿಯಾದ ಮತ್ತು ಬಹು ಉದ್ದವಿರುವ ಬತ್ತಿಯನ್ನು ಹಚ್ಚಿದ್ದಳು. ಇದರಂತೆ ಅವಳು ಬತ್ತಿಗಳು ಸುಡುವ ಪ್ರಮಾಣವನ್ನು ಗೊತ್ತುಮಾಡಿಕೊಂಡು, ಎರಡನೆಯ ಮೂರನೆಯ ಚೀಲಗಳಲ್ಲಿಯ ಬತ್ತಿಗಳ ಪ್ರಮಾಣವನ್ನು ಕ್ರಮವಾಗಿ ಕಡಿಮೆ ಮಾಡುತ್ತ ನಡೆದಿದಳ; ಇದರಂತೆ ಅವಳು ಕೊನೆಯ

ಚೀಲದ ವರೆಗೂ ಲೆಕ್ಕದಂತೆ ಬತ್ತಿಗಳ ಅಳತೆಯನ್ನಿಟ್ಟಿದ್ದಳು. ಆದ್ದರಿಂದ ಅವಳು ಕ್ರಮದಂತೆ ಚೀಲಗಳಿಗೆ ಕೊಳ್ಳಿಯನ್ನು ಕೊಡುವದಕ್ಕಾಗಿ ಮೊದಲನೆಯ ಚೀಲದ ಕಡೆಗೆ ಹೋಗಿ ಭರದಿಂದ ಕೊಳ್ಳಿಯನ್ನು ಕೊಡುತ್ತ ನಡೆದಳು; ಆದರೆ ಆಕೆಯು ಎರಡು ಚೀಲಗಳಿಗೆ ಕೊಳ್ಳಿಯನ್ನು ಕೊಟ್ಟು, ಮೂರನೆಯ ಚೀಲಕ್ಕೆ ಹಚ್ಚಬೇಕೆನ್ನುತ್ತಿರಲು, ಹಿಂದಿನಿಂದ ಯಾರೋ ಆಕೆಯ ಕೈಯನ್ನು ಗಟ್ಟಿಯಾಗಿ ಹಿಡಿದರು!

ವಿಮಲೆಯು ಬೆಚ್ಚಿಬಿದ್ದು: 'ಘಾತವಾಯಿತು!'ಎಂದು ನುಡಿದು, ಕೈಹಿಡಿದ ವ್ಯಕ್ತಿಯ ಸಮಾಚಾರ ತಕ್ಕೊಳ್ಳಬೇಕೆಂದು ಕೈಯ್ಯನ್ನು ಕೊಸರಿಕೊಳ್ಳ ಹವಣಿಸಿದಳು; ಆದರೆ ಕೈಹಿಡಿದ ವ್ಯಕ್ತಿಯು ವಿಮಲೆಗಿಂತ ಬಲಿಷ್ಠವಿದ್ದದರಿಂದ ಆಕೆಯ ಆಟವು ಸಾಗದಾಯಿತು. ಆಕೆಯು ಗುದುಮುರುಗಿ ಹಾಕಲಾರಂಭಿಸಿದಳು. ತನ್ನ ಕೈಹಿಡಿದ ವ್ಯಕ್ತಿಯು ಪುರುಷನಿರದೆ ಸ್ತ್ರೀಯಿರಬೇಕೆಂಬದು ಆಕೆಗೆ ಗೊತ್ತಾಯಿತು. ನನ್ನ ಈ ಮಹಾಕಾರ್ಯಕ್ಕೆ ಅದಾವಳು ವಿಘ್ನಕಾರಿಣಿಯಾಗಿರಬಹುದು? ಬಾಗಿಲಲ್ಲಿ ನನ್ನ ಶಿಷ್ಯರು ಬಲವಾಗಿ ಕಾದುಕೊಂಡಿರಲು, ಅದಾವಳು ಒಳಗೆ ಬಂದಿರಬಹುದು? ನನ್ನ ಶಿಷ್ಯರಂತೂ ಅಲ್ಲ. ಮೈ-ಕೈಗಳು ಮೃದುವಾಗಿರುವದರಿಂದ ನನಗೆ ವಿಘ್ನ ಮಾಡಿದ ಈ ವ್ಯಕ್ತಿಯು ಸ್ತ್ರೀಯೇ ಆಗಿರಬೇಕು, ಎಂದು ಯೋಚಿಸುತ್ತ, ರೊಚ್ಚಿನಿಂದ ಕೊಸರಹತ್ತಿದಳು. ವಿಮಲೆಯ ತರ್ಕದಂತೆ ಕೈ ಹಿಡಿದ ವ್ಯಕ್ತಿಯು ನಿಜವಾಗಿಯೂ ಸ್ತ್ರೀಯಿದ್ದದರಿಂದ, ವಿಮಲೆಯು ಆವೇಶಕ್ಕೆ ಈಡಾಗಲಿಲ್ಲ. ಕೈ ಕೊಸರಿಕೊಂಡು ವಿಮಲೆಯು ತಿರುಗಿ ನಿಂತಳು. ಆಗ ಆಕೆಗೆ ಕೊಳ್ಳಿಯ ಬೆಳಕಿನಲ್ಲಿ ಆ ಸ್ತ್ರೀಯ ಅಸ್ಪಷ್ಟರೂಪವು ಕಂಡು ಬಂದಿತು. ವಿಮಲೆಯು ಮತ್ತಿಷ್ಟು ಸಂತಾಪಗೊಂಡು:—"ನೀಚಳೇ, ಹೊತ್ತು ಸಾಧಿಸಿಕೊಂಡೆಯಾ? ಅಯ್ಯೋ! ನನ್ನ ಕೃತಿಯೇ ನನಗೆ ಮುಳುವಾಯಿತಲ್ಲ! ಆ ಹಾಳು ರಾಜಮಂದಿರಕ್ಕೆ ನೆಲಮಾರ್ಗವನ್ನು ಯಾಕೆ ಮಾಡಿಸಿದ್ದೇನು! ಹಾಯ್-ಹಾಯ್! (ರೊಚ್ಚಿನಿಂದ) ಇವಳ ಗಂಟಲನ್ನು ಸೀಳಿ ರಕ್ತಪಾನ ಮಾಡಲಿಯಾ!" ಎಂದು ನುಡಿಯುತ್ತ, ಆಕೆಯ ಮೈಮೇಲೆ ಏರಿಹೋದಳು. ಆ ಆಗಂತುಕ ಸ್ತ್ರೀಯಾದರೂ ರೊಚ್ಚಿಗೆದ್ದಳು. ಇಬ್ಬರೂ ಗುದ್ದಾಡ್ಯಾಡುತ್ತ ಗುಹೆಯ ಬಾಗಿಲ ವರೆಗೆ ಹೋದರು. ಅಷ್ಟರಲ್ಲಿ ಕೊಳ್ಳಿಹಚ್ಚಿದ ಚೀಲಗಳಲ್ಲಿಯ ಬತ್ತಿಗಳು ಸುಡಲು, ಅವೆರಡೂ ಚೀಲಗಳಲ್ಲಿಯ ಮದ್ದು ಒಮ್ಮೆಲೆ ಸ್ಫೋಟವಾಯಿತು. ಅದರ ಆಘಾತಕ್ಕೆ ಆ ಗುಹೆಯ ಪಶ್ಚಿಮಭಾಗವು ಕಳಚಿ ಬಿದ್ದು, ಅದರ ಮೇಲಿದ್ದ ನೂರಾರು ಜನ ಸೈನಿಕರು ಪ್ರಾಣಕ್ಕೆರವಾದರು!

ಆ ಮದ್ದು ಹಾರುವಾಗ ಭಯಂಕರ ಸಪ್ಪಳವಾಯಿತು. ಆ ಸಪ್ಪಳದಿಂದ ಏನೋ ಘಾತವಾಯಿತೆಂದು ವಿಚಾರಮಗ್ನನಾದ ಸಮ್ರಾಟನು ಎದ್ದು

ನಿಂತನು. ಕೂಡಲೆ ಸೈನ್ಯದಲ್ಲಿ ಹಾ-ಹಾಕಾರವೆದ್ದಿತು. ಸಮ್ರಾಟನು ಹಾ-ಹಾಕಾರವುಂಟಾದಲ್ಲಿಗೆ ಧಾವಿಸಿ ಹೋಗಲು, ನಡೆದ ಪ್ರಕಾರವು ಹೊಳೆಯಿತು. ಗುಹೆಯಲ್ಲಿ ಸಪ್ಪಳವಾದ ಕೂಡಲೆ ವಿಮಲೆಯ ಶಿಷ್ಯರೆಲ್ಲರೂ ಅಂಜಿ ದೂರ ಓಡಿದರು. ಆಗ ಸಮ್ರಾಟನಿಗೆ ಬಹು ದೊಡ್ಡ ಸಂಕಟವು ಬಂದಂತೆ ತೋರಿತು. ಕೂಡಲೆ ಬಳಿಯಲ್ಲಿದ್ದ ಸೇನಾಪತಿಗೆ ಸಾಧ್ಯವಿದ್ದ ಮಟ್ಟಿಗೆ ಜಾಗ್ರತೆಯಾಗಿ ಇಲ್ಲಿಂದ ಸೈನ್ಯವನ್ನು ಹೊರಡಿಸಲು ಅಪ್ಪಣೆ ಮಾಡಿದನು. ಪ್ರಯಾಣಸೂಚಕ ಕಹಳೆಯು ಧ್ವನಿಗೈಯ್ಯಲು ಅದೇ ಕಂಟಲಯನ್ನಿಳಿಸುತ್ತಿದ್ದ ಕೆಲವರು ಹಾಗೆಯೆ ಮತ್ತೆ ಹೇರಿದರು. ವಿಶ್ರಾಂತಿ ತೆಗೆದುಕೊಳ್ಳುತ್ತಿದ್ದವರು ತಮ್ಮ ಶಸ್ತ್ರಾಸ್ತ್ರಗಳನ್ನು ಟೊಂಕಕ್ಕೆ ಬಿಗಿಯಲಾರಂಭಿಸಿದರು. ಹೀಗೆ ಸೈನ್ಯವು ಹೊರಡುವ ಸಿದ್ಧತೆಯನ್ನು ನಡಿಸಲು, ಸಮ್ರಾಟನ ಮನಸ್ಸಿನಲ್ಲಿ ಆ ನೆಲಮನೆಯನ್ನು ಶೋಧಿಸುವ ಇಚ್ಛೆಯಾಯಿತು. ಭಂಡಾರೀ ರಾಜನು ಮೋಸದಿಂದ ನಮ್ಮ ಪ್ರಾಣಹರಣ ಮಾಡಲು ಯತ್ನಿಸಿರುವನೆಂಬದು ಅವನಿಗೆ ಪೂರ್ಣ ನಂಬಿಗೆಯಾಗಿ ಹೋಯಿತು. ಆದ್ದರಿಂದ ಅವನು ತನ್ನ ಸೇನಾಪತಿಯೊಡನೆ ಗುಹೆಯ ಮುಖವನ್ನು ಶೋಧಿಸಲುಪಕ್ರಮಿಸಿದನು. ಯಾರಿಗೂ ಕಾಣದಂತಹ ಒಂದು ಬಂಡೆಗಲ್ಲಿನ ಮರೆಯಲ್ಲಿ ಗುಹೆಯ ಮುಖವಿರುವದೆಂದು ಗೊತ್ತಾಯಿತು. ಒಳಿಕ ಅವನು ಆ ಮುಖದ ಬಳಿಗೆ ಹೋಗಲು, ಒಳಗೆ ಯಾರೋ ಇಬ್ಬರು ಸ್ತ್ರೀಯರು ತಮ್ಮತಮ್ಮೊಳಗೆ ಗುದ್ದ್ಯಾಡುತ್ತ ಹಾಗು ಕುನಸಿನ ಮಾತುಗಳನ್ನು ಪರಸ್ಪರರಿಗೆ ಆಡುತ್ತಿರುವರೆಂಬದು ತಿಳಿಯಿತು. ಸೇನಾಪತಿಯು ಮುಖಕ್ಕೆ ಆನಿಸಿದ ಒಂದು ಕಲ್ಲನ್ನು ದೂಡಿ ಒಳಹೊಕ್ಕನು. ಅವನ ಹಿಂದಿನಿಂದ ಸಮ್ರಾಟನೂ ಹೊಕ್ಕನು. ಆಗ ಅವರಿಬ್ಬರಿಗೂ ಗುದ್ದ್ಯಾಡುತ್ತಿದ್ದ ಆ ಹೆಂಗಸರಲ್ಲಿ ಒಬ್ಬಳ ಗುರ್ತು ಚನ್ನಾಗಿ ಹತ್ತಿತು. ಇನ್ನೊಬ್ಬಳು ಸ್ತ್ರೀಯೆಂದು ಗುರ್ತಿಸುವದಕ್ಕೆ ಅವರಿಗೆ ಸಾಧ್ಯವಾಗದೆ ಹೋಯಿತು.

ಅಕಸ್ಮಾತ್ ಈ ಪುರುಷದ್ವಯರು ಒಳಗೆ ಬರಲು, ವಿಮಲೆಯ ಆವೇಶವು ಹಿಮ್ಮೆಟ್ಟಿತು. ಅವಳು ಸಿಟ್ಟಿನಿಂದ ಸಂತಪ್ತಳಾಗಿ ಕಲ್ಲಿನಂತೆ ನಿಂತುಕೊಂಡಳು. ಆಗ ಆಕೆಯ ಕಣ್ಣುಗಳು ಕಿಡಿಗಳನ್ನು ಕಾರುತ್ತಿದ್ದವು! ಅವಳ ಯೋಗಿನಿಯ ವೇಷವು ವಿದ್ರೂಪವಾಗಿತ್ತು. ಅದರಂತೆ ಆ ಆಗಂತುಕ ಸ್ತ್ರೀಯ ಅವಸ್ಥೆಯೂ ಆಗಿ ಅವಳ ತಲೆಗೂದಲುಗಳು ಕೆದರಿ ಹೋಗಿದ್ದವು. ಮೈಮೇಲಿನ ಬಟ್ಟೆಗಳು ಹರಿದು ಚಿಂದಿಯಾಗಿದ್ದವು. ಮುಖವೂ ಕೈ-ಕಾಲುಗಳೂ ಧೂಲಿಯಿಂದ ಆವರಿಸಿದ್ದವು. ಕೈ-ಕಾಲುಗಳಲ್ಲಿ ರಕ್ತವು ಹೊರಚಿಮ್ಮುತ್ತಿತ್ತು. ಈ ವೇಷದಲ್ಲಿರುವ ಅವೆರಡು ವ್ಯಕ್ತಿಗಳನ್ನು ನೋಡಿ, ಗುರುತು ಹತ್ತಿದರೂ ಮಾತಾಡಿಸುವ ಧೈರ್ಯ

ವಾಗದೆ, ಸಮ್ರಾಟನು ದಂಗಾಗಿ ನಿಂತುಕೊಂಡನು! ಗುಹೆಯೊಳಗೆ ಕತ್ತಲು ಗವಿದದ್ದರಿಂದ ಗುಹೆಯು ವಿಸ್ತಾರವೆಷ್ಟು? ಒಳಗೆ ಏನಿರುವದು? ಎಂಬದು ಅವನಿಗೆ ತಿಳಿಯದಾಯಿತು. ಹೀಗೆ ಸಮ್ರಾಟನು ಚಿತ್ರದ ಗೊಂಬೆಯಂತೆ ನಿಂತು ಕೊಳ್ಳಲು, ಆ ಆಗಂತುಕ ಸ್ತ್ರೀಯು ತನ್ನ ಮೈ ಕೈಗಳನ್ನು ಸಾವರಿಸಿಕೊಂಡು ಮುಂದೆ ಬಂದು: "ಅಣ್ಣಾ, ನಿನಗೆ ಶುಭವಾಗಲಿ!" ಎಂದು ನುಡಿದಳು. ಅದನ್ನು ಕೇಳಿ ಸಮ್ರಾಟನು:

"ತಂಗೀ, ಚಂಪಾದೇವೀ, ಇದೇನದ್ಭುತವು? ನಿಮ್ಮಣ್ಣನು ನಮಗೆ ಚನ್ನಾಗಿ ಕೈ ತೋರಿಸಿದನು."

ಚಂಪೆಯು (ನಡುವೇ ಬಾಯಿ ಹಾಕಿ):— ಸಮ್ರಾಟನೇ, ನಡೆದ ಪ್ರಕಾರವು ಬೇರೆಯಿರುವದು. ನೀನು ಹೇಗೂ ದೇವರ ದಯೆಯಿಂದ ಉಳಿದಿರುತ್ತೀ. ನಿನಗೆ ಸಾವಕಾಶವಾಗಿ ಈ ಭಯಂಕರ ಪ್ರಸಂಗವನ್ನೆಲ್ಲ ಹೇಳುತ್ತೇನೆ.

ಸಮ್ರಾಟ: ಚಂಪಾದೇವೀ, ಹೀಗೆಯೇ ಸವಿಮಾತುಗಳಿಂದ ಮರುಳುಗೊಳಿಸಿ, ಯಾರ ಜೀವವನ್ನು ಘಾತಿಸಬೇಕೆಂದು ಮಾಡಿರುವಿ? ನಿಮ್ಮ ಭಯಂಕರ ಕೃಷ್ಣಕಾರಸ್ಥಾನಗಳು ಇದೇ ಈಗ ನಮ್ಮ ಅನುಭವಕ್ಕೆ ಬಂದಿರುವವು. ನೂರಾರು ಜನ ಸೈನಿಕರನ್ನು ಬಲಿಗೊಟ್ಟರೂ ಬುದ್ಧಿ ಬಾರದಷ್ಟು ಮೂಢರು ನಾವಿರುತ್ತೇವೆಂದು ತಿಳಿದಿರುವಿರೇನು? ಸರಿ-ಸರಿ! ಚಂಪಾದೇವೀ, ನಿಮ್ಮಣ್ಣನು ಪ್ರತ್ಯುಪಕಾರವನ್ನು ಒಳಿತಾಗಿ ಮಾಡಿದನು. ನೋಡೋಣ, ನಿಮ್ಮಣ್ಣನಲ್ಲಿ ಎಷ್ಟು ಸಾಮರ್ಥ್ಯವಿರುವದೆಂಬದನ್ನು? ಭೂವಡ ಸಮ್ರಾಟನ ಗಂಟಲಿಗೆ ಗಾಣಹಾಕಬೇಕೆಂದು ಹೊಂಚು ಹಾಕಿರುವ ನಿಮ್ಮಣ್ಣನು, ಇನ್ನು ಮುಂದೆ ತನ್ನ ಆಯುಷ್ಯದ ದಿವಸಗಳನ್ನು ಎಣಿಸಬೇಕಾಯಿತೆಂದು ತಿಳಿ.

ಚಂಪೆಯು (ಗಾಬರಿಯಾಗಿ ಕೆಲಸವು ಕೆಟ್ಟಿತೆಂದು ತಿಳಿದು):--ಸಮ್ರಾಟನೇ, ಮೊದಲು ನನ್ನ ಮಾತನ್ನಷ್ಟು ಕೇಳು. ಅನಂತರ ನಿನ್ನ ಮನಸ್ಸಿಗೆ ಯುಕ್ತಕಂಡದ್ದನ್ನು ಮಾಡು; ಎದುರಿಗೆ ಭಗವೀವಸ್ತ್ರಗಳನ್ನು ಪರಿಧಾನ ಮಾಡಿಕೊಂಡು ನಿಂತಿರುವ ಈ ಯೋಗಿನಿಯು ನಿಜವಾದ ಯೋಗಿನಿಯಲ್ಲ; ಇವಳೊಬ್ಬ ಸ್ತ್ರೀಯಿರುವಳು. ಇವಳ ಹೆಸರು ವಿಮಲೆಯಂತೆ; ಈಕೆಯ ಗಂಡನ ರಾಜ್ಯವನ್ನು ನೀನು ಕಸಿದುಕೊಂಡಿರುವಿಯಂತೆ; ಆದ್ದರಿಂದ ಇವಳು ಸಂತಾಪಗೊಂಡು ನಿನ್ನ ಪ್ರಾಣಹರಣಕ್ಕಾಗಿ ಅನೇಕ ಉಪಾಯಗಳನ್ನು ಯೋಚಿಸಿ, ಹೇಗೆ ಹೇಗೋ ಜನ ಸಹಾಯವನ್ನು ಪಡೆದು, ನಮ್ಮಣ್ಣನ ಬಳಿಗೆ ಬಂದಳಂತೆ! ಗುರ್ಜರ ಸಂಸ್ಥಾನಿಕರ ಅಧಮವೃತ್ತಿಗೆ ಬೇಸತ್ತಿದ್ದ ನಮ್ಮ ಅಣ್ಣನು ರಾಜಕಾರಣದಲ್ಲಿ ಉದಾಸೀನನಾಗಿರಲು, ಅವನನ್ನು ಹುರಿದುಂಬಿಸಲಿಕ್ಕೆ ಈಕೆಯು ಬೇಕುಬೇಕಾದಂಥ ಸಂಗತಿಗಳನ್ನು ಹೇಳಿದಳಂತೆ;

ಒಟ್ಟಿಗೆ ನಿನ್ನಲ್ಲಿ ಪರಮಪ್ರೌಜ್ಞನ್ಯವನ್ನು ಕಲ್ಪಿಸಿ ನಮ್ಮಣ್ಣನನ್ನು ಸಿಟ್ಟಿಗೆಬ್ಬಿಸಿದವಳೀವಳು. ಈ ವಿಮಲೆಯು ಅವನಿಂದ ವಚನ ತೆಗೆದುಕೊಂಡು, ಈ ಗುಹೆಯಲ್ಲಿ ಗುಪ್ತವಾಗಿ ಮದ್ದಿನ ಚೀಲಗಳನ್ನಿರಿಸಿ, ಗುಹೆಯ ಮೇಲ್ಭಾಗದಲ್ಲಿ ನೀನಿಳಿಯಲಿಕ್ಕೆ ಪ್ರಶಸ್ತ ಸ್ಥಳವನ್ನು ನಿರ್ಮಿಸುವ ಎತ್ತುಗಡೆಗೆ ನಿಂತಳು. ಈ ಕೆಲಸಕ್ಕೆ ಬೇಕಾದ ಸಹಾಯ ಸಂಪತ್ತನ್ನು ನಮ್ಮ ಅಣ್ಣನೇ ಕೊಟ್ಟಿರುವನು; ಆದರೆ ನಿನ್ನ ಪರಮೌದಾರ್ಯಕ್ಕೆ ಪಾತ್ರಳಾಗಿ ನಾನು ರಾಜಧಾನಿಗೆ ಬರಲು, ನಿನ್ನ ಸುಗುಣಗಳನ್ನು ತಿಳಿದು ವಿಮಲೆಯು ನಿನ್ನ ಮೇಲೆ ಹೊರಿಸಿದ ಕ್ಷುದ್ರ ಆರೋಪವು ಅಸತ್ಯವಿಧಾನದ್ದೆಂದು ಆತನಿಗೆ ನಂಬಿಗೆಯಾಯಿತು. ಬಳಿಕ ಅವನು ತನ್ನ ಕೃತಿಗೆ ಪಶ್ಚಾತ್ತಾಪಪಟ್ಟು ತಾನೇ ಊರು ಬಿಟ್ಟು ಹೋದರೆ, ನಿಮ್ಮ ಆಗಮನವೇ ಇಲ್ಲಿಗೆ ಆಗುವದಿಲ್ಲಾದ್ದರಿಂದ ಅನಾಯಾಸವಾಗಿ ಈ ಮಹಾಸಂಕಟವು ತಪ್ಪುವದೆಂದು ನಾನು ಬಂದ ಮರುದಿನವೇ ಭದ್ರಗಡಕ್ಕೆ ಹೊರಟು ಹೋದನು. ನಾನಾದರೂ ನಿಮ್ಮ ಆಗಮನವಾಗಲಿಕ್ಕಿಲ್ಲೆಂದು ತಿಳಿದು ಸ್ವಸ್ಥವಾಗಿದ್ದೆನು. ಇಂದು ಮುಂಜಾವಿನಲ್ಲಿ ನಮ್ಮ ಚರರು ನಿಮ್ಮ ಆಗಮನವನ್ನು ಸೂಚಿಸಿದರು. ಆಗ ನಾನು ಬಹಳವಾಗಿ ಮಿಡುಕಿ, ಅನ್ಯ ಉಪಾಯಗಳಿಂದ ಬೇಗನೆ ವ್ಯವಸ್ಥೆಯಾಗಲಿಕ್ಕಿಲ್ಲೆಂದು ರಾಜಧಾನಿಯಿಂದ ಈ ಗುಹೆಯ ವರೆಗೆ ಇರುವ ಸೋಪಾನ ಮಾರ್ಗದಿಂದ ನಾನೇ ಧಾವಿಸಿ ಬಂದೆನು. ಬರುವಷ್ಟರಲ್ಲಿ ಇವಳು ಮದ್ದಿನ ಚೀಲಗಳಿಗೆ ಕೊಳ್ಳಿಯನ್ನು ಕೊಡುತ್ತಿದ್ದಳು. ಕೆಲಸವು ಕೆಟ್ಟಿತೆಂದು ಮೆಲ್ಲಗೆ ಬಂದು ಇವಳ ಕೈಯನ್ನು ಗಟ್ಟಿಯಾಗಿ ಹಿಡಿದೆನು. ಅಷ್ಟರಲ್ಲಿ ಇವಳು ಎರಡು ಚೀಲಗಳಿಗೆ ಬೆಂಕಿ ಹಚ್ಚಿದ್ದಳು. ಬಳಿಕ ಇವಳು ನನ್ನ ಸಂಗಡ ಗುದ್ದ್ಯಾಡಹತ್ತಿದಳು. ಕೊಳ್ಳಿ ಕೊಟ್ಟ ಅವೆರಡು ಚೀಲಗಳು ಹಾರಿದವು. ಇನ್ನೂ ನೂರಾರು ಚೀಲಗಳಿರುವವು; ಈಕೆಯನ್ನು ಪ್ರತಿಬಂಧಿಸಿರಿ; ನಾನು ನಿಮಗೆ ಎಲ್ಲವನ್ನೂ ತೋರಿಸುತ್ತೇನೆ.

ಈ ಮೇರೆಗೆ ಚಂಪೆಯು ಮಾತನಾಡಲು, ಸಮ್ರಾಟನು ವಿಗಿಲುಪಟ್ಟು ವಿಮಲೆಯನ್ನು ಪ್ರತಿಬಂಧಿಸಿದನು. ಬಳಿಕ ಚಂಪೆಯು ಒಳಗೆ ಬೆಳಕನ್ನು ತರಿಸಿ, ಗುಹೆಯೊಳಗಿನ ವಿಮಲೆಯ ಕಾರಸ್ಥಾನಗಳನ್ನೆಲ್ಲ ತೋರಿಸಿದಳು ಸಮ್ರಾಟನು ಬಾಯ ಮೇಲೆ ಕೈಯನ್ನಿಟ್ಟುಕೊಂಡನು! ಚಂಪೆಯು ಅಯುತಕಾಲಕ್ಕೆ ಬರದಿದ್ದರೆ ಇಷ್ಟು ಮದ್ದು ಒಮ್ಮೆಲೆ ಸ್ಫೋಟವಾಗಿ ನಮ್ಮ ಇತಿಶ್ರೀಯಾಗುತ್ತಿತ್ತೆಂದು ಅಂದನು. ವಿಮಲೆಯ ಕಾರಸ್ಥಾನವು ಈ ಮೊದಲೇ ಆತನಿಗೆ ಪಾವಗಡದಲ್ಲಿ ಅನುಭವಕ್ಕೆ ಬಂದಿತ್ತು. ಆದ್ದರಿಂದ ಅವನು ಪ್ರಸ್ತುತದ ಈ ಸಾಹಸವು ವಿಮಲೆಯದೇ ಎಂದು ನಿರ್ಧರಿಸಿದನು. ಆಗ ಚಂಪೆಯ ಸರಳಹೃದಯವು ಆತನಲ್ಲಿ ಭಂಡಾರೀ ರಾಜನ ವಿಷಯಕ್ಕೆ ಮೆಲ್ಲಮೆಲ್ಲಗೆ ಪ್ರೇಮಾದರಗಳನ್ನುಂಟು ಮಾಡಿತು.

---

## ೧೮ ಕಿರುಮಂಜಿಯ ದುರ್ಗ.

ಯಾವದೊಂದು ಸಂಗತಿಯು ಗುಪ್ತವಿರುವ ವರೆಗೇ ಅದರ ಮಹತ್ವವು; ಬೈಲಿಗೆ ಬಿದ್ದ ಬಳಿಕ ಅದರ ಅಂಜಿಕೆಯು ಉಳಿಯುವದಿಲ್ಲ. ಅದರಂತೆ ಗುಹೆಯನ್ನು ನೋಡಿದ ಬಳಿಕ ಸಮ್ರಾಟನ ಭೀತಿಯು ದೂರವಾಯಿತು ಅವನು ಗುಹೆಯಲ್ಲಿ ಬಲವಾದ ಕಾವಲಿರಿಸಿ ಪ್ರಯಾಣೋನ್ಮುಖವಾದ ಸೈನ್ಯವನ್ನು ನಿಲ್ಲಿಸಿದನು. ಬಳಿಕ ಅವನು ಗುಹೆಯ ಮುಂಭಾಗದಲ್ಲಿ ಒಂದು ಪ್ರಶಸ್ಥವಾದ ಶಿಬಿರವನ್ನು ಹೊಡೆಯಿಸಿ ವಾಸ ಮಾಡಿದನು.

ಇತ್ತ ವಿಮಲೆಯು ಸಮ್ರಾಟನಿಂದ ಪ್ರತಿಬಂಧಿಸಲ್ಪಟ್ಟ ಬಳಿಕ ಅವಳಿಗೆ ಒಮ್ಮಿಂದೊಮ್ಮೆ ಹುಚ್ಚು ಹಿಡಿಯಿತು. ಒಂದು ಕಾರ್ಯದಲ್ಲಿ ಕೇವಲ ತಲ್ಲೀನತೆಯನ್ನು ಹೊಂದಿದವರಿಗೆ ಕಾರ್ಯವು ಸಾಧಿಸದಿದ್ದರೆ, ಕಡೆಗೆ ಆ ಕಾರ್ಯರೂಪವಾದ ಹುಚ್ಚೇ ಅವರನ್ನು ಆವರಿಸಿಬಿಡುವದು. ಅದರಂತೆ ವಿಮಲೆಯ ಸ್ಥಿತಿಯೂ ಆಯಿತು. ಅವಳಿಗೆ ಜಗತ್ತಿನಲ್ಲಿ ಏನೂ ತಿಳಿಯದಾಯಿತು. ಆಕೆಯ ಚಾತುರ್ಯ ಸಾಹಸಗಳೂ, ಪೌರುಷವೃತ್ತಿಯೂ ಎಲ್ಲಿಯೋ ಮಾಯವಾದವು. ಅವಳ ಮೋರೆಯ ಮೇಲೆ ಹುಚ್ಚುಕಳೆಯು ಎದ್ದು ಕಾಣಿಸಲಾರಂಭಿಸಿತು. ಒಮ್ಮೊಮ್ಮೆ ಮೈಮೇಲೆ ಎಚ್ಚರವೇ ಇರುತ್ತಿದ್ದಿಲ್ಲ. ಆಕೆಯ ಈ ಸ್ಥಿತಿಯನ್ನು ನೋಡಿ ಸಮ್ರಾಟನು ಮರುಗಿ, ಆಕೆಯ ಯೋಗಕ್ಷೇಮಕ್ಕಾಗಿ ಚಂಪಾದೇವಿಯ ದಾಸಿಯರನ್ನು ಅವಳ ಅನುಮತಿ ಪಡೆದು ನಿಯಮಿಸಿದನು.

ಈ ಮೇರೆಗೆ ಸಮ್ರಾಟನು ವಿಮಲೆಯ ವ್ಯವಸ್ಥೆಯನ್ನು ಮಾಡಿ ಭಂಡಾರೀ ರಾಜನು ರಾಜಧಾನಿಯಲ್ಲಿ ಇಲ್ಲದ್ದರಿಂದ, ಅವನಿಲ್ಲದಾಗ ಅವನ ನಗರಿಗೆ ಹೋಗುವದು ಅಪ್ರಶಸ್ಥವೆಂದು ಚಂಪೆಯ ಆಗ್ರಹವನ್ನು ಮನಸ್ಸಿನಲ್ಲಿ ತಾರದೆ ಮುಂದಕ್ಕೆ ಪ್ರಯಾಣಬೆಳೆಸಿದನು. ಅವನು ಭಂಡಾರೀ ರಾಜ್ಯದ ಗಡಿಯನ್ನು ದಾಟುವದಕ್ಕೂ, ಭಂಡಾರೀರಾಜನು ತನ್ನ ರಾಜ್ಯದ ಗಡಿಯಲ್ಲಿ ಕಾಲಿಡುವದಕ್ಕೂ ಮೇಳು ಬಿದ್ದಿತು ಆಗ ಪರಸ್ಪರರಿಗೆ ಪರಸ್ಪರರು ಬಂದ ಸಂಗತಿಯು ಗೊತ್ತಾಯಿತು. ನಿಷ್ಕಪಟ ಬುದ್ಧಿಯುಳ್ಳ ಭಂಡಾರೀ ರಾಜನು ಸಮ್ರಾಟನ ಭೆಟ್ಟಿಯನ್ನಿಚ್ಛಿಸಿ, ಅದರಂತೆ ರಾಯಭಾರಿಯೊಡನೆ ಹೇಳಿ ಕಳುಹಿದನು. ಸಮ್ರಾಟನಾದರೂ ನಿಷ್ಕಪಟ ಸ್ವಭಾವದವನಾದ್ದರಿಂದ, ಕೂಡಲೆ ಅವನು ಭೆಟ್ಟಿಗೆ ಒಪ್ಪಿಗೆಯನ್ನು ಕೊಟ್ಟನು.

ಸಮ್ರಾಟನ ಹಾಗು ಭಂಡಾರೀ ರಾಜನ ಭೆಟ್ಟಿಯ ಸಮಾರಂಭಕ್ಕೋಸ್ಕರ ಭಂಡಾರೀ ರಾಜ್ಯದ ಗಡಿಯಲ್ಲಿ ಒಂದು ವಿಸ್ತೀರ್ಣವಾದ ಹಾಗು ಸುಂದರವಾದ ಮಂಟಪವು ನಿರ್ಮಿಸಲ್ಪಟ್ಟಿತು. ಇಂಥ ದಿವಸ ಪರಸ್ಪರರು ಪರಸ್ಪರರ ಭೆಟ್ಟಿಗೆ

ಬರತಕ್ಕದ್ದೆಂದು ಗೊತ್ತಾಯಿತು. ಆ ದಿವಸ ಭಂಡಾರೀ ರಾಜನು ನೂತನ ಮಂಟಪವನ್ನು ಪ್ರವೇಶಿಸಿ, ತನ್ನ ಮಂತ್ರಿ ಹಾಗು ದಂಡನಾಯಕರೊಡನೆ ಸಮ್ರಾಟನ ಆಗಮನವನ್ನು ನಿರೀಕ್ಷಿಸುತ್ತ ಕುಳಿತನು. ಸಮ್ರಾಟನ ಸ್ವಾಗತ ಮಾಡುವದಿದ್ದದರಿಂದ, ಮಂಟಪದ ಶೋಭೆಯನ್ನು ಅವರ್ಣನೀಯವಾಗಿ ಮಾಡಿದ್ದರು. ಚಿತ್ರವಿಚಿತ್ರ ಧ್ವಜಪತಾಕೆಗಳಿಂದ ಮಂಟಪವು ಪರಿಶೋಭಿಸುತ್ತಿತ್ತು. ಮಂಟಪದ ಒಳಭಾಗದಲ್ಲಿ ಜರತಾರಿಯ ಛತ್ತಿನಲ್ಲಿ ಸುವರ್ಣದ ಸುಳುವುಗಳು ತೆಗೆಯಲ್ಪಟ್ಟಿದ್ದವು. ಮಂಟಪವು ಬಹು ವಿಶಾಲವಾಗಿತ್ತು. ಸರದಾರ-ಸಾಮಂತಾದಿ ಜನರು ಕುಳಿತುಕೊಳ್ಳುವದಕ್ಕೆ ಬೇರೆ ಬೇರೆ ತರಗತಿಯ ಆಸನಗಳು ಮಂಡಿಸಲ್ಪಟ್ಟಿದ್ದವು.

ಭಂಡಾರೀ ರಾಜನು ಸ್ವಲ್ಪ ಹೊತ್ತು ಮಾರ್ಗಪ್ರತೀಕ್ಷೆ ಮಾಡುತ್ತಿರಲು, ಸಮ್ರಾಟ ಭೂವಡನು ವಂದಿಗಳ ಜಯ-ಜಯಕಾರಗಳೊಡನೆ ಮಂಟಪದ ಮುಂಭಾಗದಲ್ಲಿ ಬಂದನು. ಆಗ ಭಂಡಾರೀ ರಾಜನು ಮಂಟಪದ ಹೆಬ್ಬಾಗಿಲವರೆಗೆ ನಡೆದು ಹೋಗಿ ಸಮ್ರಾಟನನ್ನು ಗೌರವಿಸಿ ಕರೆತಂದು ಉಚಿತಾಸನದಲ್ಲಿ ಕುಳ್ಳಿರಿಸಿದನು. ಭಂಡಾರೀ ರಾಜನ ಪ್ರೇಮಾದರಗಳನ್ನು ನೋಡಿ, ಸಮ್ರಾಟನಿಗೆ ಸಂತೋಷವಾಯಿತು. ವಿಮಲೆಯ ಭಯಂಕರ ಕಾರಸ್ಥಾನದಿಂದ ಸಮ್ರಾಟನು ಸುರಕ್ಷಿತವಾಗಿ ಉಳಿದದ್ದಕ್ಕೆ ಭಂಡಾರೀ ರಾಜನು ಆತನ ಅಭಿನಂದನವನ್ನು ಮಾಡಿ, ಸರಳಮನಸ್ಸಿನಿಂದ ತನ್ನಿಂದಾದ ಅನುಚಿತ ಕಾರ್ಯವನ್ನು ವಿವರವಾಗಿ ಹೇಳಿದನು. ಚಂಪೆಯೂ ಭಂಡಾರೀ ರಾಜನೂ ಹೇಳಿದ ಸಂಗತಿಗಳು ಒಂದೇಯಾದ್ದರಿಂದ, ಅವರಿಬ್ಬರ ನಿಷ್ಕಪಟ ಹೃದಯವು ಸಮ್ರಾಟನಿಗೆ ಗೊತ್ತಾಗಿಯೇಬಿಟ್ಟಿತು. ಒಳಿಕ ಆತನು ಭಂಡಾರೀ ರಾಜನನ್ನು ಸಮಯೋಚಿತ ಮಾತುಗಳಿಂದ ಸಂತೋಷಗೊಳಿಸಿದನು. ಉಭಯತರಲ್ಲಿ ಮೈತ್ರೀಭಾವವು ಅಂಕುರಿಸಿತು. ಒಳಿಕ ಭಂಡಾರೀ ರಾಜನು ಸಮ್ರಾಟನಿಗೆ ಅರಮನೆಗೆ ದಯಮಾಡಿಸದೆ ಹೋಗಕೂಡದೆಂದು ಆಗ್ರಹ ಮಾಡಿದನು. ಆತನ ಆಗ್ರಹವನ್ನು ಮೀರುವದು ಸಮ್ರಾಟನಿಗೂ ಅಶಕ್ಯವಾಯಿತು.

ನಿಯಮಿತ ಪರಿವಾರದೊಡನೆ ಸಮ್ರಾಟನು ಭಂಡಾರೀ ರಾಜನ ರಾಜಧಾನಿಗೆ ಹೋಗಿ, ಬಹು ಸಮಾರಂಭದೊಡನೆ ಆತಿಥ್ಯವನ್ನು ಕೈಕೊಂಡನು. ಒಳಿಕ ಒಂದು ದಿನ ಮಾತಾಡುತ್ತ ಕುಳಿತಾಗ ಸಮ್ರಾಟನು ಭಂಡಾರೀ ರಾಜನ ಮುಂದೆ ಕಿರುಮಂಜೀ ಕೋಟೆಯನ್ನು ಕೈವಶ ಮಾಡಿಕೊಂಡು, ಅಲ್ಲಿ ಸೆರೆಯಲ್ಲಿ ಕೊಳೆಯುತ್ತ ಬಿದ್ದಿರುವ ಸಾಧ್ವಿಯಾದ ಪದ್ಮೆಯನ್ನು ಬಿಡಿಸುವ ತನ್ನ ವಿಚಾರವನ್ನು ತಿಳಿಸಿದನು. ಕೀರ್ತಿಸಿಂಹನ ಈ ಅನ್ಯಾಯವು ಭಂಡಾರೀ ರಾಜನಿಗೂ ಗೊತ್ತಿತ್ತು;

ಮತ್ತು ಯಾವ ಯಾವ ದುಷ್ಟಬುದ್ಧಿಯ ಸಂಸ್ಥಾನಿಕರು ಆತನ ಈ ಕೆಲಸಕ್ಕೆ ನೆರವಾಗಿರುವರೆಂಬದೂ ಅವಗತವಿತ್ತು. ಭಂಡಾರೀ ರಾಜನು ಕಿರುಂಜೆಯ ಕೋಟೆಯನ್ನು ಬಲ್ಲವನಿದ್ದನು. ಆದ್ದರಿಂದ ಆತನು ಆ ವಿಷಯವಾಗಿ ಸಮ್ರಾಟನೊಡನೆ ಅನೇಕ ವಿಧವಾಗಿ ಆಲೋಚಿಸಿದನು. ಭಂಡಾರೀ ರಾಜನ ಮೈತ್ರಿಯು ಒದಗಿದ್ದೊಂದು ಮಹಾಲಾಭವೆಂದು ಸಮ್ರಾಟನಿಗೆ ಅನಿಸಿತು. ಬಳಿಕ ಅವರೀರ್ವರೂ ರಹಸ್ಯವಾಗಿ ಆಲೋಚಿಸಿ, ಕಿರುಮಂಜೆಯ ಕೋಟೆಯ ಮೇಲೆ ಸಾಗಿ ಹೋಗುವದನ್ನು ನಿರ್ಧರಿಸಿದರು.

ಬಳಿಕ ಸಮ್ರಾಟನು ಭಂಡಾರೀ ರಾಜನ ಅನುಮತಿಯಂತೆ ತನ್ನ ಬಳಿಯಲ್ಲಿ ಸೆರೆಸಿಕ್ಕ ವೇಷಾಂತರಿಸಿದ ಗುಪ್ತಹೇರರನ್ನು ಕರೆಯಿಸಿದನು. ಅವರಲ್ಲಿ ವಿಮಲೆಯ ಸಹಾಯಕರಲ್ಲಿ ಪ್ರಮುಖನಾದ ಮಾಲೋಜಿ ಮೊದಲಾದವರು ಇದ್ದರೆಂಬದು ನಮ್ಮ ವಾಚಕರ ಸ್ಮರಣೆಯಲ್ಲಿರಬಹುದು. ಸೆರೆಯಲ್ಲಿರುವಾಗಲೇ ವಿಮಲೆಯ ಕಾರಸ್ಥಾನವು ಬೈಲಿಗೆ ಬಿದ್ದು, ಕೆಲಸವು ಕೆಟ್ಟು ಹೋಯಿತೆಂಬ ಸಂಗತಿಯನ್ನು ಮಾಲೋಜಿಯು ಕೇಳಿ ತಿಳಿದಿದ್ದನು. ಆದ್ದರಿಂದ ಆತನು ಸಮ್ರಾಟನೆದುರಿಗೆ ಬರಬೇಕಾದರೆ ಬಹಳವಾಗಿ ನಾಚಿಕೊಂಡಿದ್ದನು. ಭಂಡಾರೀ ರಾಜನು ಎಲ್ಲ ಗುಪ್ತಹೇರರ ಪರಿಚಯವನ್ನು ಸಮ್ರಾಟನಿಗೆ ಮಾಡಿಕೊಟ್ಟನು. ಆಗ ಸಮ್ರಾಟನು ಅಧೋಮುಖನಾಗಿ ನಿಂತಿರುವ ಮಾಲೋಜಿಯನ್ನು ಗೌರವಿಸಿ: ಮಾಲೋಜಿರಾಯರೇ, ನೀವು ಸಾಮಾನ್ಯ ಮನುಷ್ಯರಲ್ಲ! ನಮ್ಮಂತೆ ನೀವೂ ರಾಜರಿರುತ್ತೀರಿ. ಇತ್ತ ಬರ್ರಿ; ಇಲ್ಲಿ ಕುಳಿತುಕೊಳ್ಳಿರಿ, ಎಂದು ನುಡಿದನು. ಸಮ್ರಾಟನ ಈ ಗೌರವದಿಂದ ಮಾಲೋಜಿಯು ಅತ್ಯಂತ ಲಜ್ಜಿತನಾಗಿ, ವಿಮಲೆಯ ಬೆನ್ನು ಹತ್ತಿದ್ದಕ್ಕೆ ಆತನಿಗೆ ಬಹಳ ಪಶ್ಚಾತ್ತಾಪವಾಯಿತು. ವಿಮಲೆಯ ಪ್ರಸನ್ನತೆಯನ್ನು ಪಡೆಯುವದಕ್ಕೋಸ್ಕರ ನಾನು ಈ ರೀತಿ ಅಧಮ ವೃತ್ತಿಯಿಂದ ವರ್ತಿಸಿದ್ದು ಬಹಳ ಅನ್ಯಾಯವೆಂದು ಅವನಿಗೆ ಅನಿಸಹತ್ತಿತು. ತನ್ನ ಶತ್ರುಗಳ ನಾಶ ಮಾಡಲಿಲ್ಲ; ಕ್ಷಾತ್ರಪೌರುಷವನ್ನು ವ್ಯಕ್ತ ಮಾಡಲಿಲ್ಲ; ಕ್ಷುದ್ರಸ್ತ್ರೀಯ ಬೆನ್ನು ಹತ್ತಿ ಸಮ್ರಾಟನ ಸೆರೆಯಲ್ಲಿ ವ್ಯರ್ಥವಾಗಿ ಕೊಳೆಯುತ್ತ ಬಿದ್ದೆನಲ್ಲ! ಎಂಬ ವಿಚಾರಗಳು ಅವನ ಅಂತಃಕರಣವನ್ನು ಘಾಸಿಗೊಳಿಸಿದವು. ಆಗ ಅವನು ಪಶ್ಚಾತ್ತಾಪಯುಕ್ತ ವಾಣಿಯಿಂದ ಸಮ್ರಾಟನನ್ನು ಕುರಿತು ನುಡಿದನೇನಂದರೆ: "ಮಹಾರಾಜ, ನನ್ನಂಥ ಕುಟಿಲನನ್ನು ತಾವು ಈ ರೀತಿ ಗೌರವಿಸಿದ್ದು ತಮ್ಮ ಘನತರವಾದ ಯೋಗ್ಯತೆಗೆ ಒಪ್ಪತಕ್ಕದ್ದೇ ಸರಿ! ನಾನು ತಮ್ಮ ಕೀರ್ತಿಯನ್ನು ಈ ಮೊದಲೇ ಕೇಳಿದ್ದೆನು; ತಮ್ಮ ಆ ಸೌಜನ್ಯದ ಪ್ರಭಾವವನ್ನು ಇಂದು ನಾನು ಪ್ರತ್ಯಕ್ಷವಾಗಿ ನೋಡಿದೆನು; ಆದರೆ ನನ್ನ ದುರ್ದೈವದಿಂದ ನಿಮ್ಮ ಆಶ್ರಯ

ವನ್ನು ದೊರಕಿಸುವ ಯೋಗವು ನನಗೆ ಒದಗಲಿಲ್ಲ. ಯಾಕಂದರೆ, ನಾನು ರಾಜ್ಯ ಭ್ರಷ್ಟನಾದ ಬಳಿಕ ನಿಮ್ಮೆಡೆಗೆ ಬರಬೇಕೆಂದು ಹೊರಟಿರಲು, ಮಾರ್ಗಮಧ್ಯದಲ್ಲಿ ನನ್ನ ದುರ್ದೈವವು ನನ್ನನ್ನು ತಡೆ ಹಾಕಿತು. ನಾನು ವಿಮಲೆಯ ಜಾಳಿಗೆಯಲ್ಲಿ ಸಿಕ್ಕು ನಿಮಗೆ ದ್ರೋಹ ಬಗೆದೆನು. ಈಗ ನಾನು ನಿಮ್ಮ ಮುಂದೆ ನಿಲ್ಲಲು ಸಹ ಅಯೋಗ್ಯನಿರುತ್ತೇನೆ! '

ಮಾಲೋಜಿಯು ಈ ಮಾತುಗಳನ್ನು ಕೇಳಿ ಅವನಲ್ಲಿ ಅನುತಾಪ ಹುಟ್ಟಿದ ಬಗ್ಗೆ ಸಮ್ರಾಟನಿಗೆ ನಂಬಿಗೆಯಾಯಿತು. ಗುರ್ಜರ ಭೂಪ್ರದೇಶವನ್ನು ಕೈವಶ ಮಾಡಿಕೊಳ್ಳ ಹವಣಿಸುವ ಸಮ್ರಾಟನು ಮಾಲೋಜಿಯನ್ನು ನಿರಾಕರಿಸದೆ, ಅವ ನಿಗೆ ಸಮಯೋಚಿತ ಶಬ್ದಗಳಿಂದ ಹರುಷವನ್ನುಂಟು ಮಾಡಿ, ತನ್ನಲ್ಲಿ ಆಶ್ರಯ ವನ್ನಿತ್ತನು. ಉಳಿದವರಲ್ಲಿ ಮೂವರು ಭಂಡಾರೀ ರಾಜನ ಸೇವಕರಿದ್ದರು. ಅವರು ನಾಚಿಕೊಂಡು ಭಂಡಾರೀ ರಾಜನ ಅಪ್ಪಣೆಯಂತೆ ತಮ್ಮ ತಮ್ಮ ಕೆಲಸ ಗಳಿಗೆ ಹೋದರು. ಉಳಿದ ಮೂವರು ವಿಮಲೆಗೋಸ್ಕರ ಬೇರೆ ಸಂಸ್ಥಾನ ಗಳಿಂದ ಬಂದವರು. ಅವರು ಶುದ್ಧಮನಸ್ಸಿನಿಂದ ಸಮ್ರಾಟನನ್ನೇ ಹೊಂದಿದರು.

ಸಮುದ್ರದಂತೆ ಗಂಭೀರವಾಗಿರುವ ಸಮ್ರಾಟನ ಸೈನ್ಯದಲ್ಲಿ ಭಂಡಾರೀ ಸೈನ್ಯವು ಬೆರೆತುಕೊಂಡಿತು ರಾಜ್ಯಭ್ರಷ್ಟನಾದ ಮಾಲೋಜಿಗೆ ಅಸಮಾಧಾನ ವಾಗಬಾರದೆಂದು ಸಮ್ರಾಟನು ಅವನನ್ನು ಐದು ಸಾವಿರ ರಾಹುತರ ಮೇಲೆ ಅಧಿ ಕಾರಿಯನ್ನಾಗಮಾಡಿದನು. ಕೀರ್ತಿಸಿಂಹನು ತನ್ನ ಶತ್ರುವಾದದ್ದರಿಂದ, ಮಾಲೋ ಜಿಯು ಹುರುಪುಗೊಂಡನು. ಕಿರುಮಂಜೇ ದುರ್ಗವನ್ನು ಮುತ್ತುವದಕ್ಕೆ ಒಂದು ದಿನ ಶುಭಮುಹೂರ್ತದಲ್ಲಿ ಸಮ್ರಾಟನು ಭಂಡಾರೀ ರಾಜನೊಡನೆ ದಂಡಯಾ ತ್ರೆಗೆ ಹೊರಟನು. ಸಮ್ರಾಟನು ನ್ಯಾಯಪ್ರಿಯನೂ ಸರಳ ಮನಸ್ಸಿನವನೂ ಇರು ವನೆಂಬದು ಮಾಲೋಜಿ ಮೊದಲಾದವರಿಗೆ ಗೊತ್ತಾಗಿತ್ತು. ಆದ್ದರಿಂದ ಅವರು ಆತನೊಡನೆ ಬಹು ಎಚ್ಚರದಿಂದ ನಡೆಯುತ್ತಿದ್ದರು. ಸೈನ್ಯವು ಸಾಗಿರುವಾಗ ಒಬ್ಬೊಬ್ಬರ ಮನಸ್ಸಿನಲ್ಲಿ ಒಂದೊಂದು ಬಗೆಯ ವಿಚಾರಗಳು ನಡೆದಿದ್ದವು. ಆಗ ಸಮ್ರಾಟನು ಯೋಚನೆ ಮಾಡುತ್ತಿದ್ದದ್ದೇನಂದರೆ:—"ನಾನು ಗುರ್ಜರ ದೇಶ ದಲ್ಲಿ ಕಾಲಿಟ್ಟು ಇಂದಿಗೆ ಎಂಟು ತಿಂಗಳುಗಳಾಗುತ್ತ ಬಂದವು. ಈ ಅವಧಿ ಯಲ್ಲಿ ಹೇಳಿಕೊಳ್ಳುವಂಥ ಕಾಳಗಗಳು ಉಂಟಾಗದಿದ್ದರೂ, ಒಂದರ ಹಿಂದೆ ಒಂದು ದುರ್ಗಗಳು ನನ್ನ ಕೈವಶವಾಗುತ್ತಲೇ ಇರುವವು. ಪಾವುಗಡದ ಗಿರಿ ಸಿಂಹನು, ವೃದ್ಧ ಲಕ್ಷ್ಮಣದಾಸನು, ಭಂಡಾರೀ ರಾಜ, ಮಾಲೋಜಿ ಮೊದಲಾ ದವರು ನನ್ನ ಸಖ್ಯವನ್ನು ಬೆಳೆಸಿದರು. ನನಗೆ ಇದುವರೆಗೆ ಯಾವ ಗುರ್ಜರ ವೀರನೂ ಅಡ್ಡ ಬಂದಿರುವದಿಲ್ಲ. ಇದರಿಂದ ಗುರ್ಜರ ಭೂಪ್ರದೇಶವು ನಿರ್ವೀ

ರ್ಯವಾಗಿದೆಯೆಂದು ಮಾತ್ರ ಅಸ್ಸುವ ಹಾಗಿಲ್ಲ. ಯಾಕಂದರೆ ಈ ವಿಶಾಲವಾದ ರಾಷ್ಟ್ರದಲ್ಲಿ ನಾನು ಇದು ವರೆಗೂ ಒಂದು ಮೂಲೆಯಲ್ಲಿರುತ್ತೇನೆ; ಆದರೆ ಈ ರಾಷ್ಟ್ರದಲ್ಲಿ ಏಕಛತ್ರಾಧಿಪತ್ಯವು ಇರದ್ದರಿಂದ, ಶಕ್ತಿಯ ಏಕೀಕರಣವು ಮಾತ್ರ ಆಗುವಂತಿಲ್ಲ. ಮೇಲಾಗಿ ಎಲ್ಲರೂ ವಿಷಯಲಂಪಟಗಳಾದ್ದರಿಂದ, ಅವರ ಶೌರ್ಯಾದಿ ಗುಣಗಳು ನಷ್ಟಪ್ರಾಯವಾಗಿರಬೇಕು. ಏನೇ ಇರಲಿ. ಇದು ವರೆಗೆ ವಿಜಯವಾಗುತ್ತ ಬಂದಿರುವದು. ಮೊನ್ನೆ ವಿಮಲೆಯ ಘಾತುಕಪ್ರಸಂಗ ದಲ್ಲಿ ಚಂಪಾದೇವಿಯು ದೈವಯೋಗದಿಂದಲೇ ನಮಗೆ ಸಹಾಯ ಮಾಡಿದಳು. ಹಾಯ್ ಹಾಯ್! ವಿಮಲೆಯು ಎಷ್ಟು ಸಾಹಸಿಯವಳು? ನಾನವಳಿಗೆ ವಶನಾ ಗದ್ದರಿಂದ, ಇಷ್ಟು ಸಾಹಸ ಮಾಡಿದಳಲ್ಲವೇ? ಭಲಾ! ವಿಮಲೆ, ನಿನ್ನಂಥ ಗಟ್ಟಿ ಗರಾದ ಹೆಂಗಸರು ಸಿಗುವದು ದುರ್ಲಭವೇ ಸರಿ. ಆದರೂ ನೀನು ನಮಗೆ ಪಾವುಗಡದ ಕಿಲ್ಲೆಯನ್ನೊದಗಿಸಿ ಕೊಟ್ಟಿರುತ್ತೀ; ಆದ್ದರಿಂದ ನಿನ್ನನ್ನು ಸಂರಕ್ಷಿ ಸುವದು ನಮ್ಮ ಕರ್ತವ್ಯವು. ನಾನು ಕಿರುಮಂಜೇ ದುರ್ಗದಲ್ಲಿ ವಿಜಯವನ್ನು ಸಂಪಾದಿಸಿಕೊಂಡು ಬರುವ ವರೆಗೆ ಚಂಪಾದೇವಿಯು ನಿನ್ನನ್ನು ಸಂರಕ್ಷಿಸಬಹು ದಲ್ಲವೆ? ಈ ಸಮ್ರಾಟನು ನಿನ್ನನ್ನು ಎಂದೂ ಉದಾಸೀನ ಮಾಡಲಾರನು. ಇರಲಿ. ನಮ್ಮ ಕರ್ನಾಟಕಕ್ಕೆ ತೆರಳುವಾಗ ವಿಮಲೆಯನ್ನು ಕರೆದೊಯ್ದರಾಯಿತು. ಪ್ರಸ್ತುತದಲ್ಲಿ ನಡೆಯಬೇಕಾಗಿದ್ದ ಕಾಳಗದಲ್ಲಿ ಜಯವು ಸಿಕ್ಕರೆ, ಇಡಿ ಗುರ್ಜರ ದೇಶವು ಕೈವಶವಾದಂತೆಯೇ ಸರಿ! ಯಾಕಂದರೆ, ಕೀರ್ತಿಸಿಂಹನ ಸ್ನೇಹಿತರು ಈ ಕಾಳಗದಲ್ಲಿ ಸ್ವಾಭಾವಿಕವಾಗಿ ಕೈ ಹಾಕುವರು. ಇಲ್ಲಿಯೇ ಅವರ ಪರಾ ಭವವಾದರೆ, ಮುಂದೆ ಅವರು ತಲೆಯನ್ನೇ ಎತ್ತುವದಿಲ್ಲ. ಇರಲಿ. ನಮ್ಮ ಕರ್ನಾ ಟಕದ ಪುಣ್ಯವು ಹೇಗಿದೆಯೆಂಬದನ್ನು ನೋಡೋಣ!'

ಈ ಮೇರೆಗೆ ಸಮ್ರಾಟನು ಒಂದಲ್ಲ ಎರಡಲ್ಲ ಅನೇಕ ವಿಧ ಯೋಚನೆಗ ಳನ್ನು ತಂದುಕೊಂಡು ಅವುಗಳಲ್ಲಿ ಮಗ್ನನಾಗಿರಲು, ಇತ್ತ ಭಂಡಾರೀ ರಾಜನು ತನ್ನ ಮನಸ್ಸಿನಲ್ಲಿ: "ಭಲೆ, ಸಮ್ರಾಟನು ಬಹು ಯೋಗ್ಯ ಮನುಷ್ಯನಿರುವನು. ಸಮ್ರಾಟನಲ್ಲಿರತಕ್ಕ ಗುಣಗಳು ಅವನಲ್ಲಿ ಸಂಪೂರ್ಣವಾಗಿರುವವು. ಬಹಶಃ ಶೌರ್ಯವೂ ಕ್ಷಮೆಯೂ, ಒಂದೇ ಕಡೆಯಲ್ಲಿ ವಾಸವಾಗಿರುವದು ಕಡಿಮೆ. ಈ ಅಪೂರ್ವ ಯೋಗವನ್ನು ಈತನಲ್ಲಿ ಕಾಣಬಹುದಾಗಿದೆ. ಇಂಥವನೊಡನೆ ಯುದ್ಧ ಮಾಡುವದೆಂದರೆ, ಒಂದು ಬಗೆಯಿಂದ ತಪ್ಪೆನಿಸುತ್ತದೆ. ಅವನಲ್ಲಿ ಪರನಾರೀ ಸೋದರತ್ವ, ಶರಣಾಗತರಲ್ಲಿ ಆದರಭಾವ, ಹಿಡಿದ ಕಾರ್ಯವನ್ನು ಪರಿಣಾಮಿಸು ವದರಲ್ಲಿ ದೃಢನಿಶ್ಚಯ ಇವೇ ಮೊದಲಾದ ಸದ್ಗುಣಗಳಿರುತ್ತಿರಲು, ಅವನೆದುರಿಗೆ ಅಧಾವನಿಂದ ನಿಲ್ಲಲಿಕ್ಕಾದೀತು? ನೀತಿವಂತನ ಕಾರ್ಯವು ಯಾವಾಗಲೂ ಸ್ಥಿರವಿ

ರುತ್ತದೆ. ಸಮ್ರಾಟನು ಒಳ್ಳೇ ನೀತಿವಂತನೆಂತಲೇ ಇಂದಿನ ವರೆಗೆ ಹೋದಲ್ಲೆಲ್ಲ ಜಯ ಸಂಪಾದಿಸಿಕೊಂಡು ಬಂದಿರುತ್ತಾನೆ. ವಸ್ತುತಃ ಸಮ್ರಾಟನು ನಿಜವಾಗಿಯೂ ದೈವಶಾಲಿಯಿರುತ್ತಾನೆ. ಹಾಗಲ್ಲದಿದ್ದರೆ ವಿಮಲೆಯ ಪ್ರಕರಣದಲ್ಲಿ ಅವನು ಹೇಳಹೆಸರಿಲ್ಲದಂತಾಗುತ್ತಿದ್ದನು. ಅದರಲ್ಲಿ ಅವನು ತನ್ನ ಸಚ್ಛೀಲದಿಂದಲೇ ಉಳಿದನೆಂದು ನನಗೆ ತೋರುತ್ತದೆ. ನಮ್ಮ ಚಂಪೆಯ ಮೇಲೆ ಆತನು ಉಪಕಾರದ ಹೊರೆ ಹೊರಿಸದಿದ್ದರೆ ಆಕೆಯು ಹೀಗೆಲ್ಲಿ ಸಾಹಸ ಮಾಡುತ್ತಿದ್ದಳು? ನಮ್ಮ ಮಿತ್ರತ್ವವಾದರೂ ಅವನಿಗೆಲ್ಲಿ ಲಭಿಸುತ್ತಿತ್ತು?'' ಎಂದು ಯೋಚಿಸುತ್ತಿದ್ದನು. ಇವರಿಬ್ಬರಂತೆ ಮಾಲೋಜಿಯೂ ಆಲೋಚನೆ ಮಾಡುತ್ತ ತನ್ನ ಮೂರ್ಖತನದ ವಿಷಯವಾಗಿ ಬಹಳವಾಗಿ ಹಳಿದುಕೊಂಡನು. ಅವನು ವಿಮಲೆಯನ್ನು ಪೂರಾ ಮರೆತು ಬಿಟ್ಟು ಕೀರ್ತಿಸಿಂಹನ ಸೇಡು ಹೇಗೆ ತೀರಿಸಿಕೊಳ್ಳಬೇಕೆಂದು ಹಂಚಿಕೆ ಹಾಕಲಾರಂಭಿಸಿದನು. ಒಮ್ಮೊಮ್ಮೆ ಕೀರ್ತಿಸಿಂಹನನ್ನು ತಾನೇ ಕೈಮುಟ್ಟಿ ಕೊಲ್ಲಬೇಕೆಂದು ಅನ್ನುತ್ತಿದ್ದನು. ಕೀರ್ತಿಸಿಂಹನಾದರೂ ಬಲಾಢ್ಯನಿದ್ದದರಿಂದ ದುರ್ಗವನ್ನು ಸ್ವಾಧೀನಪಡಿಸಿಕೊಳ್ಳುವದು ಸಮ್ರಾಟನಿಗೆ ಜಡವಾಗಬಹುದು. ಆದರೂ ಈ ಪ್ರಸಂಗದಲ್ಲಿ ಕೀರ್ತಿಸಿಂಹನ ಪರಾಕ್ರಮವನ್ನೂ ಆತನ ಸಹಾಯಕರ ಪರಾಕ್ರಮವನ್ನೂ ನೋಡಿಬಿಡೋಣ? ಎಂಬ ವಿಚಾರಗಳಲ್ಲಿ ಮಗ್ನನಾಗಿದ್ದನು.

ಪ್ರಯಾಣೋನ್ಮುಖವಾದ ಸಮ್ರಾಟನ ದಂಡು ಪಯಣದ ಮೇಲೆ ಪಯಣವನ್ನು ಮಾಡುತ್ತ ಶೀಘ್ರಗತಿಯಿಂದ ಸಾಗಿ ಕಿರುಮಂಜಿಯ ಸಮೀಪಕ್ಕೆ ಬಂದಿತು. ಆಗ ಆ ಪ್ರದೇಶವನ್ನು ನೋಡಿ ಸಮ್ರಾಟನ ಮೊದಲು ಮಾಡಿಕೊಂಡು ಸಮಸ್ತ ಸೈನಿಕರಿಗೂ ಆನಂದವಾಯಿತು. ಅಲ್ಲಿ ವನಲಕ್ಷ್ಮಿಯು ಪ್ರತ್ಯಕ್ಷವಾಗಿ ನೆಲೆಸಿರುವಳೋ ಎಂಬಂತೆ ಭಾಸವಾಗುತ್ತಿತ್ತು. ಭೂಮಿಯು ಬಹು ಫಲವತ್ತಾದದ್ದು; ಬಂಜೆ ಭೂಮಿಯನ್ನು ಅಲ್ಲಿ ಕಾಣುವದೇ ಅಪರೂಪವಾಗಿತ್ತು. ದುರ್ಗವು ಇನ್ನೂ ಬಹು ದೂರವಿರುತ್ತಲೇ ಕಾಣತೊಡಗಿತ್ತು. ಸಮೀಪಕ್ಕೆ ಬಂದ ಹಾಗೆ ಆ ದುರ್ಗದ ರಮಣೀಯತೆಯೂ, ಭದ್ರತೆಯೂ ನಿಚ್ಚಳವಾಗಿ ಕಾಣತೊಡಗಿದವು. ಸಮ್ರಾಟನು ಇದುವರೆಗೆ ಅಸಂಖ್ಯ ದುರ್ಗಗಳನ್ನು ನೋಡಿದ್ದರೂ ಇಂಥ ದುರ್ಗವನ್ನು ಅವನು ನೋಡಿರಲಿಲ್ಲ. ಬಹು ಎತ್ತರವಾದ ಒಂದು ಬೆಟ್ಟದ ಮೇಲೆ ಆ ದುರ್ಗದ ಕಟ್ಟಡವಿತ್ತು. ಕಡಿದಾದ ಆಕಾರವುಳ್ಳ ಆ ಬೆಟ್ಟವೇ ಮೊದಲು ಬಹು ಉನ್ನತವಿದ್ದು, ಅದರ ಮೇಲೆ ಬಹು ಆಳವಾದ ಗೋಡೆಗಳಿದ್ದವು. ಆದ್ದರಿಂದ ಆ ದುರ್ಗವು ಶತ್ರುಗಳ ಪ್ರವೇಶಕ್ಕೆ ಅತ್ಯಂತ ದುರ್ಗಮವಾಗಿತ್ತು. ಆ ಪ್ರಚಂಡವಾದ ಬೆಟ್ಟಕ್ಕೆ ಸುರಂಗ ಹಾಕುವದು ಕೂಡಾ ಶತ್ರುಗಳಿಗೆ ಅಶಕ್ಯವಿತ್ತು.

ಆ ದುರ್ಗದ ಬಹು ವಿಸ್ತಾರವಾದ ಕೊತ್ತಳಗಳು ಸಮ್ರಾಟನ ಸೈನಿಕರಲ್ಲಿ

ಗಡಿಬಿಡಿಯನ್ನುಂಟು ಮಾಡಿದವು. ಸೈನಿಕರು ಆ ದುರ್ಗವನ್ನು ನೋಡಿ: "ಅಬ್ಬಾ! ಏನು ದುರ್ಗವಿದು? ಶಾಬಾಸ್! ಈ ದುರ್ಗವನ್ನು ತಕ್ಕೊಂಡರೇ ನಮ್ಮ ನಿಜವಾದ ಪೌರುಷವು! ನಮ್ಮ ಕರ್ನಾಟಕ ಸೈನ್ಯದಲ್ಲಿ ಎಷ್ಟು ಒಗರಿರುವದೆಂಬದನ್ನು ಈ ಗುರ್ಜರ ನಿವಾಸಿಗಳು ತಿಳಿದುಕೊಳ್ಳಲಿ, ಎಂದು ತಮ್ಮ ತಮ್ಮೊಳಗೆ ಮಾತಾಡತೊಡಗಿದರು. ಸೈನಿಕರಂತೆ ಸೈನ್ಯದ ಸಣ್ಣ ದೊಡ್ಡ ಅಧಿಕಾರಿಗಳಿಗೂ ಬಾಹು ಸ್ಫುರಣವಾಗ ತೊಡಗಿತು. ನಿಜವಾದ ಶೂರರಿಗೆ ಅಸಾಧ್ಯ ಕೆಲಸವು ಗಂಟುಬಿದ್ದಷ್ಟು ಸಂತೋಷವೆನಿಸುತ್ತದೆ; ಆದರೆ ಹೇಡಿಗಳಿಗೆ ಮಾತ್ರ ದುಃಖವಾಗುತ್ತದೆ. ನಮ್ಮ ಸಮ್ರಾಟನ ಕರ್ನಾಟಕ ದಂಡಾಳುಗಳು ಅಂಥ ಹೇಡಿಗಳಿದ್ದಿಲ್ಲ. ಅವರಲ್ಲಿ ಜಾಜ್ವಲ್ಯವಾದ ಶೌರ್ಯವು ರೋಮರೋಮಗಳಲ್ಲಿ ವ್ಯಾಪಿಸಿತ್ತು; ಅಂತೇ ಆ ದುರ್ಗಮವಾದ ದುರ್ಗದ ದರುಶನದಿಂದ ಅವರಲ್ಲಿ ವಿಲಕ್ಷಣ ಚಟವಟಿಕೆಯು ತೋರಿಬಂದಿತು. ಹಾಹಾ ಅನ್ನುವಷ್ಟರಲ್ಲಿ ಸೈನ್ಯವು ದುರ್ಗವನ್ನು ಒಳಿಸಿ ತಳವೂರಿತು.

ಈ ಮೇರೆಗೆ ಸಮ್ರಾಟನ ದಂಡು ದುರ್ಗವನ್ನು ಒಳಿಸಿ ತಳವೂರಲು, ದುರ್ಗಾಧಿಪತಿಯಾದ ಕೀರ್ತಿಸಿಂಹನು ಗಡಬಡಿಸಿದನು. ಅವನು ಸಮ್ರಾಟನ ಪರಾಕ್ರಮವನ್ನು ದೂರಿನಿಂದಲೇ ಕೇಳಿದ್ದನು; ಮತ್ತು ಆತನಿಗೆ ಒಮ್ಮೆ ಕೈ ತೋರಿಸಬೇಕೆಂದು ತನ್ನ ಸ್ನೇಹಿತ ಸಂಸ್ಥಾನಿಕರ ಒಪ್ಪಿಗೆಯನ್ನು ಪಡೆದು ಯುದ್ಧದ ಸೌರಣೆಯನ್ನೂ ನಡೆಸಿದ್ದನು; ಆದರೆ ಸಮ್ರಾಟನು ಹೀಗೆ ಅಕಸ್ಮಾತ್ತಾಗಿ ತನ್ನ ನಗರಿಗೆ ಮುತ್ತಿಗೆ ಹಾಕುವನೆಂಬ ಕಲ್ಪನೆಯು ಅವನಿಗಿದ್ದಿಲ್ಲ. ಮೇಲಾಗಿ ಅವನು ಈಗ ಪದ್ಮೆಯನ್ನು ವಿವಾಹ ಮಾಡಿಕೊಳ್ಳುವ ಯತ್ನದಲ್ಲಿದ್ದನು. ಆದ್ದರಿಂದ ಅವನು ಗುಪ್ತಚಾರರನ್ನು ಕಳುಹಿಸಿ, ಸುದ್ದಿಗಳನ್ನು ತರಿಸುವದನ್ನೇ ಬಿಟ್ಟು ಬಿಟ್ಟಿದ್ದನು. ಹೀಗೆ ಕೀರ್ತಿಸಿಂಹನು ಅಜಾಗರೂಕನಾಗಿರಲು, ದುರ್ಗದ ಬಳಿಯಲ್ಲಿ ತಳವೂರಿದ ಸಮ್ರಾಟನು ಭಂಡಾರೀ ರಾಜ, ಮಾಲೋಜಿ ಹಾಗು ತನ್ನ ಸೇನಾಪತಿ ಇವರೊಡನೆ ದುರ್ಗವನ್ನು ನಿರೀಕ್ಷಿಸಿ, ಅದನ್ನು ಕೈವಶ ಮಾಡಿಕೊಳ್ಳುವ ಯುಕ್ತಿಗಳನ್ನು ಹಾಕಲಾರಂಭಿಸಿದನು. ದುರ್ಗದ ದರುಶನದಿಂದ ಸಮ್ರಾಟನಲ್ಲಿ ಸಂತೋಷವುಂಟಾಗಿದ್ದರೂ, ಸಂತೋಷದ ಬುಡದಲ್ಲಿಯೇ ದುಃಖವಿದೆಂಬದನ್ನು ಸೂಚಿಸುವಂತೆ ಅದನ್ನು ಹೇಗೆ ವಶ ಮಾಡಿಕೊಳ್ಳಬೇಕೆಂಬ ಚಿಂತೆಯು ಅವನಲ್ಲುಂಟಾಯಿತು.

ಬಳಿಕ ಅವನು ಆ ದುರ್ಗದ ಬಹಿರಂಗ ಪರೀಕ್ಷೆಯನ್ನೆಲ್ಲ ಮಾಡಿದನು. ಅಂತರಂಗದ ಪರೀಕ್ಷಣೆಗೆ ಯುಕ್ತಿಕೋವಿದರಾದ ಗುಪ್ತಚಾರರನ್ನು ನೇಮಿಸಿದನು. ಅವರು ಯುಕ್ತಿ-ಪ್ರಯುಕ್ತಿಗಳಿಂದಲೂ ವೇಷಾಂತರಗಳಿಂದಲೂ ದುರ್ಗಪ್ರವೇಶ ಮಾಡಿ, ದುರ್ಗದ ಭದ್ರತೆಯನ್ನೂ ಅಂತರ್ರಚನೆಯನ್ನೂ ತಿಳಿದು ಬಂದು ಸಮ್ರಾಟನಿಗೆ ಹೇಳಲು, ಆತನು ಸ್ತಂಭಿತನಾದನು!

## ೧೯ ಕಲ್ಪನಾಮಯ ಬಲೆಯಲ್ಲಿ ಸಿಕ್ಕ ಕೀರ್ತಿಸಿಂಹನು.

ಬೆಳಗುಮುಂಜಾವಿನ ಸಮಯವು; ತಾರಕೆಗಳು ನಿಸ್ತೇಜವಾಗುತಲಿವೆ. ಪೂರ್ವ ದಿಕ್ಕಿನ ಕೆಂಪು ಪ್ರಕಾಶವು ಗಗನಾಂಗಣವನ್ನು ಆಕ್ರಮಿಸಿ ಬಿಡುವಂತೆ, ಸರಸರನೆ ಏರುತ್ತಲಿದೆ. ಹಕ್ಕಿ-ಪಕ್ಕಿಗಳು ಕಿಲಿ-ಬಿಲಿ ಎಂಬ ಶಬ್ದದಿಂದ ಧರಿತ್ರಿಯನ್ನು ನಿನಾದಮಯವಾಗ ಮಾಡಿ, ನಿದ್ರಾಪರವಶರಾದವರನ್ನು ಎಚ್ಚರಗೊಳಿಸುತಲಿವೆ. ರಾತ್ರಿಯಲ್ಲಿ ಪೃಥ್ವಿಯನ್ನು ಆವರಿಸಿಕೊಂಡಿದ್ದ ಕಗ್ಗತ್ತಲೆಯು, ಮನದಲ್ಲಿ ಭಗವಾನ್ ಸೂರ್ಯನಾರಾಯಣನನ್ನು ಶಪಿಸುತ್ತ ಸಂದಿ-ಗೊಂದಿಗಳನ್ನು ಶೋಧಿಸ ಹತ್ತಿದೆ. ಇಂಥ ಸಮಯದಲ್ಲಿ ಕಿರುಮುಂಜಿಯ ದುರ್ಗದ ಬಹು ಎತ್ತರವಾದ ಒಂದು ಕೊತ್ತಳದ ಮೇಲೆ ಒಬ್ಬ ಪುರುಷನು ನಿಂತುಕೊಂಡಿದ್ದನು. ಅವನು ಭವ್ಯಪುರುಷನಾಗಿದ್ದನು. ಅವನ ಉನ್ನತವಾದ ಎದೆಯೂ ಉದ್ದವಾದ ತೋಳುಗಳೂ ಆತನ ಸಾಮರ್ಥ್ಯವನ್ನು ಪ್ರದರ್ಶಿಸುತ್ತಿದ್ದವು. ಅವನು ವೀರರಿಗುಚಿತವಾದ ಪೋಷಾಕನ್ನು ಧರಿಸಿದ್ದು, ಕೈಯಲ್ಲಿ ಬಲವಾದ ಖಡ್ಗವನ್ನು ಹಿಡಿದಿದ್ದನು. ಅವನು ಕೆಲಹೊತ್ತು ಮೂಕಭಾವದಿಂದ ಸುತ್ತಲೂ ನೋಡಿ, ತಲೆ ಅಲ್ಲಾಡಿಸುತ್ತ ಮನದಲ್ಲಿ ಏನೇನೋ ಒಟಗುಡತೊಡಗಿದನು. ಅವನ ಹಲ್ಲುಗಳು ತುಟಿಗಳನ್ನು ಆಘಾತಿಸುತ್ತಿದ್ದವು. ಕಣ್ಣುಗಳು ಅರುಣಪ್ರಕಾಶವನ್ನು ಅನುಕರಿಸುತ್ತಿದ್ದವು. ಬಹಳ ಹೇಳುವದೇನು? ಬರಬರುತ್ತ ಆ ಪುರುಷನು ಸಿಟ್ಟಿನಿಂದ ಹುಚ್ಚನಾದನು. ಅವನ ಮೈಯು ನಡುಗಹತ್ತಿತು. ಆ ಸಂತಾಪದ ಭರದಲ್ಲಿ ಅವನು ಸ್ಮೃತಿದಪ್ಪಿ ದೊಪ್ಪನೆ ಬಿದ್ದನು; ಆದರೆ ಅವನ ಆಯುಸ್ಸೂತ್ರವು ಇನ್ನೂ ಗಟ್ಟಿ ಇದ್ದದರಿಂದ ಕೊತ್ತಳದ ಅಡ್ಡಗೋಡೆಯು ಅವನನ್ನು ತಡೆದಿತು. ಇಲ್ಲದಿದ್ದರೆ ಅವನು ಬೆಟ್ಟದ ಕೆಳಗೆ ಉರುಳಿ, ಅವನ ಅಸ್ಥಿಗಳು ಕೂಡಾ ಸಿಗುವದು ದುಸ್ತರವಾಗುತ್ತಿತ್ತು!

ಈ ಮೇರೆಗೆ ಕೊತ್ತಳದ ಮೇಲೆ ನಿಂತ ಪುರುಷನು ಬೀಳಲು, ಕೊತ್ತಳದ ಸಮೀಪದಲ್ಲಿದ್ದ ಸೇವಕರು ಧಾವಿಸಿ ಬಂದರು. ಅವರು ಆ ಪುರುಷನನ್ನು ಹಿಡಿದೆತ್ತಿ ಶೈತ್ಯೋಪಚಾರಗಳಿಂದ ಉಪಚರಿಸಿದರು. ಮುಂದೆ ಕೆಲ ಹೊತ್ತಿನ ಮೇಲೆ ಕಣ್ದೆರೆದು ಆತನು:—"ರಾಮಸಿಂಗ, ಇಷ್ಟೇಕೆ ಗಾಬರಿಯಾಗಿರುವಿ?" ಎಂದು ಕೇಳಿದನು. ಆಗ ರಾಮಸಿಂಗನು ನಡೆದ ಸಂಗತಿಯನ್ನೆಲ್ಲ ಹೇಳಿದನು. ಬಳಿಕ ಆ ಪುರುಷನು ಪುನಃ ಅವಡುಗಚ್ಚುತ್ತ: "ರಾಮಸಿಂಗ, ಆ ಕರ್ನಾಟಕ ಸಮ್ರಾಟನ ಈ ಉದ್ಧಟತನವನ್ನು ನೋಡಿದೆಯಾ? ಇವನು ನನ್ನನ್ನು ದಂಡಿಸಲು ಬಂದಿರುವನಂತೆ! ನಾನು ಅಪ್ಸರದ ಬಹು ಚಲುವೆಯಾದ ಹುಡುಗೆಯನ್ನು ಮದುವೆಯಾಗುವೆನೆಂದು ಇವನಿಗೆ ಹೃದ್ರೋಗ ಹತ್ತಿರುವದಂತೆ. ಆ ತಲೆತಿರುಕ

ವೃದ್ಧ ಲಕ್ಷ್ಮಣಸಿಗೆ ಇವನು ಪದ್ಮೆಯನ್ನು ಬಿಡಿಸುವೆನೆಂದು ಅಭಯ ಕೊಟ್ಟಿರುವನಂತೆ! ಕೊಡಲಿ, ಇವನ ಅಭಯದಾನದಲ್ಲಿ ಎಷ್ಟು ಬೆಲೆಯಿರುವದೆಂಬದನ್ನು ನೋಡಿ ಬಿಡುತ್ತೇನೆ. ಪಾಕ್ಷಿಣಾತ್ಯರ ಸ್ವಭಾವವೇ ಹೀಗೆ. ನಾನು ಇಂದು ಪದ್ಮೆಯೊಡನೆ ಮದುವೆಯಾಗಿ ಬಿಟ್ಟರೆ, ಈತನ ಈ ಅಪಾರ ಸೈನ್ಯವು ಆ ಬಳಿಕ ಏನು ಮಾಡುವದು? ಬೇಕಾದರೆ ನನ್ನಿಂದ ಪಲುಭೋಗಿತಳಾದ ಪದ್ಮೆಯನ್ನು ಒಯ್ದು ಆ ಮುದಿಹದ್ದಿಗೆ ಒಪ್ಪಿಸಿ, ಸಮ್ರಾಟನು ತನ್ನ ಪೌರುಷವನ್ನು ಕೊಚ್ಚಿಕೊಳ್ಳಲಿ! ಇಷ್ಟು ದಿವಸ ನಾನು ಪದ್ಮೆಯ ಪಾಣಿಗ್ರಹಣವನ್ನು ಬಿಡತಕ್ಕದ್ದಿದ್ದಿಲ್ಲ. ಆಗಲಿ; ಶತ್ರುಗಳು ಎದೆಯ ಮೇಲಿದ್ದಾಗಲೇ ಆಕೆಯ ಪಾಣಿಗ್ರಹಣ ಮಾಡಿ, ಅವರ ಮೂಗು ಕೊಯ್ದು ಕೈಯಲ್ಲಿ ಕನ್ನಡಿ ಕೊಟ್ಟಂತೆ ಮಾಡುವೆನು. ಯಾಕೆ, ರಾಮಸಿಂಗ, ಮಾಡಿದವನಿಗೆ ಮಾಡಿಯೇ ತೋರಿಸಬೇಕಲ್ಲವೆ? ಈ ಉದ್ದಾಮನು ಈ ಕೀರ್ತಿಸಿಂಹನ ಪರಾಕ್ರಮದ ಅನುಭವವನ್ನು ಹೊಂದಲಿ, ಎಂದು ನುಡಿಯುತ್ತಿರಲು, ಕೋಟೆಯ ಪಶ್ಚಿಮ ನಿಟ್ಟಿನಲ್ಲಿ ಭಯಂಕರವಾದ ಸಪ್ಪಳವಾಯಿತು. ಆ ಸಪ್ಪಳಕ್ಕೆ ಕೀರ್ತಿಸಿಂಹನ ಎದೆಯು ಧಸ್ಸೆಂದಿತು! ಕೆಲಸವು ಘಾತವಾಯಿತೆಂದು ಅವನು ಭಾವಿಸಿದನು. ಕೂಡಲೆ ಅವನು ಸಪ್ಪಳವಾದ ಸ್ಥಳದ ಕಡೆಗೆ ಓಡತೊಡಗಿದನು. ಪೂರ್ವದಿಕ್ಕಿನಲ್ಲಿ ಪಹರೆ ಮಾಡುತ್ತಿದ್ದ ಕಾವಲುಗಾರರೂ ಅತ್ತ ಓಡಹತ್ತಿದರು. ಸಮ್ರಾಟನು ಕೋಟೆಯ ಬುಡಕ್ಕೆ ಸುರಂಗ ಹಾಕಿರಬೇಕೆಂಬ ಕಲ್ಪನೆಯು ಕೀರ್ತಿಸಿಂಹನಲ್ಲಿ ಬಂದಿತು. ಅವನು ಅಲ್ಲಿ ಹೋಗಿ ನೋಡಲು, ಅವನ ಆ ಕಲ್ಪನೆಯು ನಿಜವಾಗಿತ್ತು.

ಸುರಂಗದ ಆಘಾತದಿಂದ ಕೋಟೆಯ ಗೋಡೆಯ ಒಂದೆರಡು ದೊಡ್ಡ ಕಲ್ಲುಗಳು ಮಾತ್ರ ಕಳಚಿಬಿದ್ದಿದ್ದವು. ಇಷ್ಟರ ಹೊರತು ಕೋಟೆಯ ಭದ್ರತೆಗೆ ಭಂಗವುಂಟಾಗಿದ್ದಿಲ್ಲ. ಶತ್ರುಗಳು ಬೆಟ್ಟದಲ್ಲಿ ಕೊರೆದು ಸುರಂಗ ತುಂಬುವವರೆಗೆ ಅಜಾಗರೂಕರಾಗಿದ್ದ ತನ್ನ ಕಾವಲುಗಾರರಿಗೆ ಕೀರ್ತಿಸಿಂಹನು ಬಾಯಿಗೆ ಬಂದಂತೆ ಬೈಯ್ದು, ಅಲ್ಲಿ ದಕ್ಷರಾದ ಹೊಸ ಕಾವಲುಗಾರರನ್ನು ನೇಮಿಸಿದನು. ಬಳಿಕ ಅವನು ಎಲ್ಲ ಕೊತ್ತಳಗಳ ರಕ್ಷಕರಿಗೂ ಚನ್ನಾಗಿ ಕೆಲಸ ಮಾಡಲಿಕ್ಕೆ ಅಪ್ಪಣೆ ಮಾಡಿ, ತಾನು ಅರಮನೆಯನ್ನು ಪ್ರವೇಶ ಮಾಡಿದನು. ಬಳಿಕ ಅವನು ಒಂದು ಸುಂದರವಾದ ದಿವಾಣಖಾನೆಯಲ್ಲಿ ಕುಳಿತು, ತನ್ನ ಸ್ನೇಹಿತನಾದ ರಣಛೋಡನೆಂಬ ಒಬ್ಬ ಸಂಸ್ಥಾನಿಕನನ್ನು ಕರೆಯಿಸಿಕೊಂಡು, ಅವನೊಡನೆ ಈ ಪ್ರಕಾರ ಯೋಚಿಸತೊಡಗಿದನು:

ಕೀರ್ತಿಸಿಂಹ: -- ಮಿತ್ರನೇ, ಭೂಪಡನ ಸಾಹಸವನ್ನು ನೋಡಿದೆಯಾ? ನಮ್ಮ ದುರ್ಗದ ಪಶ್ಚಿಮಭಾಗವನ್ನು ಸುರಂಗದಿಂದ ಹಾರಿಸಿ, ಒಳಗೆ ಪ್ರವೇಶ

ಮಾಡಬೇಕೆಂದು ಅವನ ಯತ್ನವಿರುತ್ತದೆ. ಆದರೆ ಅವನಪ್ಪನಿಗೂ ನಮ್ಮ ದುರ್ಗವು ಹಣಿಯುವ ಹಾಗಿಲ್ಲ. ಈಗ ಹಾಕಿದ ಸುರಂಗದಿಂದ ಬರಿಯ ಎರಡು ಕಲ್ಲುಗಳುಮಾತ್ರ ಅದರಿ ಬಿದ್ದಿವೆ. ಸುರಂಗ ಹಾರಿದಾಗ ಆದ ಸಪ್ಪಳಕ್ಕೆ ನಾನು ಬೆದರಿಬಿದ್ದೆನು. ಪೂರ್ಣ ಘಾತವಾಯಿತೆಂದು ತಿಳಿದಿದ್ದೆನು; ಆದರೆ ನಮ್ಮ ಸುದೈವದಿಂದ ಅಂಥ ಪ್ರಸಂಗವು ಒದಗಲಿಲ್ಲ. ಕಾವಲುಗಾರರಿಗೆ ಚನ್ನಾಗಿ ಸಿಟ್ಟು ಮಾಡಿ ಆ ಸ್ಥಳದಲ್ಲಿ ಹೊಸ ಕಾವಲುಗಾರರನ್ನು ನೇಮಿಸಿ ಬಂದಿದ್ದೇನೆ; ಆದರೆ ಇನ್ನು ಮುಂದೆ ನಾವು ಹೀಗೆಯೇ ಸುಮ್ಮನೆ ಕುಳಿತರೆ ಪ್ರಯೋಜನವಿಲ್ಲ. ನಮ್ಮ ಅಜಾಗರೂಕತೆಯು ಭೂವಡನಿಗೆ ಸಹಜವಾಗಿ ಫಲದ್ರೂಪವಾಗಿ ಪರಿಣಮಿಸುವದು. ಇದಕ್ಕಾಗಿ ಮುಂದೆ ನಾವು ಏನು ಮಾಡಬೇಕು?

ರಣಭೋಡ:-- ಕೀರ್ತಿಸಿಂಹಾ, ಮಾಡುವದೇನು? ಯುದ್ಧವನ್ನೇ ಪ್ರಾರಂಭಿಸಬೇಕು. ಶತ್ರುಬಲವು ನಮ್ಮ ಬಲಕ್ಕಿಂತಲೂ ಅಧಿಕವಿರುವದೇನೋ ನಿಜ; ಆದರೆ ಅವನಿಗೆ ದುರ್ಗದ ಆಶ್ರಯವಿಲ್ಲ; ನಮಗೆ ದುರ್ಭೇದ್ಯವಾದ ಕೋಟೆಯಿರುತ್ತದೆ. ಅವರು ಒಂದು ವರುಷದವರೆಗೆ ಹೀಗೆ ಮುತ್ತಿದರೂ ಕೋಟೆಯು ಅವರಿಗೆ ಕೈವಶವಾಗುವ ಹಾಗಿಲ್ಲ. ಇಂಥ ಸ್ಥಿತಿಯಲ್ಲಿ ನಾವು ಅಂಜುವದೇಕೆ? ಹಾಗು ಇನ್ನು ಸ್ವಲ್ಪ ದಿವಸಗಳಲ್ಲಿ ಆ ನಮ್ಮ ಮೂವರು ಸಂಸ್ಥಾನಿಕರು ತಮ್ಮ ತಮ್ಮ ಸೈನ್ಯದೊಡನೆ ನಮ್ಮನ್ನು ಕೂಡಿಕೊಳ್ಳುವರು. ನಾನು ನನ್ನ ಎಲ್ಲ ಸ್ನೇಹಿತ ರಾಜರುಗಳಿಗೂ ಪತ್ರಗಳನ್ನು ಕಳಿಸಿದ್ದೇನೆ; ಗುರ್ಜರ ದೇಶದ ಮಾನವನ್ನು ಕಾಯುವದಕ್ಕೋಸ್ಕರ ಅವರೆಲ್ಲರೂ ಬಂದೇತೀರುವರು. ಆ ಎಲ್ಲ ಸಂಸ್ಥಾನಿಕರು ಸಹಾಯಕರಾದರೆ ಭೂವಡನು ಓಡುಕಿ ಹೋಗುವದೇ ಕಠಿಣವಾಗುತ್ತದೆಂದು ತಿಳಿ. ಈಗ ನೀನು ವಿಶೇಷ ಗೊಂದಲಕ್ಕೆ ಹೋಗಬೇಡ. ದುರ್ಗದಲ್ಲಿ ಅನ್ನ-ನೀರುಗಳ ಸಂಗ್ರಹವು ವಿಪುಲವಾಗಿರುತ್ತದೆ; ಆದ್ದರಿಂದ ಭೂವಡನಿಗೆ ಮುತ್ತಿಷ್ಟು ತೊಂದರೆಯುಂಟಾಗಬೇಕಾದರೆ, ಕಾಲ ವಿಲಂಬವನ್ನೇ ಮಾಡಬೇಕು. ಅವನಾಗಿಯೇ ನಮ್ಮ ಮೇಲೆ ಏರಿ ಬಂದರೆ, ಅದಕ್ಕೆ ಪ್ರತೀಕಾರವನ್ನಷ್ಟು ಮಾಡೋಣ.

ಕೀರ್ತಿಸಿಂಹ:- ಮಿತ್ರನೇ, ನೀನು ಹೇಳಿದ್ದೆಲ್ಲ ನಿಜ; ಆದರೆ ಶತ್ರುವ ಬಲಿಷ್ಠನಿದ್ದದರಿಂದ, ನಾವು ಕಾಲವಿಲಂಬ ಮಾಡುವದು ನಮಗೇ ಘಾತುಕವಾಗುತ್ತದೆ ಯಾಕಂದರೆ ಶತ್ರುಗಳಿಗೆ ಭೇದೋಪಾಯವನ್ನು ಕಲ್ಪಿಸಲಿಕ್ಕೆ ಅನುವು ದೊರೆಯುತ್ತದೆ; ಆದ್ದರಿಂದ ಹೀಗೆ ಅವಕಾಶವನ್ನು ಕೊಡುವದು ಯೋಗ್ಯವಲ್ಲ. ನಾಳೆಯ ದಿನ ಮೊದಲು ನಾನು ಪದ್ಮೆಯ ಪಾಣಿಗ್ರಹಣವನ್ನು ಮಾಡಿಕೊಳ್ಳುತ್ತೇನೆ. ಯಾಕಂದರೆ ಕನ್ಯಾವಸ್ಥೆಯಲ್ಲಿದ್ದ ಪದ್ಮೆಯನ್ನು ಹರಣ ಮಾಡುವದೇ ಸಮ್ರಾಟನ ಉದ್ದೇಶಗಳಲ್ಲಿ ಮುಖ್ಯವಾಗಿದೆ; ನಾನು ಪಾಣಿಗ್ರಹಣವನ್ನೊಂದು

ನೆರವೇರಿಸಿದರೆ, ಅವನ ಅರ್ಧ ಕುದಿಯು ಕಡಿಮೆಯಾಗುವದು. ಬಳಿಕ ಮರು ದಿನವೇ ಯುದ್ಧಕ್ಕೆ ಪ್ರಾರಂಭಿಸುವದು ನಮಗೆ ಕ್ಷೇಮಕರವಾಗಿದೆ; ನಮ್ಮ ದಂಡಾಳುಗಳು ಶತ್ರುಗಳ ಮೇಲೆ ಮದ್ದು-ಗುಂಡುಗಳ ಮಳೆಗರೆದು, ದಿನಾಲು ಅವರನ್ನು ಯಮಸದನಕ್ಕೆ ಕಳಿಸ ಹತ್ತಿದರೆ ಸಮ್ರಾಟನು ತಾನೇ ಸ್ಥಳ ಬಿಡುವನು. ಅಷ್ಟರಲ್ಲಿ ನಮ್ಮ ಸ್ನೇಹಿತರಾಜರಿಂದ ಸಹಾಯಕ ಸೈನ್ಯವು ಬಂದರೆ ಶತ್ರುಗಳನ್ನು ಬೆನ್ನಟ್ಟಿ ಅವರ ನಿರ್ಮೂಲನ ಮಾಡಿ ಬಿಡೋಣ!

ವಿಷಯ ಲಂಪಟನಾದ ಕೀರ್ತಿಸಿಂಹನು ಸಮ್ರಾಟನ ಬಲವನ್ನರಿಯದೆ ಈ ರೀತಿ ತಾನೇ ತನ್ನ ಪೌರುಷವನ್ನು ಕೊಚ್ಚಿಕೊಳ್ಳಲು, ರಣಭೋಡನು ಅವನ ಮಾತಿಗೆ ಸಮ್ಮತಿಸಿದನು. ರಣಭೋಡನು ಒಬ್ಬ ಸಂಸ್ಥಾನಿಕನಾಗಿದ್ದು, ಪದ್ಮೆಯ ಆಶೆಯಿಂದ ಕೀರ್ತಿಸಿಂಹನ ಬೆನ್ನು ಕಾಯುತ್ತಿದ್ದನು. ಸಮಯವು ದೊರೆತರೆ ಪದ್ಮೆಯನ್ನು ಹರಣ ಮಾಡಬೇಕೆಂದು ಅವನು ಹೊಂಚು ಹಾಕಿದ್ದನು. ಮನಸ್ಸಿನ ಈ ಅಭಿಪ್ರಾಯವನ್ನು ಅವನಿದುವರೆಗೂ ಯಾರಿಗೂ ತಿಳಿಯಗೊಟ್ಟಿದ್ದಿಲ್ಲ. ಮೇಲೆ ಮೇಲೆ ಕೀರ್ತಿಸಿಂಹನಿಗೆ ಒಳ್ಳೇ ಸ್ನೇಹಿತನಾಗಿ ಆಪ್ತಾಲೋಚನೆಗಳನ್ನು ಹೇಳುತ್ತಿದ್ದನು; ಆದರೆ ಅವನಿಗೆ ಪದ್ಮೆಯ ಅಪಹರಣಕ್ಕೆ ಸಂಧಿಯು ಸಿಗದ್ದರಿಂದ ಮನಸ್ಸಿನಲ್ಲಿ ಉದ್ವಿಗ್ನನಾಗಿದ್ದನು. ಪರಿಸ್ಥಿತಿಯು ಹೀಗಿರುವಾಗ ಸಮ್ರಾಟನು ಮುತ್ತಿಗೆ ಹಾಕಿದ್ದರಿಂದ ಪದ್ಮೆಯ ಸಲುವಾಗಿ ಅವನು ನಿರಾಶನಾಗಬೇಕಾಯಿತು. ಆದರೂ ಅವನು ಕಾಲವಿಲಂಬ ಮಾಡಿ ಶತ್ರುನಿಗ್ರಹದಲ್ಲಿ ತೊಡಗಿದ ಕೀರ್ತಿಸಿಂಹನನ್ನು ವಂಚಿಸಿದ ಪದ್ಮೆಯನ್ನು ಅಪಹರಿಸುವ ಸಾಹಸದಲ್ಲಿದ್ದನು; ಆದರೆ ಈ ದಿನ ಕೀರ್ತಿಸಿಂಹನು ಪದ್ಮೆಯ ಪಾಣಿಗ್ರಹಣ ಮಾಡುವ ನಿರ್ಧಾರವನ್ನು ತಿಳಿಸಲು ಉಪಾಯವಿಲ್ಲದೆ ಸುಮ್ಮನಾದನು.

ಪ್ರಿಯ ವಾಚಕರೇ, ವಿಷಯಲಂಪಟಿಗಳು ಯಾವ ದ್ರೋಹಕ್ಕೂ ಹೆದರುವದಿಲ್ಲ. ಮಿತ್ರದ್ರೋಹವನ್ನಾಗಲಿ ಬಂಧುದ್ರೋಹವನ್ನಾಗಲಿ ಅವರು ಲಕ್ಷಿಸುವದಿಲ್ಲ. ಅದರಂತೆ ರಣಭೋಡನ ಸ್ಥಿತಿಯೂ ಆಗಿತ್ತು. ಪದ್ಮೆಯು ತನಗೆ ದೊರೆಯಬೇಕಾದರೆ ತಾನು ಏನು ಮಾಡಬೇಕೆಂಬದನ್ನು ಯೋಚಿಸಲಾರಂಭಿಸಿದನು. ಹೀಗೆ ರಣಭೋಡನು ಒಂದು ವಸ್ತುವಿನ ವಿಷಯವಾಗಿ ವಿಚಾರವನ್ನು ಮಾಡಹತ್ತಲು ಅದೇ ವಸ್ತುವಿನ ಸಲುವಾಗಿ ವಿಶ್ವಪ್ರಯತ್ನ ಮಾಡಿದ ಕೀರ್ತಿಸಿಂಹನು ನಾಳಿನ ದಿವಸ ಪಾಣಿಗ್ರಹಣ ಮಹೋತ್ಸವವನ್ನು ಹೇಗೆ ನೆರವೇರಿಸಬೇಕು; ತಾನು ಯಾವ ಯಾವ ಉಡುಪುಗಳನ್ನು ಧರಿಸಬೇಕು; ಇಂದಿನವರೆಗೆ ಕಾರಾಗೃಹದಲ್ಲಿದ್ದ ಪದ್ಮೆಯು ಈಗಾದರೂ ತನ್ನನ್ನು ಪ್ರೀತಿಸಬಹುದಲ್ಲವೇ? ಎಂಬ ವಿಚಾರಗಳನ್ನು ಮಾಡತೊಡಗಿದನು.

ಈ ಮೇರೆಗೆ ಈ ಉಭಯ ಮಹನೀಯರು ಪದ್ಮೆಯ ಅಂಗಸುಖಕ್ಕಾಗಿ ವಿವಿಧ ಯೋಚನೆಗಳಲ್ಲಿ ಮುಳುಗಿರಲು, ಇತ್ತ ಕಾರಾಗೃಹದಲ್ಲಿದ್ದ ಪದ್ಮೆಯು ದಿನದಿನಕ್ಕೆ ಕೊರಗುತ್ತ ನಡೆದಿದ್ದಳು; ಅವಳು ನಿಮಿತ್ತ ಮಾತ್ರಕ್ಕೆ ಕಾರಾಗೃಹದ ವಾಸಿನಿಯಾಗಿದ್ದು, ರಾಜ ವೈಭವವು ಅವಳಿಗೆ ಬೇಕಾದಷ್ಟಿತ್ತು. ಅವಳ ವಾಸಕ್ಕೆ ಸುಂದರವಾದ ಮಂದಿರವಿತ್ತು. ಅಲ್ಲಿ ಹಲವು ವಿಧಗಳಾದ ರಾಜಭೋಗ್ಯ ಪದಾರ್ಥಗಳಿದ್ದವು. ಸೇವೆಗೋಸ್ಕರ ದಾಸಿಯರು ಕೈಕಟ್ಟಿಕೊಂಡು ನಿಂತಿರುತ್ತಿದ್ದರು. ಹೀಗಿದ್ದರೂ ಪದ್ಮೆಯು ಆ ರಾಜಭೋಗ್ಯ ಪದಾರ್ಥಗಳನ್ನು ಕಣ್ಣೆತ್ತಿ ನೋಡುತ್ತಿರಲಿಲ್ಲ. ಪ್ರತಿನಿತ್ಯ ತಪ್ಪದೆ ತನ್ನ ಯೋಗಕ್ಷೇಮಕ್ಕೆ ಬರುವ ಮೂರ್ಖನಾದ ಕೀರ್ತಿಸಿಂಹನನ್ನು ಕಣ್ಣೆತ್ತಿ ನೋಡುತ್ತಿರಲಿಲ್ಲ. ಜೀವ ಧಾರಣದ ಮಟ್ಟಿಗೆ ಆಹಾರವನ್ನು ಸ್ವೀಕರಿಸಿ ತನ್ನ ಬಿಡುಗಡೆಯು ಎಂದಾಗುವದೋ ಎಂದು ಚಿಂತಿಸುತ್ತಿದ್ದಳು. ಅವಳು ಅತ್ಯಂತ ಸತ್ವಸ್ಥಳಾಗಿದ್ದಳು. ಕೀರ್ತಿಸಿಂಹನಂಥ ವಿಷಯ ಲಂಪಟನಿಂದ ಪಾಣಿಗ್ರಹಣ ಮಾಡುವದು ಅವಳಿಗೆ ವಿಷತುಲ್ಯವಾಗಿ ಭಾಸವಾಗುತ್ತಿತ್ತು. ಒಂದು ವೇಳೆ ದೈವದುರ್ವಿಪಾಕದಿಂದ ಅಂಥ ಪ್ರಸಂಗವೇ ಒಂದಲ್ಲಿ ಪ್ರಾಣತ್ಯಾಗವೇ ಪರಮ ಔಷಧವೆಂದು ಅವಳು ನಂಬಿಕೊಂಡಿದ್ದಳು.

ಪದ್ಮೆಯು ಹೀಗೆ ಅಗಾಧವಾದ ಚಿಂತೆಯಲ್ಲಿ ಮುಳಗಿ ಪ್ರತಿದಿನದಲ್ಲೂ ಕೊರಗಿ ಕೊರಗಿ ಶುಷ್ಕಳಾಗಿರಲು, ಒಂದುದಿನ ಕೀರ್ತಿಸಿಂಹನು ಕಾರಾಗೃಹದಲ್ಲಿ ಪ್ರವೇಶ ಮಾಡಿದಾಗ ಪದ್ಮೆಯನ್ನು ರಮಿಸಹೋಗಿ ಅವಳಿಂದ ಮುಖಭಂಗಿತನಾದರೂ ನಾಳೆಯ ದಿನ ನಿನ್ನ ಪಾಣಿಗ್ರಹಣ ಮಾಡಿ ನಿನ್ನ ಕನ್ಯಾ ಅವಸ್ಥೆಯನ್ನು ನಾಶಗೊಳಿಸುವೆನು, ಎಂದು ಖಂಡಿತವಾಗಿ ಹೇಳಿ ಹೋದನು. ಅವನ ಆ ಮಾತುಗಳಿಂದ ಪದ್ಮೆಯ ಮೇಲೆ ವಜ್ರಾಘಾತವಾದಂತಾಯಿತು. ಅವಳು ತೀರಾ ಹೈರಾಣವಾದಳು. ಕೂಡಲೆ ಅವಳು ದೇಹದ ಮೇಲೆ ಉದಾರಳಾಗಿ ವಿಷಪ್ರಾಶನಕ್ಕೆ ಸಿದ್ಧಳಾದಳು. ಇನ್ನು ಮುಂದೆ ಅವಳು ವಿಷದ ಪಾತ್ರೆಯನ್ನು ಬಾಯಿಸಮೀಪಕ್ಕೆ ಒಯ್ಯಬೇಕೆನ್ನುತ್ತಿರಲು, ಹಿಂದಿನಿಂದ ಯಾರೋ ಆಕೆಯ ಕೈಯನ್ನು ಹಿಡಿದರು. ಅವಳು ಬೆಟ್ಟಬಿದ್ದು ಹಿಂದಿರುಗಿ ನೋಡಲು ತನ್ನ ಪೂಜ್ಯ ಗುರುವರ್ಯರು!! ಪದ್ಮೆಗೆ ತುಂಬಾ ಸಂತೋಷವಾಯಿತು. ಅವಳು ಕೈಯೊಳಗಿನ ಪಾತ್ರೆಯನ್ನು ಬಿಸುಟಿ ನಿರಂಜನ ಯೋಗಿವರ್ಯರ ಚರಣ ಕಮಲಗಳನ್ನು ಗಟ್ಟಿಯಾಗಿ ಹಿಡಿದುಕೊಂಡಳು. ಆಗ ಯೋಗಿಗಳು ಆಕೆಯನ್ನು ಹಿಡಿದೆಬ್ಬಿಸಿ:-"ತಂಗೀ-ಪದ್ಮೆ, ಹೀಗೇಕೆ ಪ್ರಾಣತ್ಯಾಗಕ್ಕೆ ಉದ್ಯುಕ್ತಳಾಗಿದ್ದೆ" ಎಂದು ಪ್ರಶ್ನೆ ಮಾಡಿದರು. ಪದ್ಮೆಯ ಕಂಠವು ಬಿಗಿದು ಬಂದಿತು. ಅವಳ ಬಾಯಿಂದ ಮಾತುಗಳು ಹೊರಡದಾದವು; ಕಣ್ಣಲ್ಲಿ ಅಶ್ರುಗಳು ಧಾರೆಗಟ್ಟಿ ಸುರಿಯಲಾರಂಭಿಸಿದವು;- ತನ್ನ ಪೂಜ್ಯ ಗುರು

ಗಳನ್ನು ನೋಡುತ್ತ ಮೌನವಾಗಿ ನಿಂತಳು. ಬಳಿಕ ಯೋಗಿವರ್ಯರು ಶೋಕ ಮಗ್ನ ಪದ್ಮೆಯನ್ನು ಸಂತೈಸಿ:--"ತಂಗೀ, ಇಂಥ ಆಸುರೀ ಕೆಲಸಕ್ಕೆ ಹೋಗ ಬೇಡ; ನಿನ್ನ ತಂದೆಯು ವಿಶ್ವಾಸದಿಂದ ನಿನ್ನನ್ನು ನನ್ನ ಬಳಿಯಲ್ಲಿಟ್ಟಿದ್ದನು; ನೀನು ಅಜ್ಞಾನದಿಂದ ನಮ್ಮ ಆಶ್ರಮವನ್ನು ತ್ಯಜಿಸಿ ಇಷ್ಟು ಕಷ್ಟವನ್ನು ಅನುಭವಿ ಸಿದೆ; ಆದರೂ ಭಗವಂತನು ನಿನ್ನ ಮಾನವನ್ನು ಇದು ವರೆಗೆ ಕಾಯ್ದಿರುವನು. ಮುಂದ್ಕಾದರೂ ಕಾಯುವನು. ಸಂಶಯಪಡಬೇಡ. ನೀನು ಸ್ವಲ್ಪ ದಿನಗಳಲ್ಲಿ ಸಾಮ್ರಾಜ್ಯ ಸುಖವನ್ನು ಅನುಭವಿಸುವೆ" ಎಂದು ನುಡಿದು ಕೂಡಲೆ ಅದೃಶ್ಯರಾ ದರು. ಪದ್ಮೆಗೆ ಆಶ್ಚರ್ಯವಾಯಿತು. ಅವಳು ಒಮ್ಮೆಂದೊಮ್ಮೆ ಯೋಗಿಗಳು ಅದೃಶ್ಯವಾದದ್ದಕ್ಕೆ ಕಿಂಚಿತ್ ವಿಷಾದಪಟ್ಟರೂ ಅವರು ತನಗೆ ಹೇಳಿದ ಸಂಗತಿ ಯಿಂದ ಆಕೆಯು ಪರಮಾನಂದಪಟ್ಟಳು; ಆದರೆ ಅವಳಿಗೆ ಸಾಮ್ರಾಜ್ಯ ಸುಖವು ಹೀಗೆ ಸಿಗುವದೆಂಬದು ತಿಳಿಯಲಿಲ್ಲ. ಅವಳು ಆ ವಿಷಯದಲ್ಲಿ ಯೋಚಿಸಿದರೂ ಬಗೆ ಹರಿಯಲಿಲ್ಲ. ಬಳಿಕ ಅವಳು ಯೋಗಿಗಳ ಅಗಾಧ ಸಾಮರ್ಥ್ಯದಲ್ಲಿ ವಿಶ್ವಾಸವನ್ನಿಟ್ಟು ಮನಸ್ಸನ್ನು ಸಮಾಧಾನಪಡಿಸಿಕೊಂಡಳು.

ಈ ರೀತಿ ವಿಮಲೆಯು ಸಮಾಧಾನ ಹೊಂದಿ ಉಲ್ಲಸಿತ ಚಿತ್ತಳಾಗಿರಲು, ತಾನು ಮುಂಜಾವಿನಲ್ಲಿ ಪದ್ಮೆಯ ಮನಸ್ಸನ್ನು ನೋಯಿಸಿ ಬಂದದ್ದರಿಂದ ಈಗ ಅವಳು ಏನು ಮಾಡುತ್ತಿರುವಳೋ ನೋಡಬೇಕೆಂದು ಕೀರ್ತಿಸಿಂಹನು ಸಾಯಂ ಕಾಲದಲ್ಲಿ ಆಕೆಯ ಮಂದಿರಕ್ಕೆ ಬಂದನು ಮಂದಿರದಲ್ಲಿ ಕಾಲಿಟ್ಟಕೂಡಲೆ ಅವ ನಿಗೆ ಎಲ್ಲವೂ ವಿಚಿತ್ರವೆನಿಸಿತು. ದಿನಾಲು ಚಿಂತೆಯಿಂದ ಗ್ರಸ್ತಳಾಗಿ ಮಲಗಿಕೊಂ ಡಿರುತ್ತಿದ್ದ ಪದ್ಮೆಯು, ಈ ದಿವಸ ಎದ್ದು ಕುಳಿತುಕೊಂಡಿದ್ದಳು. ಇಷ್ಟೇ ಅಲ್ಲ; ಅವಳು ಕಿಡಕಿಯಲ್ಲಿ ಕುಳಿತು ದುರ್ಗದ ಸೌಂದರ್ಯವನ್ನು ನಿರೀಕ್ಷಿಸುತ್ತಿದ್ದಳು. ಅವಳ ಮುಖವನ್ನು ಪ್ರಫುಲ್ಲಿತವಾದ ಕಳೆಯು ಅಲಂಕರಿಸುತ್ತು. ಒಣಗುವ ಎಳೆಯ ಸಸಿಯು ಮಳೆಯಾಗಲು ಚೇತರಿಸಿಕೊಂಡು ಸುಮನೋಹರವಾಗಿ ತೋರುವಂತೆ ಪದ್ಮೆಯು ಒಪ್ಪುತ್ತಿದ್ದಳು. ಆಕೆಯ ಸರ್ವಾಂಗದಲ್ಲಿ ನವಜೀವನ ವುಂಟಾದಂತೆ ತೋರುತ್ತಿತ್ತು. ಮನುಷ್ಯನಿಗೆ ಚಿಂತೆಯೇ ಮುಪ್ಪು; ಸಂತೋ ಷವೇ ಯೌವನವಾದದ್ದರಿಂದ, ಸಂತೋಷವನ್ನು ಹೊಂದಿದ ಆ ಪದ್ಮೆಯ ರೂಪಾ ತಿಶಯವನ್ನು ವರ್ಣಿಸುವದು ಅಶಕ್ಯವಾಗಿತ್ತು; ಆಕೆಯ ಶರೀರವು ಎಷ್ಟು ಕೃಶ ವಾಗಿದ್ದರೂ ಅದೆಲ್ಲ ಆ ನೂತನ ಕಳೆಯಲ್ಲಿ ಮುಚ್ಚಿಹೋಗಿತ್ತು. ಕೀರ್ತಿ ಸಿಂಹನು ಇಂದಿನವರೆಗೆ ಪದ್ಮೆಯ ಇಂಥ ಅಲೌಕಿಕಸೌಂದರ್ಯವನ್ನು ನಿರೀಕ್ಷಿಸಿ ದ್ದಿಲ್ಲ. ಆದ್ದರಿಂದ ಅವನು ಬೆರಗಾಗಿ ನಿಂತನು. ಇವಳು ಪದ್ಮೆಯು ಅಹುದೋ- ಅಲ್ಲವೋ ಎಂಬ ಸಂಶಯವು ಕೂಡಾ ಅವನಲ್ಲಿ ಒಂದುಹೋಯಿತು. ಉತ್ತರ

ಕ್ಷಣದಲ್ಲಿ ಅವನು ಈಕೆಯು ನಿಜವಾಗಿ ಪದ್ಮೆಯೇ ಆಗಿರುವಳೆಂದು ನಿಶ್ಚಯಿಸಿ ಈಕೆಗೆ ಇಷ್ಟು ಸಂತೋಷವು ಯಾತರಿಂದ ಉಂಟಾಗಿರಬಹುದೆಂದು ಯೋಚಿಸ ಲಾರಂಭಿಸಿದನು; ಮತ್ತು ತಾನು ಒಳಗೆ ಹೋದರೆ ಈಕೆಯ ಆನಂದಕ್ಕೆ ಭಂಗ ವುಂಟಾದೀತೆಂದು ಹಾಗೇ ಹಿಂದಿರುಗಿ ಅಂತಃಪುರಕ್ಕೆ ಬಂದನು.

ಕಾಮಿಗಳು ಅನ್ಯ ಸಂದರಿಯರ ಅಂಗ ವಿನ್ಯಾಸಗಳು ತಮ್ಮ ಸಲುವಾ ಗಿಯೇ ಎಂದು ಹಚ್ಚಿಕೊಂಡು, ಮನಃಕಲ್ಪಿತ ಸುಖವನ್ನು ಅನುಭವಿಸುವರು; ಆದರೆ ಕಾಮಿಗಳಲ್ಲಿ ಅತ್ಯಂತ ಅಧಮನಾದ ಕೀರ್ತಿಸಿಂಹನು ಪದ್ಮೆಯ ಸಂತೋ ಷವು ತನ್ನ ಸಲುವಾಗಿಯೇ ಎಂದು ಭಾವಿಸಿದ್ದರಲ್ಲಿ ಆಶ್ಚರ್ಯವಿಲ್ಲ. ತಾನು ಪದ್ಮೆಯ ಎದುರಿಗೆ ನಾಳೆಗೇ ನಿನ್ನ ಲಗ್ನವಾಗಿ ನಿನ್ನ ಕನ್ಯಾವಸ್ಥೆಯನ್ನು ದೂರಪ ಡಿಸುವೆನೆಂದು ಹೇಳಿದ್ದರಿಂದ, ಅವಳು ಇಷ್ಟು ಸಂತೋಷಭರಿತಳಾಗಿರಬಹುದ ಲ್ಲವೇ? ಎಂಬ ಯೋಚನೆಗಳು ಅವನಲ್ಲಿ ಸಹಜವಾಗಿ ಉದ್ಭವಿಸಿದವು. ಆಕೆಯ ಸುಂದರ ರೂಪವು ಅವನ ಕಣ್ಣು ಮುಂದೆ ಕಟ್ಟಿದಂತಾಯಿತು. ಪದ್ಮೆಯು ಹೀಗೆ ತನ್ನ ವಿಷಯಕವಾಗಿ ಪ್ರೇಮವನ್ನು ತಾಳಿ ಸಂತೋಷಚಿತ್ತಳಾದ್ದರಿಂದ ಇಂದಿಗೆ ತಾನೇ ಧನ್ಯನೆಂದು ಅವನು ತನ್ನ ಧನ್ಯವಾದವನ್ನು ಮಾಡಿಕೊಳ್ಳಹತ್ತಿದನು. ಅವನ ಮನಸ್ಸು ಪದ್ಮೆಯ ಸುಂದರ ರೂಪದಲ್ಲಿಯೇ ತಲ್ಲೀನವಾಯಿತು. ಅವ ನಿಗೆ ಸುಖ ಸ್ವಪ್ನಗಳು ಬೀಳತೊಡಗಿದವು. ಪದ್ಮೆಯ ವಿಷಯದಲ್ಲಿದ್ದ ಅವನ ಮೋಹವು ಅವನಲ್ಲಿ ಅನೇಕ ವಿಚಾರಗಳನ್ನುಂಟು ಮಾಡಿತು. ತಾನು ಸಂಸ್ಥಾ ನಾಧಿಪತಿಯಿದ್ದು, ಪಾಣಿಗ್ರಹಣ ಮಹೋತ್ಸವದಲ್ಲಿ ಯಾವ ಕೊರತೆಯೂ ಇರದೆ ಪದ್ಮೆಯ ಪ್ರೇಮವೊಂದು ಕೊರತೆಯಾಗಬಹುದೆಂದು ಅವನು ಇಂದಿನ ವರೆಗೆ ನೆನಿಸುತ್ತಿದ್ದನು; ಆದರೆ ಇಂದಿನ ದಿವಸ ಆ ಕೊರತೆಯು ತುಂಬಿ ಬಂದಂತೆ ಅವನಿಗೆ ಭಾಸವಾಯಿತು. ಅವನಿಗೆ ಆ ಕಾಲಕ್ಕೆ ಸ್ವರ್ಗಸೌಖ್ಯವೇ ಲಭಿಸಿದಂತಾಯಿತು. ದುರ್ಗಕ್ಕೆ ಶತ್ರುಗಳು ಮುತ್ತಿಗೆಯನ್ನು ಹಾಕಿರುವ ವರೆಂಬ ಅರಿವು ಕೂಡಾ ಅವನಿಗೆ ತಪ್ಪಿತು. ಪದ್ಮೆಯ ಆನಂದವೃತ್ತಿಯ ನೆನಪು ಅವನಿಗೆ ಪುನಃಪುನಃ ಆಗಹತ್ತಿ ಅವನು ಮೈಮರೆತನು. ವಿಷಯ ಕಾಮುಕರು ಸ್ವಲ್ಪ ಅನುಕೂಲ ಕಾಲವು ಒಂತೆಂದು ತಿಳಿದ ಕೂಡಲೆ ಭ್ರಾಂತರಾಗುವರು ಅವ ರಿಗೆ ಕೂತಲ್ಲಿ-ನಿಂತಲ್ಲಿ ಆ ವಿಷಯವೇ ಕಾಣುವದು.

ಪ್ರಸ್ತುತದಲ್ಲಿ ಕೀರ್ತಿಸಿಂಹನಿಗೂ ಇದೇ ಸ್ಥಿತಿಯು ಪ್ರಾಪ್ತವಾಯಿತು. ಅವನು ಮನಸ್ಸಿನಲ್ಲಿ: "ಪದ್ಮೆಗೆ ಕನ್ಯಾವಸ್ಥೆಯು ಸಾಕಾಗಿದ್ದಿತಲ್ಲವೇ? ಹಾಗಿಲ್ಲದಿದ್ದರೆ ಅವಳು ಇಂದು ಇಷ್ಟೊಂದು ಸಂತೋಷವನ್ನು ತಾಳುತ್ತಿರಲಿಲ್ಲ. ಅಥವಾ ಇಂದಿನ ವರೆಗೆ ತನ್ನ ಬಿಡುಗಡೆಯ ದಾರಿಯನ್ನು ನೋಡಿ ಶಕ್ಯವಿಲ್ಲೆಂದು

ಕಂಡು ಬಂದದರಿಂದ, ನಿರುಪಾಯಳಾಗಿ ನನ್ನ ಪ್ರೇಮವನ್ನು ಸಂಪಾದಿಸುವದಕ್ಕೆ ಉದ್ಯುಕ್ತಳಾಗಿರಬಹುದು. ಏನೇ ಇರಲಿ; ಪದ್ಮೆಯು ನೈತಿಕ ಬಿಟ್ಟು ಅಡ್ಡಾಡ ಹತ್ತಿ ನನ್ನ ವಿಷಯವಾಗಿ ಪ್ರೇಮವನ್ನು ವ್ಯಕ್ತ ಮಾಡಿದ್ದೊಂದು ನನ್ನ ಸುದೈವವೇ ಸರಿ! ಇಂಥ ಸುರಸುಂದರಿಯು ಒಲಿದ ಮೇಲೆ ನನ್ನ ಸೌಖ್ಯಕ್ಕೆಣೆಯೇನು? ನಾನು ಅವಳೊಡನೆ ಅಂತಃಪುರದಲ್ಲಿ-ಉದ್ಯಾನದಲ್ಲಿ ಅನಂತ ಸೌಖ್ಯಗಳನ್ನು ಹೊಂದುವೆನು. ನಿಕಟ ಸಾನ್ನಿಧ್ಯದಿಂದ ಸ್ತ್ರೀಯರ ಮನಸ್ಸು ಒಲಿಯುವದೆಂಬದು ಸುಳ್ಳಲ್ಲ. ನಾನು ಆಗ್ಗೇ ಆಕೆಯ ಮೇಲೆ ಒಲುಮೆ ಮಾಡಿದ್ದರೆ ಪ್ರೇಮ ಭಂಗವಾಗಿ ಹೋಗುತ್ತಿತ್ತು. ಇಂದಿನ ವರೆಗೆ ಕೈ ಕಾದದ್ದು ಕಡೆಗೆ ಸುಖಕರವಾಗಿ ಪರಿಣಮಿಸಿತು!'' ಎಂದು ಯೋಚಿಸಿ, ನಾಳಿಗೆ ಪಾಣಿಗ್ರಹಣ ಮಹೋತ್ಸವವನ್ನು ಎಷ್ಟು ವೇಳೆಗೆ ನೆರವೇರಿಸಬೇಕು? ಪದ್ಮೆಯನ್ನು ಯಾವ ರೀತಿಯಿಂದ ಅಲಂಕರಿಸಬೇಕು? ತಾನು ಹೇಗೆ ಅಲಂಕೃತನಾಗಬೇಕು? ದುರ್ಗವನ್ನು ಹೇಗೆ ಶೃಂಗರಿಸಬೇಕು? ಇತ್ಯಾದಿ ಸಂಗತಿಗಳನ್ನು ತನ್ನ ಮನಸ್ಸಿಗೆ ಸಮಾಧಾನವಾಗುವಂತೆ ಕಲ್ಪಿಸಿಕೊಳ್ಳಹತ್ತಿದನು.

ಪ್ರೀಯಪಾಠಕರೇ, ವಿಷಯಲಂಪಟಿಗಳ ಮಾತು ಹೀಗೇ ಅಲ್ಲವೇ? ಅವರು ಕೊನೆಯ ವರೆಗೂ ಭ್ರಾಂತಿಮಯವಾದ ಕಲ್ಪನೆಯ ಸುಖದಲ್ಲಿಯೇ ಮಗ್ನರಾಗಿರುವರು. ಆ ಕಲ್ಪನೆಗಳೇ ತಮ್ಮನ್ನು ಮೃತ್ಯುಮಂದಿರಕ್ಕೆ ಎಳೆದೊಯ್ಯುವ ಬಲೆಗಳೆಂದು ಅವರು ಭಾವಿಸುವದಿಲ್ಲ. ಕೀರ್ತಿಸಿಂಹನಾದರೂ ಇಂಥ ಕಲ್ಪನಾಮಯ ಬಲೆಯಲ್ಲಿ ಸಿಕ್ಕು ಬುದ್ಧಿಶೂನ್ಯನಾದನು.

---

## ೨೦ ಯುದ್ಧೋಪಕ್ರಮ.

ಇಂದು ಪಾಣಿಗ್ರಹಣ ಮಹೋತ್ಸವವು; ಕಿರುಮಂಜಿಯ ದುರ್ಗದಲ್ಲೆಲ್ಲ ದೀಪೋತ್ಸವ; ಬೀದಿಗಳೆಲ್ಲ ತಳಿರು ತೋರಣಗಳಿಂದಲಂಕೃತವಾಗಿವೆ. ಕೋಟೆ ಕೊತ್ತಳಗಳ ಮೇಲೆ ಧ್ವಜಪತಾಕೆಗಳು ನರ್ತಿಸತೊಡಗಿವೆ. ಮಂಗಳವಾದ್ಯಗಳ ಸುನಾದವು ಕೇಳಬರತೊಡಗಿದೆ; ಇದಾವುದನ್ನೂ ಅರಿಯದೆ ಪದ್ಮೆಯು ತನ್ನ ಮಂದಿರದಲ್ಲಿ ನಿರಂಜನ ಯೋಗಿಗಳ ಆಶೀರ್ವಚನವನ್ನು ಸ್ಮರಿಸುತ್ತ ಸ್ವಸ್ಥವಾಗಿ ಕುಳಿತುಕೊಂಡಿದ್ದಳು. ಅಷ್ಟರಲ್ಲಿ ರಾಜಪುರೋಹಿತರು ಆಕೆಯ ಮಂದಿರವನ್ನು ಪ್ರವೇಶಿಸಿದರು. ಹೀಗೆ ಅಕಸ್ಮಾತ್ತಾಗಿ ಬಂದ ಜನರನ್ನು ನೋಡಿ ಪದ್ಮೆಯು ದಂಗಾದಳು. ಆಕೆಗೆ ಏನೂ ತಿಳಿಯದಾಯಿತು. ಅವಳು ಗೊಂದಲದಲ್ಲಿ ಬೀಳಲು ಧೂರ್ತನಾದ ಪುರೋಹಿತನು ಮುಂಬಂದು ನಿಜಸಂಗತಿಯನ್ನು ಬಚ್ಚಿಟ್ಟು:—

''ರಾಜಪುತ್ರೀ, ಈಗ ಶತ್ರುಗಳು ನಮ್ಮ ದುರ್ಗವನ್ನು ಮುತ್ತಿದ್ದು, ನಿನ್ನನ್ನು

ನಿನ್ನ ತಂದೆಯು ಮನೆಗೆ ಸುರಕ್ಷಿತವಾಗಿ ಮುಟ್ಟಿಸುವದಕ್ಕೆ ಈ ದುರ್ಗಾಧಿಪತಿಗಳು ನಮಗೆ ಆಜ್ಞೆ ಮಾಡಿದ್ದರಿಂದ, ನೀನು ನಮ್ಮ ಸಂಗಡ ನಡೆ; ಅಂದರೆ ನಿನ್ನ ಕಲ್ಯಾಣವಾಗುವದು, ಎಂದು ಸುಳ್ಳು ಸಂಗತಿಯನ್ನು ಹೇಳಿದನು. ಪದ್ಮೆಯು ದೇವ ಬ್ರಾಹ್ಮಣರಲ್ಲಿ ವಿಶ್ವಾಸವುಳ್ಳವಳಿದ್ದಳು. ತನ್ನ ತಂದೆಯ ಪುರೋಹಿತರು ಸಜ್ಜನರೂ ತಪಸ್ವಿಗಳೂ ಇದ್ದದ್ದನ್ನು ಅವಳು ಪ್ರತ್ಯಕ್ಷವಾಗಿ ನೋಡಿದ್ದಳು. ಅದರಂತೆ ಕೀರ್ತಿಸಿಂಹನ ಪುರೋಹಿತರೂ ಇರಬಹುದೆಂದು ಅವಳು ಭಾವಿಸಿದಳು, ಆದರೆ ದುರ್ಜನನಾದ ಕೀರ್ತಿಸಿಂಹನ ಪುರೋಹಿತನು ದುರ್ಜನನಿರುವನೆಂಬದು ಪಾಪ! ಆ ಹೆಣ್ಣುಮಗಳಿಗೆ ಹೇಗೆ ಗೊತ್ತಾಗಬೇಕು? ಅವಳು ಸಂತೋಷವನ್ನು ತಾಳಿ ಮನದಲ್ಲಿ ಭಗವಂತನನ್ನು ಕೊಂಡಾಡುತ್ತ ಪುರೋಹಿತನನ್ನು ಅನುಸರಿಸಿ ನಡೆದಳು.

ಹೀಗೆ ಮೋಸಗೊಳಿಸಿ ಪುರೋಹಿತನು ಪದ್ಮೆಯನ್ನು ವಿವಾಹ ಮಂಟಪಕ್ಕೆ ಕರೆತಂದನು. ಗೋರಜ ಮುಹೂರ್ತದಲ್ಲಿ ಪಾಣಿಗ್ರಹಣ ಸಮಾರಂಭವು ನಡೆಯಬೇಕಾದ್ದರಿಂದ ಆ ಸಮಯಕ್ಕೆ ಕೀರ್ತಿಸಿಂಹನ ಅಧಿಕಾರಿಗಳೆಲ್ಲರೂ ಅಲ್ಲಿ ನೆರಿದ್ದರು. ನರನಾರಿಯರಿಂದ ಸಭೆಯು ಸಂದಣಿತವಾಗಿತ್ತು. ಮಂಟಪವು ಅಪ್ರತಿಮ ವೈಭವದಿಂದ ಅಲಂಕೃತವಾಗಿತ್ತು; ಒಂದು ಕಡೆಯಲ್ಲಿ ಮಂಗಲ ವಾದ್ಯಗಳು ಮೊಳಗುತ್ತಿದ್ದವು. ಮತ್ತೊಂದೆಡೆಯಲ್ಲಿ ವಾರನಾರಿಯರು ತಮ್ಮ ಮಂಜುಳ ಕಂಠದಿಂದ ಪ್ರೇಕ್ಷಕರ ಚಿತ್ತವನ್ನಾಕರಿಸುತ್ತಿದ್ದರು. ಈ ರೀತಿ ಉತ್ಸವವನ್ನು ವ್ಯಕ್ತಗೊಳಿಸುತ್ತಿದ್ದ ಮಂಟಪವನ್ನು ಕಂಡು ಪದ್ಮೆಯ ಎದೆಯು ಧಸ್ಸೆಂದಿತು. ಪಿತೃದರ್ಶನೋತ್ಸುಕವಾದ ಅವಳ ಮನಸ್ಸು ಒಮ್ಮೆಲೆ ಕುಗ್ಗಿತು. ಆಗ ವಸ್ತುಸ್ಥಿತಿಯು ಅವಳಿಗೆ ಹೊಳೆಯಿತು. ಪುರೋಹಿತನು ಘಾತಮಾಡಿದನೆಂದು ಅವಳು ತಿಳಿದಳು. ಅವಳ ಮೈಯಲ್ಲಿ ಒಮ್ಮೆಲೆ ಕಂಪನವುಂಟಾಯಿತು. ಅವಳು ಕೂಡಲೆ ಅಲ್ಲಿಯೇ ಕುಸಿಬಿದ್ದಳು! ಹಾಯ್! ಹಾಯ್! ಲೋಕದಲ್ಲಿ ಇವರು ಸಾಧುಜೀವಿಗಳು, ಇವರು ಅಸಾಧುಗಳು ಎಂದು ಗುರ್ತಿಸುವದು ಪರಮ ಕಠಿಣವಾಗಿರುತ್ತದೆ. ಕೃತಿಯನ್ನು ಕಂಡ ಹೊರತು ಸಾಧುತ್ವ-ಅಸಾಧುತ್ವಗಳನ್ನು ನಿರ್ಣಯಿಸಲಿಕ್ಕೆ ಬರುವದಿಲ್ಲ. ಇದರಿಂದ ಅನಂತ ಪ್ರಾಣಿಗಳು ಮೋಸಹೋಗಿ ಕಷ್ಟಕ್ಕೀಡಾಗುವವು!

ಪದ್ಮೆಯು ದುಃಖದಿಂದ ನೆಲಕ್ಕೆ ಕುಸಿ ಕೂಡ್ರಲು, ದುರ್ಜನನಾದ ಆ ಪುರೋಹಿತನು ಆಕೆಯನ್ನು ಬಲುಮೆಯಿಂದ ಎತ್ತಿಕೊಂಡೊಯ್ದು ವಿವಾಹ ಸಮಯವನ್ನು ನಿರೀಕ್ಷಿಸುತ್ತಿದ್ದ ಕೀರ್ತಿಸಿಂಹನ ಬಳಿಯಲ್ಲಿ ಕುಳ್ಳಿರಿಸಿದನು. ಆಗ ಕೀರ್ತಿಸಿಂಹನಿಗಾದ ಆನಂದವನ್ನು ಬಣ್ಣಿಸಲಾಸಲ್ಲ! ಆತನು ಪುರೋಹಿತರನ್ನು

ಶತಶಃ ಅಭಿನಂದಿಸಿ ರಾಜಧರ್ಮೋಚಿತವಾದ ವಿಧಿಯಿಂದ ಬೇಗನೆ ಪಾಣಿಗ್ರಹಣ ಮಹೋತ್ಸವವನ್ನು ನೆರವೇರಿಸಲಿಕ್ಕೆ ಅವಸರಪಡಿಸಿದನು. ಸ್ವಭಾವತಃ ದೌರ್ಜನ್ಯವುಳ್ಳ ಆ ಪುರೋಹಿತನು ಕೀರ್ತಿಸಿಂಹನ ಪ್ರಸಾದದಿಂದ ಮತ್ತಿಷ್ಟು ದುರ್ಜನನಾಗಿ, ಪದ್ಮೆಯು ಸಾವಿರಾರು ಚೇಳು ಕಡಿದಂತೆ ವ್ಯಥೆ ಪಡುತ್ತಿದ್ದರೂ ಶಾಸ್ತ್ರವಿಧಿಯಿಂದ ಅವರಿಬ್ಬರಿಗೂ ತಳಕು ಹಾಕಬೇಕೆಂದು ಹವಣಿಸಿದನು; ಆದರೆ ಪುರೋಹಿತನ ಹವಣಿಕೆಯು ಕೈಗೂಡುವ ಯೋಗವಿದ್ದಿಲ್ಲ. ಕೀರ್ತಿಸಿಂಹನ ದೌರ್ಜನ್ಯಕ್ಕೆ ತಕ್ಕ ಪ್ರಾಯಶ್ಚಿತ್ತವನ್ನುಂಟುಮಾಡುವದು ವಿಧಿಯ ಮನಸ್ಸಿನಲ್ಲಿರಬಹುದಾಗಿ ತೋರಿತು. ಪುರೋಹಿತರು ಕೀರ್ತಿಸಿಂಹನ ಇಚ್ಛೆಯನ್ನು ಪೂರ್ಣಪಡಿಸುವದಕ್ಕೆ ಗಡಿಬಿಡಿಯನ್ನು ನಡಿಸಲು, ರಾಜಮಂದಿರದಲ್ಲಿ ಒಮ್ಮಿಂದೊಮ್ಮೆ ಗೊಂದಲವೆದ್ದಿತು. ಕೀರ್ತಿಸಿಂಹನೂ ಸಭಿಕರೂ ಇದೇನೆಂದು ಗಾಬರಿಯಾಗುತ್ತಿರಲು ೪೦-೪೫ ಜನರದೊಂದು ಗುಂಪು ವಿವಾಹ ಮಂಟಪವನ್ನು ಹೊಕ್ಕಿತು. ಅವರು ಪ್ರತಿಯೊಬ್ಬರೂ ಸಶಸ್ತ್ರರಿದ್ದರು. ಅವರು ತಮ್ಮನ್ನು ತಡೆಯ ಬಂದವರನ್ನು ಸಂಹರಿಸುತ್ತಿದ್ದರು. ಕೆಲಸವು ಘಾತವಾಯಿತೆಂದು ತಿಳಿದು ಕೀರ್ತಿಸಿಂಹನು ಲಗುಬಗೆಯಿಂದ ಆಯುಧಾಗಾರಕ್ಕೆ ಓಡಿದನು. ಸಭೆಯೊಳಗಿನ ಸರದಾರರು ಅಲಂಕಾರಕ್ಕೆ ಟೊಂಕದಲ್ಲಿ ಕಟ್ಟಿಕೊಂಡಿದ್ದ ಖಡ್ಗಗಳನ್ನು ಹಿರಿದರು; ಕ್ಷಣದಲ್ಲಿ ವಿವಾಹ ಮಂಟಪವು ಕಾಳಗದ ಕಣವಾಗಿ ಪರಿಣಮಿಸಿ ಉಭಯ ಪಕ್ಷಗಳಿಗೂ ಕೈಗೆ ಕೈಹತ್ತಿತು. ಕೀರ್ತಿಸಿಂಹನು ಖಡ್ಗಧಾರಿಯಾಗಿ ಶತ್ರುಗಳ ಪಾರುಪತ್ಯಕ್ಕೆ ನಿಂತನು; ಎಲ್ಲಿ ನೋಡಿದಲ್ಲಿ ಹೊಡಿ, ಬಡಿ, ಕಡಿ, ಎಂಬ ಕೋಲಾಹಲವೆದ್ದಿತು. ಮೊದ ಮೊದಲು ಶತ್ರುಗಳು ೪೦ ೫೦ ಜನರಿದ್ದವರು ಈಗ ಸಾವಿರಾರು ಜನರಾದರು! ರಾಕ್ಷಸರಂತೆ ಇವರು ರಕ್ತದಲ್ಲಿ ಉದ್ಭವಿಸುವರೋ ಎಂಬ ಸಂಶಯವು ಕೀರ್ತಿಸಿಂಹನ ಪಕ್ಷದವರಿಗೆ ಬಂದು ಹೋಯಿತು; ಈ ಗೊಂದಲದಲ್ಲಿ ಯಾರೋ ಪದ್ಮೆಯನ್ನು ಎತ್ತಿಕೊಂಡೊಯ್ದರು!

ಪ್ರಿಯ ಪಾಠಕರೇ, ಹೀಗೆ ಒಮ್ಮಿಂದೊಮ್ಮೆ ಕೀರ್ತಿಸಿಂಹನ ವಿವಾಹ ಮಂಟಪವನ್ನು ಪ್ರವೇಶಿಸಿ ಆತನ ಆನಂದದಲ್ಲಿ ಮಣ್ಣುಗೂಡಿಸಿದವರು ಬೇರೆ ಯಾರೂ ಇರದೆ, ಆತನ ಪ್ರಬಲ ಶತ್ರುವಾದ ಭೂವಡ ಸಮ್ರಾಟನೇ ಆಗಿದ್ದನು! ಆತನು ಮುನ್ನಾದಿನ ರಾಹುಟಿಯಲ್ಲಿ ಸ್ವಸ್ಥವಾಗಿ ಕುಳಿತಿರಲು ಗುಪ್ತಚಾರರಲ್ಲಿ ನಿಷ್ಣಾತನಾದ ಅಜಯಸಿಂಹನು ಬಹು ಸಾಹಸಪಟ್ಟು:- "ನಾಳೆಗೆ ಪದ್ಮೆಯ ಪಾಣಿಗ್ರಹಣವನ್ನು ಆ ನೀಚನಾದ ಕೀರ್ತಿಸಿಂಹನು ಮಾಡುವನು" ಎಂದು ವಾರ್ತೆಯನ್ನು ತಿಳಿದು ಬಂದು ಉಸುರಿದನು; ಈ ಸಂಗತಿಯನ್ನು ಕೇಳಿ ಸಮ್ರಾಟನ ಕಣ್ಣುಗಳು ನಿಚ್ಚಳವಾದವು. ತಾನು ವೃದ್ಧ ಲಕ್ಷಣದಾಸನಿಗೆ ಪದ್ಮೆಯ ಕನ್ಯಾ

ವಸ್ಥೆಗೆ ಧಕ್ಕೆ ತಗಲದಂತೆ ಆಕೆಯನ್ನು ಬಿಡಿಸಿಕೊಂಡು ಬರುವೆನೆಂದು ವಚನ ಕೊಟ್ಟಿದ್ದು, ಆಕೆಯನ್ನು ಬಿಡಿಸಿಕೊಳ್ಳುವಷ್ಟರಲ್ಲಿ ಕೀರ್ತಿಸಿಂಹನು ಆಕೆಯ ಪಾಣಿಗ್ರಹಣಮಾಡಿಬಿಟ್ಟರೆ ಕೆಲಸವು ಕೆಟ್ಟುಹೋಗುವದೆಂಬ ಚಿಂತೆಯು ಅವನಿಗೆ ತಾನು ವಚನಪ್ರದಾನ ಮಾಡಿದಂದಿನಿಂದ ಮನಸ್ಸಿನಲ್ಲಿ ಕಟಿಯುತಲಿತ್ತು. ಅದಕ್ಕಾಗಿ ಅವನು ಅಜಯನಂಥ ಸಾಹಸಿಯನ್ನು ಗುಪ್ತಚಾರರ ಕೆಲಸಕ್ಕೆ ನೇಮಿಸಿದ್ದನು; ಆದರೆ ಈ ದಿನ ಆ ಚಿಂತೆಯು ಮೂರ್ತಿಮತ್ತಾಗಿ ಎದುರಿಗೆ ನಿಲ್ಲಲು, ಈ ರೀತಿ ಸಮ್ರಾಟನ ಕಣ್ಣಲ್ಲಿ ಅಂಜನ ಹಚ್ಚಿದಂತಾಯಿತು. ಕೂಡಲೆ ಆತನ ಶೌರ್ಯವು ಉದ್ದೀಪಿತವಾಯಿತು. ಹೇಗೆ ಮಾಡಲಿ? ಇಂಥ ಅಭೇದ್ಯ ಕೋಟೆಯನ್ನು ಪ್ರವೇಶಿಸಿ ಆ ಸುಕುಮಾರಿಯನ್ನು ಹೇಗೆ ಬಿಡಿಸಲಿ? ಎಂಬ ಹೇಡಿ ವಿಚಾರಗಳು ಅವನ ಮನಸ್ಸನ್ನು ಸೋಂಕಲಿಲ್ಲ; ತೇಜಸ್ವಿಗಳಾದವರು ತಮ್ಮ ವಚನಕ್ಕೆ ಅಥವಾ ಸಂಕಲ್ಪಕ್ಕೆ ಭಂಗ ಬರುವ ಪ್ರಸಂಗ ಬಂದಲ್ಲಿ ಜೀವದ ಮೇಲೆ ಉದಾರರಾಗಿ ಕಾರ್ಯವನ್ನು ಕೊನೆಗಾಣಿಸಲಿಕ್ಕೆ ಪ್ರಯತ್ನ ಮಾಡುವರಲ್ಲದೆ, ಹೇಡಿಗಳಂತೆ ಹಳಹಳಿಸುತ್ತ ಕೂಡ್ರುವದಿಲ್ಲ; ಪ್ರಸಂಗದಲ್ಲಿಯೇ ತೇಜಸ್ವಿಗಳ ಶೌರ್ಯವು ಪ್ರಖರವಾಗುವದು. ಅವರ ಶೌರ್ಯಾಭಿವೃದ್ಧಿಗೆ ಅವರಲ್ಲಿದ್ದ ಧಾರ್ಮಿಕ ಸತ್ವವೇ ಸಂಜೀವಿನೀ ಔಷಧಿಯಾಗಿ ಪರಿಣಮಿಸುವದು. ಅದರಂತೆ ಸಮ್ರಾಟನ ಅವಸ್ಥೆಯಾಯಿತು. ಅವನು ನಾಳಿನ ದಿನ ಹೊತ್ತು ಮುಣುಗುವದರೊಳಗಾಗಿ ಕೋಟೆಯನ್ನು ಕೈವಶ ಮಾಡಿಕೊಳ್ಳುವೆನು ಇಲ್ಲವೆ ಧಾರಾತೀರ್ಥದಲ್ಲಿ ಪತನ ಹೊಂದುವೆನು, ಎಂದು ಭಯಂಕರವಾದ ಪ್ರತಿಜ್ಞೆಯನ್ನು ಮಾಡಿದನು!!

ಸಮ್ರಾಟನ ಈ ಭೀಕರ ಪ್ರತಿಜ್ಞೆಯು ಹಾ-ಹಾ ಅನ್ನುವಷ್ಟರಲ್ಲಿ ದಂಡಿನಲ್ಲೆಲ್ಲ ಪಸರಿಸಿತು. ಸಮ್ರಾಟನ ಈ ಪ್ರತಿಜ್ಞೆಯಂತೆ ಸೈನಿಕರೂ ಪ್ರತಿಜ್ಞೆ ಮಾಡಿದರು. ಪ್ರತಿಯೊಬ್ಬ ಸೈನಿಕನಿಗೂ ಇಮ್ಮಡಿ ಉತ್ಸಾಹವು ಪ್ರಾಪ್ತವಾಯಿತು. ಇಂದೇ ರಾತ್ರಿಯಲ್ಲಿ ಕೋಟೆಗೆ ಲಗ್ಗೆಹತ್ತಿ ಸಾವಿರಾರು ಕಾಲಾಳುಗಳ-ಸಾವಿರಾರು ಆನೆಗಳ ಆಹುತಿಯನ್ನು ಕೊಟ್ಟರೂ ಚಿಂತೆಯಿಲ್ಲ; ಕೋಟೆಯ ಬಾಗಿಲವನ್ನು ಮುರಿದು ಒಳಗೆ ಪ್ರವೇಶಿಸತಕ್ಕದ್ದೇ ಎಂದು ಗೊತ್ತಾಯಿತು. ಸಮ್ರಾಟನ ಸೈನ್ಯವಾದರೂ ಈ ಕೆಲಸವನ್ನು ಉತ್ಸಾಹದಿಂದ ನೆರವೇರಿಸುವದಕ್ಕೆ ಪಾತ್ರವಾಗಿತ್ತು; ಆದರೆ ಭಂಡಾರೀ ರಾಜನು ಇದಕ್ಕೆ ಒಪ್ಪಲಿಲ್ಲ. ಅವನು ಕೋಟೆಯ ಅಂತರ್ರಚನೆಯನ್ನು ಬಲ್ಲವನಾದ್ದರಿಂದ, ಸಮ್ರಾಟನ ಈ ಧುಡುಂ ಪ್ರವೇಶವು ಬಂದುವೇಳೆ ಯಶಸ್ಕರವಾದರೂ ಅಸಂಖ್ಯ ಪ್ರಾಣಹಾನಿಯಾಗುವದೆಂಬದೇ ಆತನ ತರ್ಕವಾಗಿತ್ತು. ಬಂದುವೇಳೆ ಪ್ರಯತ್ನವು ಸಫಲವಾಗದಿದ್ದರಂತೂ ಸರ್ವಸ್ವವೂ ಘಾತವಾಗುವದೆಂದು ಅವನು ಸಮ್ರಾಟನಿಗೆ ಹೇಳಿದನು. ವಸ್ತುಸ್ಥಿತಿಯಾದರೂ ಹೀಗೆಯೇ

ಇತ್ತು. ಕೋಟೆಯ ಹೆಬ್ಬಾಗಿಲವನ್ನು ಮುರಿಯುವದೆಂದರೆ ಸಾವಿರಾರು ಆನೆಗಳ ಸಾವಿರಾರು ಕಾಲಾಳುಗಳ ಪ್ರಾಣಾಹುತಿಯನ್ನು ಕೊಟ್ಟರೂ ಸಾಧಿಸದ ಮಾತಾಗಿತ್ತು. ದೈವವಶಾತ್ ಸಾಧಿಸಿದರೆ ಬಹು ಮುರಿಯುಳ್ಳ ಒಳಕೋಟೆಯನ್ನು ಸೇರುವದು ಅತ್ಯಂತ ಕಠಿಣವಿತ್ತು. ಒಳಕೋಟೆ ಹಾಗು ಹೊರಕೋಟೆಗಳ ಮಧ್ಯದಲ್ಲಿ ಇಕ್ಕಟ್ಟಿನ ಸ್ಥಳದಲ್ಲಿ ಸಿಕ್ಕ ಸಮ್ರಾಟನ ದಂಡು ಶತ್ರುಗಳ ಏಟಿಗೆ ಪ್ರಾಣ ಬಿಡತಕ್ಕದ್ದೆಂದೇ ಭಂಡಾರೀ ರಾಜನು ನಿಶ್ಚಯಿಸಿದನು. ಕಡೆಗೆ ಈ ಯಾವ ಅನಾನುಕೂಲತೆಗಳಿಗೂ ಸೊಪ್ಪುಹಾಕದ ಸಮ್ರಾಟನು ಏನೇ ಆಗಲಿ ಕೊಟ್ಟ ವಚನವನ್ನು ಪಾಲಿಸುವದಕ್ಕಾಗಿ ಈ ದಿನ ಕೋಟೆಗೆ ಲಗ್ಗೆ ಹಚ್ಚಿಯೇ ತೀರಬೇಕೆಂದು ನಿರ್ಧರಿಸಿದನು. ಸಮ್ರಾಟನ ಈ ಬಗೆಯ ಕೃತನಿಶ್ಚಯವನ್ನು ಕಂಡು ಭಂಡಾರೀ ರಾಜನು ನಿರುಪಾಯನಾದನು. ಸಮ್ರಾಟನ ಹಿತಚಿಂತನೆಯನ್ನು ಮನಮುಟ್ಟಿ ಮಾಡುತ್ತಿದ್ದ ಆತನಿಗೆ ತಟ್ಟನೆ ಒಂದು ಸಂಗತಿಯು ನೆನಪಾಯಿತು. ಕೂಡಲೆ ಅವನು ಆನಂದದಿಂದ ಸಮ್ರಾಟನನ್ನು ಏಕಾಂತಕ್ಕೆ ಕರೆದೊಯ್ದು: ತನಗೆ ಹೊಳೆದ ಸಂಗತಿಯನ್ನು ಅವನ ಮುಂದೆ ಹೇಳಿದನು. ಅದನ್ನು ಕೇಳಿ ಸಮ್ರಾಟನಿಗೂ ಕಾರ್ಯಸಾಧಕವಾದ ಹೊಸ ದಾರಿಯು ದೊರೆತದ್ದಕ್ಕೆ ಬಹು ಸಮಾಧಾನವಾಯಿತು.

ಕಿರುಮಂಜೀ ದುರ್ಗಕ್ಕೆ ಎಲ್ಲ ದುರ್ಗಗಳಿಗಿರುವಂತೆ ಎರಡು ಕಳ್ಳದಾರಿಗಳಿದ್ದವು. ಭಂಡಾರೀ ರಾಜನಿಗೆ ಆ ದಾರಿಗಳು ಎಲ್ಲಿರುವವೆಂಬದು ಗೊತ್ತಿತ್ತು; ಒಂದು ದಾರಿಯು ಅರಮನೆಯಿಂದ ನೆಲಮಾರ್ಗವಾಗಿ ಹೊರಟು ಪೂರ್ವಕ್ಕೆ ಮೂರು ಮೈಲಿನ ಮೇಲೆ ಒಂದು ದಟ್ಟವಾದ ಅಡವಿಯಲ್ಲಿ ಒಂದು ಗುಹೆಯ ವರೆಗೆ ಬಂದು ಮುಟ್ಟಿತ್ತು. ಇನ್ನೊಂದು ಮುಖ್ಯ ಅಂತಃಪುರದಿಂದ ಹೊರಟು ದಕ್ಷಿಣಕ್ಕೆ ನಾಲ್ಕು ಮೈಲುಗಳ ಅಂತರದಲ್ಲಿರುವ ಒಂದು ಗುಹೆಯ ವರೆಗೆ ಹೋಗಿತ್ತು. ಇವುಗಳಲ್ಲಿ ಪೂರ್ವದಿಕ್ಕಿನ ದಾರಿಯು ಸಮ್ರಾಟನಿಗೆ ಸಹಜವಾಗಿ ಸಾಧಿಸುವಂತಿತ್ತು. ಭಂಡಾರೀ ರಾಜನು ಸಮ್ರಾಟನಿಗೆ ಹೇಳಿದ ಹೊಸ ದಾರಿಯು ಇದೇ ಆಗಿತ್ತು.

ಸಮ್ರಾಟನೂ ಭಂಡಾರೀ ರಾಜನೂ ಕೂಡಿ ಪೂರ್ವದಿಕ್ಕಿನ ಚೋರ ಮಾರ್ಗದಿಂದ ದುರ್ಗವನ್ನು ಪ್ರವೇಶಿಸಿ, ಆ ನೀಚನ ಶಾಸನ ಮಾಡತಕ್ಕದ್ದೆಂದು ನಿಶ್ಚಯಿಸಿದರು; ಮತ್ತು ಸಂಗಡ ಎಷ್ಟು ಜನರನ್ನು ಕರಕೊಂಡು ಹೋಗಬೇಕು? ಹಿಂದಿನಿಂದ ಎಷ್ಟು ಜನರು ಬರಬೇಕು? ಎಂಬ ಎಲ್ಲ ಸಂಗತಿಗಳನ್ನು ನಿರ್ಧರಿಸಿ, ಅದರಂತೆ ಆಚರಿಸಲಿಕ್ಕೆ ಸೇನಾಪತಿಗೆ ತಿಳಿಸಿದರು. ಮೊದಲು ಭಂಡಾರೀ ರಾಜನೂ ಸಮ್ರಾಟನೂ ಆರಿಸಿದ ಐವತ್ತು ಜನ ಶೂರರೊಡನೆ ಹೋಗಿ ನೆಲ

ಮಾರ್ಗವನ್ನು ಸ್ವಾಧೀನಕ್ಕೆ ತಕ್ಕೊಂಡು, ದುರ್ಗವನ್ನು ಪ್ರವೇಶಿಸತಕ್ಕದ್ದೆಂದು ಗೊತ್ತಾಯಿತು; ಮತ್ತು ಹಿಂದಿನಿಂದ ಒಂದು ಸಾವಿರ ಜನರಿಂದ ಕೂಡಿ ಕೊಂಡು ಭಂಡಾರೀ ರಾಜನ ಸೇನಾಪತಿಯು ಬರತಕ್ಕದ್ದು. ಸಮ್ರಾಟನ ಸೇನಾ ಪತಿಯು ಪ್ರಚಂಡ ಸೈನ್ಯದೊಡನೆ ಸಜ್ಜಾಗಿ ಕೋಟೆಯ ಬಾಗಿಲ ಬಳಿಯಲ್ಲಿ ಕಾಯತಕ್ಕದ್ದೆಂದು ಗೊತ್ತಾಯಿತು.

ಈ ಮೇರೆಗೆ ಕೋಟೆಯನ್ನು ಆಕ್ರಮಿಸುವ ವಿಚಾರಗಳು ನಡೆದು ಆ ಪ್ರಕಾರ ಸಮ್ರಾಟನೂ ಭಂಡಾರೀ ರಾಜನೂ ಐವತ್ತು ಜನರೊಂದಿಗೆ ಅಂದೇ ರಾತ್ರಿಯಲ್ಲಿ ಗುಹೆಯ ಮುಖಕ್ಕೆ ಹೊರಟರು; ಆದರೆ ಅವರು ಯಾವ ವಿಘ್ನವೂ ಇಲ್ಲದೆ ಹಾಗೇ ಸಾಗಿದ್ದರೆ ಅವರು ಮಧ್ಯರಾತ್ರಿಯಲ್ಲಿಯೇ ಕಿರುಮುಂಜೆಯ ದುರ್ಗವನ್ನು ಪ್ರವೇಶಿಸಬಹುದಾಗಿತ್ತು. ರಾತ್ರಿಯಲ್ಲಿ ಅರಮನೆಯನ್ನು ಹೊಕ್ಕು, ಒಳಗಿನ ಗುಟ್ಟು ಗೊತ್ತಿದ್ದ ಭಂಡಾರೀರಾಜನ ಸಹಾಯದಿಂದ ಕೋಟೆಯ ಹೆಬ್ಬಾಗಿಲವನ್ನು ತೆರೆದು, ಹೊರಗಿನ ತಮ್ಮ ದಂಡನ್ನು ಒಳಗೆ ಕರೆದುಕೊಳ್ಳಬೇಕೆಂದು ಸಮ್ರಾಟನು ಯೋಚಿಸಿದ್ದನು; ಆದರೆ ಚಿಕ್ಕಂದಿನಲ್ಲಿ ನೋಡಿದ ಭಂಡಾರೀ ರಾಜನಿಗೆ ಗುಹೆಯಿದ್ದ ಸ್ಥಳದ ವಿಸ್ಮರಣೆಯಾಗಿ ಎತ್ತೋ ಹೋಗಿಬಿಟ್ಟನು. ಅವರು ಬೆಳಗು ಹರಿಯುವ ವರೆಗೆ ಅಲ್ಲಿದ್ದ ಗುಡ್ಡದ ಪ್ರದಕ್ಷಿಣೆಯನ್ನೇ ಹಾಕಬೇಕಾಯಿತು; ಬೆಳಗಾಗಲು ಇವರಂತೆ ದಾರಿಸಿಗದೆ ಪೇಚಾಡುತ್ತಿದ್ದ ಭಂಡಾರೀಸೇನಾಪತಿಯೂ ಒಂದು ಸಾವಿರ ಜನರೊಡನೆ ಅಲ್ಲಿಗೆ ಬಂದನು. ಬಳಿಕ ಅವರೆಲ್ಲರೂ ಕೂಡಿ ದಾರಿಯನ್ನು ಹುಡುಕತೊಡಗಿದರು. ಕೆಲಸವು ಕೆಟ್ಟು ಹೋಗುವದೆಂದು ಸಮ್ರಾಟನು ಮಿಡುಕತೊಡಗಿದನು. ಆಗ ಸಮ್ರಾಟನ ಮನಸ್ಸಿನಲ್ಲಿ ಹಲವು ವಿಚಾರಗಳು ಬರತೊಡಗಿದವು. ಅಷ್ಟರಲ್ಲಿ ಕರ್ಮ-ಧರ್ಮ ಸಂಯೋಗದಿಂದ ಭಂಡಾರೀ ರಾಜನಿಗೆ ದಾರಿಯ ಸುಳುವು ಗೊತ್ತಾಯಿತು. ಬಳಿಕ ಅವರು ಅಲ್ಲಿಯೇ ಅರ್ಧ ಮೈಲಿನ ಅಂತರದಲ್ಲಿರುವ ಗುಹೆಯ ಮುಖವನ್ನು ಮುಟ್ಟಿದರು; ಅವರು ಗುಹೆಯನ್ನು ಮುಟ್ಟಿದಾಗ ಮಧ್ಯಾಹ್ನವಾಗಿತ್ತು. ಪ್ರಸಂಗವು ಬಿಕ್ಕಟ್ಟಿನದಿದ್ದದರಿಂದ ಭಂಡಾರೀ ರಾಜನಿಗೂ ಸಮ್ರಾಟನಿಗೂ ಆಯಾಸವೆಂಬದು ಎಂತಹದೋ ಎಂಬಂತಾಗಿತ್ತು. ಅವರಲ್ಲಿ ನೂತನ ಉತ್ಸಾಹವು ವ್ಯಕ್ತವಾಗುತ್ತಿತ್ತು. ಅವರಂತೆ ಸೈನಿಕರಲ್ಲಿಯೂ ಹೊಸ ಹುರುಪು ಕಂಗೊಳಿಸುತ್ತಿತ್ತು.

ಗುಹೆಯ ಮುಖವು ಯಾರಿಗೂ ಕಾಣದ ಒಂದು ಕಂದರದಲ್ಲಿತ್ತು. ಅದರ ಸುತ್ತಲೂ ಹಲವು ತರದ ಪೆಳೆಗಳು ಬೆಳೆದಿದ್ದವು. ಆ ಮುಖರಕ್ಷಣೆಗೋಸ್ಕರ ಗುಡ್ಡದ ವಾರಿಯಲ್ಲಿ ಮೂವರು ಕಾವಲುಗಾರರು ಗುಡಿಸಿಲುಗಳನ್ನು ಕಟ್ಟಿಕೊಂಡಿದ್ದರು. ಅವರು ಒಮ್ಮಿಂದೊಮ್ಮೆ ಬಂದ ಈ ಸೇನೆಯನ್ನು ಕಂಡು

ಗಾಬರಿಯಾದರು. ದುರ್ಗವನ್ನು ಮುತ್ತಿದ ಶತ್ರುಗಳ ಸೈನ್ಯವೇ ಇದು ಇರಬಹುದೆಂದು ತರ್ಕಿಸಿ, ಅವರಲ್ಲಿ ಇಬ್ಬರು ಸೈನಿಕರ ಕಣ್ಣು ತಪ್ಪಿಸಿ, ಗುಹೆಯ ಕಡೆಗೆ ಓಡಿ ಹೋದರು. ಇದನ್ನು ಚಾಣಾಕ್ಷನಾದ ಸಮ್ರಾಟನು ದೂರಿನಿಂದಲೇ ಕಂಡು ಭಂಡಾರೀ ರಾಜನಿಗೆ ಸನ್ನೆ ಮಾಡಿದನು. ಬಹುಶಃ ಅವರು ದ್ವಾರರಕ್ಷಕರಿದ್ದು, ನಮ್ಮೀ ಆಗಮನವನ್ನು ಅವರು ದುರ್ಗದಲ್ಲಿ ತಿಳಿಸಲಿಕ್ಕೆ ಹೋಗಿರಬಹುದೆಂಬ ಕಲ್ಪನೆಯು ಅವರಿಬ್ಬರ ಮನಸ್ಸಿನಲ್ಲಿ ತಟ್ಟನೆ ಬಂದಿತು. ಅವರನ್ನು ದುರ್ಗಕ್ಕೆ ಹೋಗಗೊಡಬಾರದೆಂದು ಭಂಡಾರೀ ರಾಜನು ಎಲ್ಲಕ್ಕೂ ಮೊದಲು ಕಾಲ್ದೆಗೆದು ಗುಹೆಯ ಮುಖಕ್ಕೆ ಓಡಿದನು. ಅವನ ಹಿಂದಿನಿಂದ ಸಮ್ರಾಟನೂ ಧಾವಿಸಿದನು. ಉಳಿದ ಸೈನಿಕರೂ ಓಡಿದರು. ಭಂಡಾರೀ ರಾಜನು ಮುಖಕ್ಕೆ ಆನಿಸಿದ ಕಲ್ಲನ್ನು ತೆಗೆದು ಒಳಹೋಗಲು ಮೊದಲು ಪ್ರವೇಶಿಸಿದ ಕಾವಲುಗಾರರು ಅವಸರವಸರದಿಂದ ಗೂರವೆಯ ಕಟ್ಟಿಗೆಗಳನ್ನು ಹೊತ್ತಿಸುತ್ತಿದ್ದರು. ಅವರು ಕಟ್ಟಿಗೆಗಳನ್ನು ಹೊತ್ತಿಸಿ ಸಿದ್ಧಮಾಡುವದಕ್ಕೂ ಭಂಡಾರೀ ರಾಜನೂ ಸಮ್ರಾಟನೂ ಒಳಸೇರುವದಕ್ಕೂ ಮೇಳುಬಿದ್ದಿತು. ಕಾವಲುಗಾರರು ತಾವಾಗಿಯೇ ಶತ್ರುಗಳಿಗೆ ಬೆಳಕು ಮಾಡಿಕೊಟ್ಟಂತಾಯಿತು. ಭಂಡಾರೀ ರಾಜನು ಆ ಕಾವಲುಗಾರರನ್ನು ಗುದ್ದಿ ಅವರ ಕೈಯೊಳಗಿನ ಉರಿಯುವ ಕಟ್ಟಿಗೆಗಳನ್ನು ಕಸಿದುಕೊಂಡನು; ಮತ್ತು ಅವರಿಬ್ಬರು ಕಾವಲುಗಾರರನ್ನು ಹೊರಗೆ ಗಿಡಕ್ಕೆ ಕಟ್ಟಿಹಾಕಲು ತಮ್ಮ ಸೈನಿಕರಿಗೆ ಆಜ್ಞಾಪಿಸಿ ದುರ್ಗಕ್ಕೆ ಹೋಗುವ ಮಾರ್ಗವು ಎಲ್ಲಿರುವದೆಂಬದನ್ನು ಹುಡುಕಹತ್ತಿದನು. ಇಂಥ ಮಾರ್ಗಗಳನ್ನು ಹುಡುಕುವಲ್ಲಿ ಭಂಡಾರೀ ರಾಜನು ಸಮ್ರಾಟನಿಗಿಂತಲೂ ನಿಷ್ಣಾತನಿದ್ದನು; ಆದರೆ ಕೀರ್ತಿಸಿಂಹನ ಪೂರ್ವಜರು ಬಹು ಯುಕ್ತಿಕೋವಿದರಿದ್ದದರಿಂದ ದ್ವಾರವು ಶತ್ರುಗಳಿಗೆ ಸಿಗಬಾರದೆಂದು ವಿಶಿಷ್ಟಪ್ರಕಾರದಿಂದ ದ್ವಾರರಚನೆಯನ್ನು ಮಾಡಿದ್ದರು. ಶತ್ರುಗಳಿಗೆ ಇದೊಂದು ಸಾಮಾನ್ಯ ಗುಹೆಯೆಂದು ತಿಳಿದು ಬರಬೇಕಲ್ಲದೆ ವಿಶೇಷ ಮಹತ್ವದ ಗುಹೆಯೆಂದು ಕೂಡಾ ತಿಳಿಯಬಾರದೆಂದು ಗುಹೆಯ ರಚನೆಯನ್ನಾದರೂ ಬಹಳ ಆಡಂಬರ ಮಾಡಿದ್ದಿಲ್ಲ. ಅದರಲ್ಲಿ ಚೌರಸಾಕೃತಿಯ ನಾಲ್ಕು ಕೋಣೆಗಳಿದ್ದವು; ಮಧ್ಯದಲ್ಲಿ ಒಂದು ಅಂಗಣವಿತ್ತು; ಭಂಡಾರೀ ರಾಜನು ನಾಲ್ಕೂ ಕೋಣೆಗಳನ್ನು ನೋಡಿದನು. ಸೂಕ್ಷ್ಮವಾಗಿ ಶೋಧಿಸಿದನು. ಆದರೂ ಅವನಿಗೆ ಪ್ರವೇಶದ್ವಾರವು ಸಿಕ್ಕದಾಯಿತು. ಸಮ್ರಾಟನೂ ಶೋಧಿಸಿದನು; ಈ ಗೊಂದಲದಲ್ಲಿ ಎರಡು ತಾಸು ಕಳೆದು ಹೋಯಿತು. ಸಮ್ರಾಟನ ಮನಸ್ಸಿಗೆ ಹೇಗೆ ಹೇಗೋ ಆಗಹತ್ತಿತು. ಇಂದು ಸಂಜೆಯ ಒಳಗಾಗಿ ದುರ್ಗವನ್ನು ತಕ್ಕೊಂಡು ಆ ಕನ್ಯಾಮಣಿಯನ್ನು ಬಿಡಿಸುವೆನೆಂದು ಮಾಡಿದ ಪ್ರತಿಜ್ಞೆಯೂ, ವೃದ್ಧ ಲಕ್ಷ್ಮಣ

ದಾಸನಿಗಿತ್ತ ಅಭಯವನ್ನೂ ಇಂದು ಮಣ್ಣುಗೂಡುವವೆಂದು ಅವನು ಚಿಂತಾಕ್ರಾಂತನಾದನು. ಈ ಗುಹೆಗೆ ಬರುವ ವಿಚಾರ ಮಾಡದೆ ಕೋಟೆಯ ಬಾಗಿಲ ಒಡೆದು ಒಳಗೆ ಪ್ರವೇಶಮಾಡುವ ಸಾಹಸ ಮಾಡಿದ್ದರೆ, ತಾನು ಜಾಣನಾಗುತ್ತಿದ್ದೆನೆಂದು ಅವನಿಗೆ ಅನಿಸಹತ್ತಿತು; ಹೊತ್ತು ಗತಿಸಿ ಹೋಯಿತು; ಕೀರ್ತಿಸಿಂಹನು ಪದ್ಮೆಯ ಪಾಣಿಗ್ರಹಣ ಮಾಡುವ ಸಮಯವು ಸಮೀಪಿಸಿತು. ಹಾಯ್! ಹಾಯ್! ನನ್ನಿಂದ ಎಂಥ ಅನುಚಿತ ಕಾರ್ಯವಾಯಿತಲ್ಲ! ಎಂದು, ಎಂದೂ ನಿರಾಶಪಡದೆ ಇದ್ದ ಸಮ್ರಾಟನು ಈಗ ನಿರುತ್ಸಾಹಿಯಾದನು; ಅವನ ಈ ಸ್ಥಿತಿಯನ್ನು ನೋಡಿ ಭಂಡಾರೀ ರಾಜನಿಗೂ ಸಾವಿರಾರು ಚೇಳು ಕಡಿದಷ್ಟು ವ್ಯಥೆಯಾಗತೊಡಗಿತು. ನಾನು ಸಮ್ರಾಟನಿಗೆ ಈ ಚಿಂತೆಯನ್ನು ಯಾಕೆ ಹೇಳಿದ್ದೇನಾದೀತು? ನಾನು ಸುಮ್ಮನಿದ್ದರೆ ಆ ಸಮರ್ಥನು ಹೇಗೆ ಹೇಗೋ ಕಾರ್ಯಸಾಧಿಸಿಕೊಳ್ಳುತ್ತಿದ್ದನು. ನಾನು ಸುಮ್ಮನೆ ಸಮ್ರಾಟನ ಪ್ರತಿಜ್ಞಾ ಹಾಗು ವಚನಗಳನ್ನು ಭಂಗಪಡಿಸಿದಂತಾಯಿತು; ಹಾಯ್! ಹೀಗೆ ನಾವು ಹಿಡಿದ ಕಾರ್ಯಕ್ಕೆ ವಿಘ್ನವು ಬರಲು ಏನು ಕಾರಣವಿದ್ದೀತು? ನಾನು ಇಂದಿನ ವರೆಗೆ ಪರದಾರಾಗಮನದಂಥ ಪಾಪಾಚರಣೆಗಳನ್ನೆಸಗಿಲ್ಲ. ಸಮ್ರಾಟನಲ್ಲಾದರೂ ಈ ಬಗೆಯ ದೋಷಗಳಿದ್ದಂತೆ ತೋರಲಿಲ್ಲ. ಯಾವ ಪಾಪವಿಶೇಷದಿಂದ ಪ್ರತಿಜ್ಞಾಭಂಗ ಮಾಡಿಕೊಳ್ಳುವಂಥ ಈ ಪ್ರಸಂಗವು ನಮಗೆ ಬಂದಿದ್ದೀತು? ಭಗವಾನ್ ಏಕಲಿಂಗಜೀ, ನಮ್ಮಿಂದ ಆದ ಅಪರಾಧವಾದರೂ ಏನಿರಬಹುದು? ಎಂದು ಚಿಂತಿಸಲಾರಂಭಿಸಿದನು. ಸಮ್ರಾಟನಾದರೂ ಇದೇ ಮೇರೆಗೆ ಚಿಂತಿಸಿ ಬೆಂದು ಬೆಂಡಾಗುತ್ತಿದ್ದನು. ಉಭಯತರೂ ಮೌನವನ್ನು ಧರಿಸಿದ್ದರು. ಅವರ ಮನಸ್ಸು ಮಾತ್ರ ಕಲ್ಪನಾಚಕ್ರದಲ್ಲಿ ಶೀಘ್ರಗತಿಯಿಂದ ಪರಿಭ್ರಮಣ ಮಾಡುತ್ತಿತ್ತು.

ಹೀಗೆ ಉಭಯತರೂ ಚಿಂತೆಯಲ್ಲಿ ಮಗ್ನರಾಗಿರಲು, ಚಿಂತಾತಿರೇಕದಿಂದ ಭಂಡಾರೀ ರಾಜನು ಸಂತಪ್ತನಾಗಿ: "ನೀಚಾ, ಕೀರ್ತಿಸಿಂಹಾ, ಈ ದಿನ ಉಳಿದುಕೊಂಡೆಯಾ? ಆ ಕನ್ಯಾಮಣಿಯ ಕನ್ಯಾವಸ್ಥೆಯನ್ನು ಹರಣ ಮಾಡುವೆಯಾ? ಮಾಡು; ನಿನ್ನನ್ನೂ, ನಿನ್ನ ದುರ್ಗವನ್ನೂ ಅರೆಗಳಿಗೆಯಲ್ಲಿ ಧ್ವಂಸ ಮಾಡುತ್ತೇನೆ, ಎಂದು ಗರ್ಜಿಸಿ, ಒಮ್ಮೆ ಬಲಗಾಲನ್ನೆತ್ತಿ ನೆಲಕ್ಕೆ ಅಪ್ಪಳಿಸಿದನು. ಕೂಡಲೆ ನೆಲ ಅದಿರಿ ಅಲ್ಲಿದ್ದ ಹುಡಿಯು ಮೇಲಕ್ಕೆ ಹಾರಿತು. ಪದಾಘಾತದಿಂದ ಆದ ಸಪ್ಪಳಕ್ಕೆ ಆತನ ಕಣ್ಣುಗಳು ನಿಚ್ಚಳವಾಗಿ ತೆರೆದವು. ಇಲ್ಲಿ ಏನೋ ಚಮತ್ಕಾರವಿದೆಯೆಂದು ತಾನು ನಿಂತ ಸ್ಥಳದಲ್ಲಿಯ ಮಣ್ಣನ್ನು ಓರೆಮಾಡಿದನು. ಆಗ ಅಲ್ಲಿ ಹಲಿಗೆಗಳನ್ನು ಹೊಂದಿಸಿದ್ದು ಕಂಡು ಬಂದಿತು. ಭಂಡಾರೀ ರಾಜನು ಕಡು ಸಂಭ್ರಮದಿಂದ ಆ ಹಲಿಗೆಗಳನ್ನು ತೆಗೆಯಲು, ಒಳಗೆ ಪ್ರಶಸ್ತವಾಗಿ ಮಾರ್ಗವಿರು

ವದೆಂದು ತಿಳಿಯಿತು. ಕೂಡಲೆ ಸಮ್ರಾಟನಿಗೂ ಹರುಷವಾಯಿತು. ಅವರಿಬ್ಬರೂ ಗೊರವೆಯ ಕಟ್ಟಿಗೆಯ ಬೆಳಕಿನ ಸಹಾಯದಿಂದ ಒಳಗೆ ಇಳಿದು, ಮುಂದೆ ಹತ್ತುವ ಎರಡು ಇಕ್ಕಟ್ಟಿನ ದ್ವಾರಗಳನ್ನು ದಾಟಿದರು. ಆ ಬಳಿಕ ಅವರಿಗೆ ಸರಳವಾದ ನೆಲಮಾರ್ಗವು ಹತ್ತಿತು. ಅವರು ಸರಸರ ಮಾರ್ಗವನ್ನು ಕ್ರಮಿಸ ಹತ್ತಿದರು. ಹೀಗೆ ಅವರು ಮಾರ್ಗವನ್ನು ಕ್ರಮಿಸುವಾಗ ಅವರಿಗಾಗುತ್ತಿದ್ದ ಆನಂದವನ್ನು ವರ್ಣಿಸುವದು ಅಸದಳವು! ಬಹು ತೊಂದರೆಪಟ್ಟ ಬಳಿಕ ಇಷ್ಟ ಸಿದ್ಧಿಯಾಗುವ ಯೋಗವು ಬರಲು, ಹೀಗೆ ಆನಂದವೆನಿಸುವದು ಸ್ವಾಭಾವಿಕವಾಗಿರುವದು.

ಸಮ್ರಾಟ ಹಾಗು ಭಂಡಾರೀ ರಾಜ, ಇವರೊಡನೆ ಐವತ್ತು ಜನ ಶೂರರೂ ಭರದಿಂದ ನಡೆದರು. ಅವರ ಹಿಂದಿನಿಂದ ಭಂಡಾರೀ ರಾಜನ ಸೇನಾಪತಿಯು ಗೊರವೆಯ ಕಟ್ಟಿಗೆಗಳನ್ನು ವಿಪುಲವಾಗಿ ಹಚ್ಚಿಸಿ ಅವುಗಳ ಬೆಳಕಿನಿಂದ ತನ್ನ ಸೇನೆಯೊಡನೆ ಒಳಹೊಕ್ಕು ಮಂದಗತಿಯಿಂದ ಸಾಗಿದನು.

ಈ ಮೇರೆಗೆ ಸಾಹಸಪಟ್ಟು ಘೋರ ಮಾರ್ಗವನ್ನನುಸರಿಸಿ ಬಂದ ಸಮ್ರಾಟನು ಈ ಪ್ರಕರಣದ ಪ್ರಾರಂಭದಲ್ಲಿ ಹೇಳಿದಂತೆ ಕೀರ್ತಿಸಿಂಹನ ವಿವಾಹ ಮಂಟಪವನ್ನು ಪ್ರವೇಶಿಸಿ ಆತನ ಸರದಾರರೊಡನೆ ಕೈಗೆ ಕೈ ಹತ್ತಿ ಕಾದಾಡಲಾರಂಭಿಸಿದನು. ಸಮ್ರಾಟನ ಪೌರುಷವನ್ನೂ ಭಂಡಾರೀ ರಾಜನ ಸಾಹಸವನ್ನೂ ಪ್ರತಿಕ್ಷಣಕ್ಕೆ ಹೆಚ್ಚುತ್ತಿರುವ ಶತ್ರುಸೈನ್ಯವನ್ನು ಕಂಡು, ಕೀರ್ತಿಸಿಂಹನು ರೊಚ್ಚಿಗೆದ್ದು ಉತ್ಸಾಹ ಶೂನ್ಯನಾದರೂ ಹಂಗುದೊರೆದು ಕಾದಲಾರಂಭಿಸಿದನು. ಕೋಟೆಯಲ್ಲಿ ಈ ಪ್ರಕಾರ ಗೊಂದಲವೇಳಲು ಸಮ್ರಾಟನ ಸೈನಿಕರೂ ಅರಮನೆಯನ್ನು ಮುತ್ತಿದ್ದರಿಂದ, ವಿವಾಹ ಮಂಟಪದಲ್ಲಿಯೇ ಯುದ್ಧೋಪಕ್ರಮವಾಯಿತು.

---

## ೨೧ ಶೌರ್ಯಸಂಜೀವನ.

ಕೀರ್ತಿಸಿಂಹನ ಸೇನಾಪತಿಯಾದ ಭೋಟುಸಿಂಗನು ಬಹು ಧೂರ್ತನಿದ್ದನು. ಅವನು ಮೊದಲು ಶತ್ರುಗಳು ಒಳಹೊಕ್ಕ ದಾರಿಯನ್ನು ಕಂಡು ಹಿಡಿದು, ಅದನ್ನು ಕಟ್ಟು ಮಾಡಿಸುವ ಎತ್ತುಗಡೆ ಮಾಡಿದನು. ಭೋಟುಸಿಂಗನ ಈ ಯುಕ್ತಿಯಿಂದ ಸಮ್ರಾಟನ ದಂಡು ಒಳಗೆ ಪ್ರವೇಶ ಮಾಡುವದಕ್ಕೆ ಬಲವಾದ ಅಡ್ಡಿಯುಂಟಾಯಿತು. ಸಮ್ರಾಟನ ದಂಡಿನಲ್ಲಿ ಇನ್ನೂ ನೂರಾರು ಜನ ಸೈನಿಕರು ಆ ಘೋರ ಮಾರ್ಗದಲ್ಲೇ ಉಳಿದುಕೊಂಡಿದ್ದರು. ಅಷ್ಟರಲ್ಲಿ ಭೋಟುಸಿಂಗನು ಆ ಘೋರ ಮಾರ್ಗವನ್ನು ಮುತ್ತಿ ಬರತಕ್ಕವರನ್ನು ತುಂಡರಿಸಹತ್ತಿದನು. ಇಷ್ಟೇ ಅಲ್ಲ;

ಆ ಮಾರ್ಗದ ಕಟ್ಟಡವನ್ನು ಕೆಡಿಸಿ ಅದನ್ನು ಕಟ್ಟು ಮಾಡಿದನು. ಹೀಗೆ ಭೋಟುಸಿಂಗನು ಅರಮನೆಯಲ್ಲಿ ದ್ವಾರ ಬಂದ ಮಾಡಲು, ಒಳಗೆ ಸಿಕ್ಕ ಸಮ್ರಾಟನ ದಂಡಿನವರು ಹಿಂದಿರುಗಿ ಗುಹೆಯ ಮುಖಕ್ಕೆ ಹೋಗಬೇಕೆಂದು ಹೊರಟರು; ಆದರೆ ಗುಹೆಯ ಮುಖದಲ್ಲಿ ಕಾವಲುಗಾರನಾಗಿದ್ದ ಕೀರ್ತಿಸಿಂಹನ ಸೇವಕನೋರ್ವನು ಶತ್ರುಗಳು ಗಿಡಕ್ಕೆ ಕಟ್ಟಿ ಹಾಕಿದ್ದ ತನ್ನ ಸಂಗಡಿಗರನ್ನು ಬಿಚ್ಚಿ, ಅವರೊಡನೆ ಗುಹೆಯೊಳಗಿನ ಚೋರಮಾರ್ಗದಲ್ಲಿ ಸೌದೆಗಳನ್ನು ತುಂಬಿ ಅವಕ್ಕೆ ಬೆಂಕೀ ಹಚ್ಚಿದ್ದನು. ಸಮ್ರಾಟನ ಸೈನಿಕರು ಗುಹೆಯ ಮುಖಕ್ಕೆ ಬರುವಷ್ಟರಲ್ಲಿ ಭಯಂಕರವಾದ ಜ್ವಾಲೆಯು ಅವರನ್ನು ದಹಿಸಹತ್ತಿತು. ಹೊಗೆಯು ಕಣ್ಣುಗಳಲ್ಲಿ ತುಂಬಿ ಅವರಿಗೆ ಮುಂದುಗಾಣದಂತಾಯಿತು. ಹಾಯ್-ಹಾಯ್! ಆ ಬಡಪ್ರಾಣಿಗಳು ತಮ್ಮ ಪ್ರಾಣಾಂತ ಸಮಯವೇ ಬಂತೆಂದು ತಿಳಿದುಕೊಂಡರು. ಪಾರಾಗಲಿಕ್ಕೆ ಅವರಿಗೆ ಮಾರ್ಗವೇ ಉಳಿಯಲಿಲ್ಲ. ನೆಲಮಾರ್ಗದಲ್ಲಿ ಹೊಗೆಯು ಹೆಚ್ಚು ಹೆಚ್ಚು ಪಸರಿಸಹತ್ತಿದಂತೆ ಅವರು ಹಿಂದಕ್ಕೆ ಸರಿಯಹತ್ತಿದರು ಇವರಿಗಿಂತಲೂ ವೇಗಶಾಲಿಯಾದ ಧೂಮ್ರವು ಹಾ-ಹಾ ಅನ್ನುವಷ್ಟರಲ್ಲಿ ಸಮಗ್ರ ನೆಲಮಾರ್ಗವನ್ನು ಆಕ್ರಮಿಸಿ, ಒಳಗೆ ಸಿಕ್ಕ ಆ ಸೈನಿಕರನ್ನು ಮರಣೋನ್ಮುಖರನ್ನಾಗ ಮಾಡಿತು.

ಚೋರಮಾರ್ಗದಲ್ಲಿ ಇಂಥ ಭಯಾನಕ ಸ್ಥಿತಿಯು ನಡೆದಿರಲು, ಇತ್ತ ಅರಮನೆಯಲ್ಲಿ ಕಾಳಗವು ಅತಿ ನಿಕರಕ್ಕೆ ಮುಟ್ಟಿ, ಅಸಂಖ್ಯ ಜನರು ಪ್ರಾಣಕ್ಕೆರವಾಗತೊಡಗಿದ್ದರು. ಚೋರಮಾರ್ಗವನ್ನು ಕಟ್ಟು ಮಾಡಿದ ಭೋಟುಸಿಂಗನು ಕೋಟೆಯ ಹೆಬ್ಬಾಗಿಲಿಗೆ ಹೋಗಿ ಅಲ್ಲಿ ಬಲವಾದ ಕಾವಲವನ್ನಿರಿಸಿ, ಆಯಕಟ್ಟಿನ ಸ್ಥಳಗಳನ್ನು ಭದ್ರಪಡಿಸಿ, ಕಾಳಗ ನಡೆದಲ್ಲಿಗೆ ಬಂದನು. ಕೋಟೆಯಲ್ಲಿದ್ದ ಕೀರ್ತಿಸಿಂಹನ ಸೈನಿಕರು ಸಮ್ರಾಟನ ಸೈನ್ಯಕ್ಕಿಂತ ಹತ್ತುಪಟ್ಟು ಹೆಚ್ಚಾಗಿದ್ದರು. ಆದ್ದರಿಂದ ಸಮ್ರಾಟನ ಒಬ್ಬ ದಂಡಾಳುವು ಕೀರ್ತಿಸಿಂಹನ ಹತ್ತು ಜನರೊಡನೆ ಕಾದಬೇಕಾಯಿತು. ಕೋಟೆಯ ಹೆಬ್ಬಾಗಿಲವನ್ನು ತೆರೆದು ಹೊರಗಿನ ತಮ್ಮ ಸೈನ್ಯವನ್ನು ಒಳಗೆ ಕರೆದುಕೊಳ್ಳುವದಕ್ಕೆ ಸಮ್ರಾಟನಿಗೆ ಸಾಧಿಸಲಿಲ್ಲಾದ್ದರಿಂದ, ಇದ್ದಷ್ಟು ಜನರಿಂದಲೇ ಕಾದಾಡುವ ಭಯಂಕರ ಪ್ರಸಂಗವು ಆತನ ಪಾಲಿಗೆ ಬಂದಿತು.

ಭಂಡಾರೀ ರಾಜನು ಸಮ್ರಾಟನಂತೆ ಪರಾಕ್ರಮಶಾಲಿಯೇ ಆಗಿದ್ದನು. ಸಮ್ರಾಟನು ಆರಿಸಿ ಕರೆದುಕೊಂಡು ಬಂದ ೫೦ ಜನರೂ ಅಸಾಮಾನ್ಯ ಪರಾಕ್ರಮಿಗಳಿದ್ದರು. ಇವರು ಅರಮನೆಯ ವಿವಾಹ ಮಂಟಪದಲ್ಲಿ ಕೀರ್ತಿಸಿಂಹನ ಸರದಾರ ಹಾಗು ಅವನ ಸೈನಿಕರೊಡನೆ ಕಾದುತ್ತಿದ್ದರು. ಭಂಡಾರೀ ರಾಜನ

ಸೇನಾಪತಿಯು ತನ್ನ ಒಂಭತ್ತುನೂರು ಜನ ಸೈನಿಕರಿಂದ ಕೂಡಿ, ಅರಮನೆಯ ಮುಂಭಾಗದಲ್ಲಿ ಕೀರ್ತಿಸಿಂಹನ ಸೈನಿಕರೊಡನೆ ಹೋರಾಡುತ್ತಿದ್ದನು. ಸಮ್ರಾಟನ ಸೈನ್ಯವು ಮೊದಲೇ ಸ್ವಲ್ಪ; ಅದರಲ್ಲಿಯೂ ಹೀಗೆ ಇಬ್ಬಣಗಳಾದ್ದರಿಂದ ಇದು ಸುಲಕ್ಷಣವಲ್ಲೆಂದು ಸಮ್ರಾಟನಿಗೆ ಅನಿಸಹತ್ತಿತು. ಆಗ ಅವನು ಭಂಡಾರೀ ರಾಜನಿಗೆ ಸನ್ನೆಯಿಂದ ತನ್ನ ಈ ಮನೋಗತವನ್ನು ತಿಳಿಸಿ, ಕಾದಾಡುತ್ತ ಕಾದಾಡುತ್ತ ಅರಮನೆಯ ಹೊರಗೆ ಬಂದನು; ಅವನನ್ನು ಅನುಸರಿಸಿ ಭಂಡಾರೀ ರಾಜನ ಉಳಿದ ಸೈನಿಕರೂ ಹೊರಬಿದ್ದರು. ಶತ್ರುಗಳನ್ನು ಬೆನ್ನಟ್ಟಿ ಕೀರ್ತಿಸಿಂಹನೂ ಅವನ ಸೈನಿಕರೂ ಹೊರಬಿದ್ದರು. ಬರಬರುತ್ತ ಕತ್ತಲಾಗಿ ಸ್ವಜನರಾರು-ಶತ್ರುಗಳಾರು? ಎಂಬದು ತಿಳಿಯದೆ ಹೋಯಿತು. ಅಷ್ಟರಲ್ಲಿ ಕೀರ್ತಿಸಿಂಹನ ಸೈನಿಕರು ಪಂಜುಗಳನ್ನು ಹಚ್ಚಿ ಆ ತೊಂದರೆಯನ್ನು ನಿವಾರಿಸಿದರು. ಕೀರ್ತಿಸಿಂಹನ ಸೈನಕರು ಕೈಯಲ್ಲಿ ಪಂಜು ಹಿಡಿದು ಯುದ್ಧಮಾಡುವದು ಸಮ್ರಾಟನ ಸೈನಿಕರಿಗೆ ಹಿತಕರವಾಗಿ ಪರಿಣಮಿಸಿತು. ಆಗ ಸಮ್ರಾಟನು ತನ್ನ ಸೈನಿಕರನ್ನು ಹುರಿದುಂಬಿಸಿದನು. ಭಂಡಾರೀ ರಾಜನೂ ಸಮ್ರಾಟನೂ ತಮ್ಮನ್ನು ಕೂಡಿಕೊಂಡದ್ದರಿಂದ ಆ ಸೈನಿಕರ ಹುರುಪು ಹೆಚ್ಚಾಯಿತು. ಅವರು ಖಡ್ಗಗಳನ್ನು ಝಳಪಿಸುತ್ತ, ಶತ್ರುಗಳ ಸೈನ್ಯವನ್ನು ಸಂಹರಿಸಹತ್ತಿದರು. ಅಲ್ಪಸಂಖ್ಯಾಕರಾದ ಶತ್ರುಗಳ ಈ ಉತ್ಸಾಹವನ್ನು ನೋಡಿ, ಕೀರ್ತಿಸಿಂಹನ ಸೈನಿಕರು ನಾಚಿಕೊಂಡು ಜೀವದ ಹಂಗುದೊರೆದು ನಿಂತರು. ಅವರ ಆವೇಶವು ಹೆಚ್ಚಿತು. ಸಮ್ರಾಟನ ದಂಡು ಎಷ್ಟು ನಿಗ್ಗರದಿಂದ ಕಾದಿದರೂ ಶತ್ರುಗಳ ಸಂಖ್ಯಾಬಾಹುಲ್ಯದಿಂದ ಒಬ್ಬೊಬ್ಬರೇ ನೆಲಕ್ಕುರುಳಹತ್ತಿದರು. ಎರಡು ತಾಸುಗಳ ವರೆಗೆ ಯುದ್ಧವು ನಡೆಯಲು, ಕೀರ್ತಿಸಿಂಹನ ಸೈನ್ಯವು ವಿಶೇಷವಾಗಿ ಮಡಿದರೂ ಸಮ್ರಾಟನ ದಂಡು ಅರ್ಧಕ್ಕರ್ಧ ಕಡಿಮೆಯಾಯಿತು. ತಮ್ಮ ಸೈನ್ಯವು ಕ್ಷಯಿಸಹತ್ತಿದ್ದನ್ನು ನೋಡಿ ಸಮ್ರಾಟನೂ ಭಂಡಾರೀರಾಜನೂ ಖತಿಗೊಂಡರು. ನಿಜವಾದ ವೀರರಿಗೆ ತಮ್ಮ ಪಕ್ಷವು ಹಿಮ್ಮೆಟ್ಟಿದಂತೆ ಆವೇಶವು ಹೆಚ್ಚುವದು! ಅದರಂತೆ ಸಮ್ರಾಟನ ಹಾಗು ಭಂಡಾರೀ ರಾಜನ ಸ್ಥಿತಿಯಾಯಿತು. ಅವರು ಅರಿಬಲದಲ್ಲಿ ಸೇರಿ ಒಂದೇಸವನೆ ಕೋಲಾಹಲವನ್ನೆಬ್ಬಿಸಿದರು. ಆ ರಣಧೀರರಿಗೆ ಇಡಿಯ ದಿವಸ ಊಟವಿದ್ದಿಲ್ಲ; ಹೊರತು ಒಂದು ರಾತ್ರಿ ಒಂದು ಹಗಲು ಅವರು ದಾರೀ ನಡೆದು ಕಂಗೆಟ್ಟಿದ್ದರು. ಇಂಥ ಸ್ಥಿತಿಯಲ್ಲಿ ಅವರು ಒಂದೇಸವನೆ ಎರಡು ತಾಸು ಕಾದಿದ್ದರು. ಆದರೂ ಅವರ ಸಾಮರ್ಥ್ಯವು ಕುಗ್ಗದೆ, ಅಧಿಕವಾಗುತ್ತಲೇ ಇದ್ದದರಿಂದ, ಅವರಲ್ಲಿ ಅಂಥ ಶೌರ್ಯದ ಝರಿಯು ಅದಾವದಿತ್ತೋ ತಿಳಿಯದು!

ಅರಿಭಯಂಕರನಾದ ಸಮ್ರಾಟನು ಚಕ್ರದಂತೆ ತಿರುಗುತ್ತ ಅರಿಬಲವನ್ನು ಪ್ರವೇಶಿಸಲು, ಕುರಿಗಳ ಹಿಂಡಿನಲ್ಲಿ ತೋಳವೇ ಹೊಕ್ಕಂತಾಯಿತು. ಸಮ್ರಾಟನ ಹಾಗು ಭಂಡಾರೀ ರಾಜನ ಖಡ್ಗಗಳಿಂದ ಕೀರ್ತಿಸಿಂಹನ ದಂಡು ತುಂಡು ತುಂಡಾಗಿ ಬೀಳತೊಡಗಿತು. ಹಾ-ಹಾ ಅನ್ನುವಷ್ಟರಲ್ಲಿ ಎಲ್ಲ ಕಡೆಗೂ ಹಾ-ಹಾಕಾರವೇ ಉಂಟಾಯಿತು. ಕೀರ್ತಿಸಿಂಹನ ಬಲವು ಕಾಲ್ದೆಗೆಯಲಾರಂಭಿಸಿತು. ಇದನ್ನು ನೋಡಿ ಕೀರ್ತಿಸಿಂಹನು ಓಡಿ ಹೋಗುವ ತನ್ನ ಸೈನಿಕರನ್ನು ಹೀಯ್ಯಾಳಿಸಿದನು. ಕ್ಷಾತ್ರವೀರರಿಗೆ ಯುದ್ಧದಲ್ಲಿ ಮರಣ ಬಂದರೂ ಲೇಸೆಂದು ಓಡಿ ಹೋದವರೆಲ್ಲರೂ ಹಿಂದಿರುಗಿದರು. ಸಾಯಬೇಕು; ಇಲ್ಲವೆ ಗೆದೆಯಬೇಕು, ಎಂಬ ನಿಶ್ಚಯದಿಂದ ತಿರುಗಿದ ಕೀರ್ತಿಸಿಂಹನ ಸೈನ್ಯವು ಸಮ್ರಾಟನನ್ನು ಪುನಃ ಮುತ್ತಲು, ಆಗ ಮಾತ್ರ ಆತನ ಶಕ್ತಿಯು ಕುಂಠಿತವಾಯಿತು. ಅವನ ಮೈಯಲ್ಲಿ ಖಡ್ಗಗಳ ಅಸಂಖ್ಯ ಪೆಟ್ಟಿನಿಂದ ರಕ್ತವು ಹೊರಚಿಮ್ಮುತ್ತಿತ್ತು. ಕೈಯೊಳಗಿನ ಢಾಲು ಯಾವಾಗಲೋ ತುಂಡುತುಂಡಾಗಿ ಹೋಗಿತ್ತು. ಸಮ್ರಾಟನಂತೆಯೇ ಭಂಡಾರೀ ರಾಜನ ಸ್ಥಿತಿಯೂ ಆಗಿತ್ತು; ಮತ್ತು ಅವರ ಸೈನಿಕರಾದರೂ ನಿರ್ವಿಣ್ಣರಾಗಿದ್ದರು. ಇಂಥ ಸ್ಥಿತಿಯಲ್ಲಿ ಪುನಃ ಶತ್ರುಗಳು ಬಂದು ಮುತ್ತಲು, ಸಮ್ರಾಟನ ಸ್ಥಳದಲ್ಲಿ ಇನ್ನೊಬ್ಬನಿದ್ದರೆ ಅರಿಗಳಿಂದ ಕೊಯ್ಗುರಿಯಂತೆ ಕೊಯ್ಯಲ್ಪಡುತ್ತಿದ್ದನು; ಆದರೆ ಕನ್ನಡ ನಾಡಿನ ಕೆಚ್ಚೆದೆಯ ಆ ವೀರನು ಯಾವದಕ್ಕೂ ಸೊಪ್ಪು ಹಾಕದೆ, ತನ್ನ ಪ್ರತಿಜ್ಞೆಯ ಕಡೆಗೇ ದೃಷ್ಟಿಯನ್ನಿಟ್ಟು ಪುನಃ ಅವರೊಡನೆ ಹೋರಾಡಲಾರಂಭಿಸಿದನು. ಭಂಡಾರೀ ರಾಜನೂ ಮುಂದೊರೆದನು. ಈ ಉಭಯ ವೀರರು ಈ ರೀತಿ ಹಣ್ಣಾಗಿದ್ದರೂ ಅವರಲ್ಲಿದ್ದ ಸ್ವಧರ್ಮಪಾಲನವೆಂಬ ಸತ್ವವು ಅವರನ್ನು ಪುನಃ ಪುನಃ ಉತ್ಸಾಹಪೂರಿತರನ್ನಾಗ ಮಾಡುತ್ತಿತ್ತು. ಎಲ್ಲಿ ಧರ್ಮವಿರುವದೋ, ಅಲ್ಲಿ ಜಯವಿರುವದೆಂಬದು ಪೂರ್ಣವಾಗಿ ಅವರ ಸ್ಮರಣೆಯಲ್ಲಿ ಇತ್ತು. ಆದ್ದರಿಂದ ತಮ್ಮ ದಂಡು ಎಲ್ಲ ನಿಃಪಾತವಾದರೂ ತಮಗೆ ಅಪಜಯ ಬರಲಿಕ್ಕಿಲ್ಲೆಂಬ ನಿಶ್ಚಯವು ಅವರ ಉತ್ಸಾಹವನ್ನು ಹೆಚ್ಚಿಸುತಲಿತ್ತು. ಇದಕ್ಕೆ ವಿರುದ್ಧವಾಗಿ ಕೀರ್ತಿಸಿಂಹನ ಸ್ಥಿತಿಯಿತ್ತು. ಜನ್ಮದಾರಭ್ಯ ಅವನು ಪಾಪಕರ್ಮಿಯು. ವಿಷಯಲಂಪಟತ್ವದಲ್ಲಿಯೇ ಅವನ ಆಯುಷ್ಯವು ಹರಣವಾಗಿತ್ತು. ಧರ್ಮವೆಂಬದು ಎಂತಹದೋ ಅವನಿಗೆ ಗೊತ್ತಿರಲಿಲ್ಲ. ಆದ್ದರಿಂದ ಧರ್ಮದ ಬೆಂಬಲವಿಲ್ಲದ ಅವನು ಅಂತಃಸತ್ವವಿಲ್ಲದ ಹುಲಿಬೆಂಡಿನಂತೆ ಹಗುರಾಗಿದ್ದನು. ಅವನು ಬತ್ತಾಯದಿಂದ- ಅದೂ ವಿಷಯಲಂಪಟತ್ವ ಭಂಗದಿಂದುಂಟಾದ- ಕ್ರೋಧದಿಂದ ಉಂಟಾದ ಆವೇಶವನ್ನು ತಂದುಕೊಂಡರೂ ಆ ಆವೇಶವು ಬಹಳ ಹೊತ್ತು ಉಳಿಯದಾಯಿತು. ಮೂರು-ನಾಲ್ಕು ತಾಸುಗಳ ವರೆಗೆ ಕಾದಿದರೂ ಶತ್ರು

ಗಳು ನಾಶವಾಗಲಲ್ಲೆಂದು ಅವನ ಹೃದಯವು ದಹಿಸಲಾರಂಭಿಸಿತು. ಉತ್ಸಾಹವು ಶೂನ್ಯವಾಗತೊಡಗಿತು.

ಈ ಮೇರೆಗೆ ಧರ್ಮಸತ್ವದಿಂದ ಸಮ್ರಾಟನಲ್ಲಿ ಉತ್ಸಾಹವೂ ಅಧರ್ಮದಿಂದ ಕೀರ್ತಿಸಿಂಹನಲ್ಲಿ ನಿರುತ್ಸಾಹವೂ ಹೆಚ್ಚುತ್ತಿರಲು, ಕೀರ್ತಿಸಿಂಹನು ತನ್ನ ಸೈನಿಕರಿಗೆ ಸಂತಾಪದಿಂದ ಬಾಯಿಗೆ ಬಂದಂತೆ ಬೆಯ್ಯುತ್ತ, ಒಮ್ಮೆಲೆ ಸಮ್ರಾಟನ ಮೇಲೇರಿ ಬಂದನು. ಸಮ್ರಾಟನ ರಕ್ತವನ್ನು ತನ್ನ ಖಡ್ಗಕ್ಕೆ ಆಹುತಿಗೊಟ್ಟರೆ, ಈ ಸಂಗ್ರಾಮದ ಮೂಲವೇ ಕಡಿದು ಹೋಗುವದೆಂದು ಅವನ ವಿಶಾಲವಾದ ಬುದ್ಧಿಗೆ ತೋಚಿತು. ಇದು ವರೆಗೆ ಸಮ್ರಾಟನಿಗೂ ಕೀರ್ತಿಸಿಂಹನಿಗೂ ಕೈಗೆ ಕೈ ಹತ್ತಿದ್ದಿಲ್ಲ. ಸಮ್ರಾಟನ ಆರಿಸಿದ ದಂಡಾಳುಗಳು ಅವನನ್ನು ಸಮ್ರಾಟನೆದುರಿಗೆ ಬರಗೊಟ್ಟಿದ್ದಿಲ್ಲ. ಈಗ ಅವನು ಸಂಧಿ ಸಾಧಿಸಿ ಸಮ್ರಾಟನ ಮೇಲೇರಿ ಬಂದನು. ಈ ಪಾಪಿಯ ಆಯುಷ್ಯವು ತುಂಬಿತೆಂದು ಸಮ್ರಾಟನು ಹಿಗ್ಗಿದನು. ಉಭಯತರಿಗೂ ಕೈಗೆ ಕೈ ಹತ್ತಿತು. ಇವರಿಬ್ಬರ ಯುದ್ಧಕೌಶಲ್ಯವನ್ನು ನೋಡಬೇಕೆಂದು ಉಭಯಪಕ್ಷದ ಸೈನಿಕರೂ ತಟಸ್ಥರಾದರು. ಮೊದಲು ಕೀರ್ತಿಸಿಂಹನು ಸಮ್ರಾಟನನ್ನು ಬೆಯ್ಯುತ್ತ ಅವನ ಮೇಲೆ ಖಡ್ಗಪ್ರಯೋಗ ಮಾಡಿದನು. ಕೂಡಲೆ ಸಮ್ರಾಟನು ತನ್ನ ಕೌಶಲ್ಯದಿಂದ ಅವನ ಕಡತವನ್ನು ತಪ್ಪಿಸಿಕೊಂಡು ಅವನ ಮೇಲೆ ಖಡ್ಗಪ್ರಹಾರ ಮಾಡಿದನು. ಕೀರ್ತಿಸಿಂಹನಿಗೆ ಢಾಲಿನ ಆಶ್ರಯವಿತ್ತು; ಮೇಲಾಗಿ ಅವನು ಸಮ್ರಾಟನಷ್ಟು ದಣುವನ್ನೂ ಹೊಂದಿರಲಿಲ್ಲ. ಆದ್ದರಿಂದ ಅವನು ಪರೆಯುಚ್ಚಿದ ನಾಗರಹಾವಿನಂತೆ ಚಪಲತೆಯನ್ನು ವ್ಯಕ್ತಗೊಳಿಸಿ ಸಮ್ರಾಟನ ಅಸುವನ್ನು ಹೀರಲು ಹವಣಿಸಹತ್ತಿದನು; ಆದರೆ ಸಮ್ರಾಟನು ಎಷ್ಟೇ ದಣಿದವನಾಗಿದ್ದರೂ ಆನೆಯ ಮುಂದೆ ಆಡಿನ ಪೌರುಷವೆಂಬಂತೆ, ಕೀರ್ತಿಸಿಂಹನ ಆವೇಶದ ಸ್ಥಿತಿಯಾಯಿತು. ಸಮ್ರಾಟನು ಅವನೊಡನೆ ವಿನೋದವಾಗಿ ಅರ್ಧತಾಸಿನ ವರೆಗೆ ಕಾದಿದನು. ಅಷ್ಟರಲ್ಲಿ ಕೀರ್ತಿಸಿಂಹನು ಸಮಯವನ್ನು ಸಾಧಿಸಿ ಸಮ್ರಾಟನ ಮೇಲೆ ಖಡ್ಗಪ್ರಯೋಗ ಮಾಡಲು, ಅದು ಅವನ ಕಾಲಿಗೆ ಜಾರಗಡತದಿಂದ ತಾಕಿ ಬಲವಾದ ಗಾಯವನ್ನುಂಟು ಮಾಡಿತು. ಆಗ ಸಮ್ರಾಟನಿಗೆ ರೊಚ್ಚು ಹುಟ್ಟಿ ಪ್ರತಿಖಡ್ಗಪ್ರಹಾರ ಮಾಡಲು, ಅದು ತಪ್ಪದೆ ಆ ನರಾಧಮನ ಹೃದಯವನ್ನು ಭೇದಿಸಿತು. ಅದರಿಂದ ಆತನು ಹಾಯ್ ಪದ್ಮೆ! ಎಂದು ಉಚ್ಚರಿಸುತ್ತ ಪತನವನ್ನು ಹೊಂದಿದನು.

ನರಾಧಮನಾದ ಕೀರ್ತಿಸಿಂಹನು ಪದ್ಮೆಯನ್ನು ಸ್ಮರಿಸುತ್ತ ನೆಲಕ್ಕೆ ಬಿದ್ದು ಪ್ರಾಣ ಬಿಡಲು, ಅವನ ಸೈನಿಕರಲ್ಲಿ ಹಾ-ಹಾಕಾರವುಂಟಾಯಿತು. ತನ್ನ ಸೈನಿಕರಿಗೆ ಒಳ್ಳೇ ಹುರುಪನ್ನು ಕೊಡುತಲಿದ್ದ ಕೀರ್ತಿಸಿಂಹನ ಸೇನಾಪತಿಯು ಹೃದಯ

ದಲ್ಲಿಯ ಪ್ರಾಣಜ್ಯೋತಿಯೂ ಹೊರಟು ಹೋದಂತೆ ತಟಸ್ಥನಾದನು. ವೈರಿಗಳು ಅಲ್ಪ ಸಂಖ್ಯಾಕರಿದ್ದು, ತಮ್ಮ ಪಕ್ಷಕ್ಕೇ ಜಯಸಿಗುವದೆಂದು ನಂಬಿಕೊಂಡಿದ್ದ ಅವನು ಕೀರ್ತಿಸಿಂಹನ ಮರಣದಿಂದ ಬುದ್ಧಿಶೂನ್ಯನಾದನು. ಆಗ ಅವನು ಕೆಲ ಜನ ಸೈನಿಕರೊಡನೆ ಕೋಟೆಯ ಬಾಗಿಲ ತೆರೆದು ಓಡಿ ಹೋಗಬೇಕೆಂದು ಅಲ್ಲಿಗೆ ಬಂದನು; ಆದರೆ ಕೋಟೆಯ ಹೊರಭಾಗದಲ್ಲಿ ಹೆಬ್ಬಾಗಿಲವನ್ನು ಕಾಯುತ್ತ ಕುಳಿತಿದ್ದ ಸಮ್ರಾಟನ ಸೈನ್ಯವು ಅವನ ಕಣ್ಣಿಗೆ ಬಿದ್ದಿತು. ಕೂಡಲೆ ಅವನು ಹತವೀರ್ಯನಾದನು. ಬಳಿಕ ಅವನು ತನ್ನ ದಂಡಾಳುಗಳೊಡನೆ ಸಮ್ರಾಟನಿಗೆ ಶರಣು ಹೋದನು. ಹೀಗೆ ಶತ್ರುಗಳು ಶರಣು ಬರಲು, ಸಮ್ರಾಟನು ಯುದ್ಧ ವನ್ನು ನಿಲ್ಲಿಸಬೇಕೆಂದು ತನ್ನ ದಂಡಿನವರಿಗೆ ಅಪ್ಪಣೆ ಮಾಡಿದನು. ಶತ್ರುಗಳು ತಮ್ಮ ಶಸ್ತ್ರಾಸ್ತ್ರಗಳನ್ನು ಸಮ್ರಾಟ ಭೂವಡನಿಗೊಪ್ಪಿಸಿ ತಮ್ಮ ಜೀವಗಳನ್ನುಳಿಸಿ ಕೊಂಡರು.

ಮಧ್ಯರಾತ್ರಿಯ ಸಮಯಕ್ಕೆ ಎಲ್ಲ ಕಡೆಗೂ ಶಾಂತತೆಯುಂಟಾಯಿತು. ಕೋಟೆಯ ಕೊತ್ತಳದ ಮೇಲೆ ಸಮ್ರಾಟನ ವಿಜಯಧ್ವಜವು ಮೆರೆಯಲಾರಂಭಿ ಸಿತು! ಚಂದ್ರಜ್ಯೋತಿಯೆಂಬ ದೀಪದ ಪ್ರಕಾಶದಲ್ಲಿ ಸ್ಪಷ್ಟವಾಗಿ ತೋರುವ ತಮ್ಮ ವಿಜಯಧ್ವಜವನ್ನು ನೋಡಿ, ದುರ್ಗದ ಹೊರಗಿದ್ದ ಸಮ್ರಾಟನ ದಂಡಿನ ವರಿಗೆ ಅತ್ಯಾನಂದವಾಯಿತು. ಸೇನಾಪತಿಯಂತೂ ಇನ್ನು ಸ್ವಲ್ಪ ಹೊತ್ತಿನಲ್ಲಿ ಕೋಟೆಯ ಬಾಗಿಲ ತೆರೆದು ತಮ್ಮನ್ನು ಒಳಗೆ ಕರೆದುಕೊಳ್ಳುವರೆಂದು ಹವಣಿಸ ತೊಡಗಿದನು.

ಈ ಪ್ರಕಾರ ದುರ್ಗದ ಹೊರಗಡೆಯಲ್ಲಿ ಸಮ್ರಾಟನ ದಂಡಿನವರು ವಿಲ ಕ್ಷಣ ಸಂಭ್ರಮಕ್ಕೆ ಒಳಗಾಗಿರಲು, ಇತ್ತ ಕೋಟೆಯೊಳಗೆ ಸಮ್ರಾಟನು ಯುದ್ಧ ಮುಗಿದ ಬಳಿಕ ಪದ್ಮೆಯ ಶೋಧದಲ್ಲಿ ಕೋಟೆಯ ಬಾಗಿಲ ತೆರೆದು ತನ್ನ ಸೇನಾ ಪತಿಯನ್ನು ಒಳಗೆ ಕರೆದುಕೊಳ್ಳುವದನ್ನು ಮರೆತೇ ಬಿಟ್ಟನು. ಯಾಕಂದರೆ, ಇಷ್ಟೆಲ್ಲ ಕಷ್ಟಬಟ್ಟು ದುರ್ಗವನ್ನು ಸ್ವಾಧೀನಪಡಿಸಿಕೊಂಡ ಮುಖ್ಯ ಉದ್ದೇಶವು ಪದ್ಮೆಯ ಬಂಧವಿಮೋಚನಕ್ಕಾಗಿಯೇ! ಆದ್ದರಿಂದ ಅವನು ಪದ್ಮೆಯು ಎಲ್ಲಿರು ವಳೆಂಬದನ್ನು ಶೋಧಿಸಲುಪಕ್ರಮಿಸಿದನು. ಪದ್ಮೆಯ ಗುರುತು-ಪರಿಚಯಗಳು ಸಮ್ರಾಟನಿಗೂ ಆತನ ಪಕ್ಷದವರಿಗೂ ಇದ್ದಿಲ್ಲಾದ್ದರಿಂದ, ಆಕೆಯನ್ನು ಹೇಗೆ ಗೊತ್ತು ಹಚ್ಚಬೇಕೆಂಬ ಚಿಂತೆಯು ಆತನಲ್ಲುಂಟಾಯಿತು. ಅಷ್ಟರಲ್ಲಿ ಅಜಯನು ಅವನಿಗೆ ಭೆಟ್ಟಿಯಾದನು. ಗುಪ್ತಚಾರನ ಕೆಲಸವನ್ನು ಕೈಕೊಂಡಿದ್ದ ಅಜಯನು ವೇಷಾಂತರದಿಂದ ಸಮ್ರಾಟನಿಗೆ ಸುದ್ದಿಯನ್ನು ತಿಳಿಸಿ ಬಂದ ಬಳಿಕ, ಮರುದಿನ ಪದ್ಮೆಯ ಪಾಣಿಗ್ರಹಣದ ಸಮಯವು ಬರುವ ವರೆಗೂ ದಾರೀ ನೋಡಿದನು;

ಆದರೆ ಸಮ್ರಾಟನು ದುರ್ಗವನ್ನು ಕೈವಶ ಮಾಡಿಕೊಳ್ಳದ್ದರಿಂದ, ಇನ್ನು ಮುಂದೆ ನಿಶ್ಚಯವಾಗಿ ಪದ್ಮೆಯು ಪಾಣಿಗ್ರಹಣವಾಗಿ ಹೋಗುವದು. ಆ ನರಾಧಮನಾದ ಕೀರ್ತಿಸಿಂಹನು ತನ್ನ ಇಚ್ಛೆಯನ್ನು ಈಡೇರಿಸಿಕೊಳ್ಳುವನು, ಎಂದು ತಿಳಿದು, ಅಂತರಂಗದಲ್ಲಿ ಶೋಕಸಂತಪ್ತನಾದ ಅವನು ದುರ್ಗದ ಯಾವದೋ ಒಂದು ಮೂಲೆಯಲ್ಲಿ ಕುಳಿತುಕೊಂಡಿದ್ದನು; ಆದರೆ ಹೊತ್ತು ಮುಳುಗುವ ಸಮಯಕ್ಕೆ ದುರ್ಗದಲ್ಲಿ ಕೋಲಾಹಲವುಂಟಾಗಲು ಇದೇನೆಂದು ಹೊರಬಿದ್ದನು. ಅವನು ಅರಮನೆಯ ಸಮೀಪಕ್ಕೆ ಬರುತ್ತಿರಲು, ಸಮ್ರಾಟನ ಆಗಮನದ ಶುಭವಾರ್ತೆಯು ತಿಳಿಯಿತು. ಕೂಡಲೆ ಅವನು ಪದ್ಮೆಯ ಮಂದಿರಕ್ಕೆ ಹೋಗಲು ಅಲ್ಲಿ ಯಾರೂ ಇದ್ದಿಲ್ಲ. ಒಳಿಕ ಅವನು ಬಹು ಕಷ್ಟಬಟ್ಟು ಅರಮನೆಯನ್ನು ಪ್ರವೇಶಿಸಿ, ವಿವಾಹ ಮಂಟಪದಲ್ಲಿ ನೋಡಿದನು. ಅಲ್ಲಿ ಅವನಿಗೆ ಅನೇಕ ಹೆಣಗಳ ಹಾಗು ಕಾದಾಡುತ್ತಿರುವ ದಂಡಾಳುಗಳ ಹೊರತು ಬೇರೆ ಯಾರೂ ಕಾಣಲಿಲ್ಲ. ಅವನಿಗೆ ಪದ್ಮೆಯು ಎಲ್ಲಿ ಹೋದಳೆಂಬದು ತಿಳಿಯದಾಯಿತು. ಅವನು ಯುದ್ಧದ ಉಸಾಬರಿಯನ್ನು ಬಿಟ್ಟು ಪದ್ಮೆಯ ಶೋಧಕ್ಕೇ ನಿಂತನು; ಆದರೆ ಯುದ್ಧದ ಗೊಂದಲದ ಮೂಲಕ ಅವನ ಕೆಲಸವು ಸಾಧಿಸದಾಯಿತು; ನೋಡಿದ ಕೆಲವೆಡೆಗಳಲ್ಲಿ ಪದ್ಮೆಯು ಕಾಣದಾದಳು. ಹೀಗಾಗಿ ಅವನು ಸಣ್ಣ ಮೋರೆ ಮಾಡಿಕೊಂಡು ತಿರುಗುತ್ತಿದ್ದನು. ಹೀಗಿರಲು ಯುದ್ಧವು ನಿಂತ ಬಳಿಕ ಮೇಲೆ ಹೇಳಿದಂತೆ ಸಮ್ರಾಟನಿಗೂ ಅವನಿಗೂ ಭೆಟ್ಟಿಯಾಗಲು, ಸಮ್ರಾಟನು:—

ಏನು ಸರದಾರರೇ, ನಿಮ್ಮ ರಾಜಪುತ್ರಿಯೆಲ್ಲಿ?

ಅಜಯ:—ಸಮ್ರಾಟನೇ, ಇದುವರೆಗೆ ಆಕೆಯ ಶೋಧವಾಗದ್ದರಿಂದ ನಾನೂ ಗಾಬರಿಯಾಗಿರುತ್ತೇನೆ.

ಅಜಯನ ಈ ಮಾತುಗಳಿಂದ ಸಮ್ರಾಟನು ಮತ್ತಿಷ್ಟು ಚಿಂತೆಗೊಳಗಾದನು. ಬಳಿಕ ಅವನು ಅಜಯನನ್ನು ಸಹಾಯಕ್ಕೆ ಕರೆದುಕೊಂಡು ಎಲ್ಲ ಕಡೆಗೂ ಹುಡುಕ ತೊಡಗಿದನು. ಭಂಡಾರೀ ರಾಜನು ಶರಣು ಬಂದ ಕೀರ್ತಿಸಿಂಹನ ಸೈನಿಕರಿಂದ ರಣಾಂಗಣದಲ್ಲಿ ಮಡಿದ ವೀರರ ವ್ಯವಸ್ಥೆ ಮಾಡಿಸಲುಪಕ್ರಮಿಸಿದನು.

ಇತ್ತ ಪದ್ಮೆಯ ಶೋಧಕ್ಕೆ ಹೊರಟ ಸಮ್ರಾಟನು ಅಜಯನನ್ನು ಹಿಂಬಾಲಿಸಿ ತಿರುಗುತ್ತಿರಲು, ಅಂತಃಪುರದ ಒಂದು ಕೋಣೆಯಲ್ಲಿ ಒಬ್ಬ ಸ್ತ್ರೀಯು ಆಕ್ರೋಶ ಮಾಡುತ್ತಿರುವದು ಕೇಳಿಸಿತು. ಕೂಡಲೆ ಆತನು ತನ್ನ ಸಂಗಡಿಗರೊಡನೆ ಅಲ್ಲಿಗೆ ಹೋದನು. ಅಜಯನು ಮುಂದರಿದು ಹೋಗಿ ಅಂತಃಪುರದ ಆ ಕೋಣೆಯ ಬಾಗಿಲವನ್ನು ಮುರಿದು ಒಳಹೊಕ್ಕನು. ಒಳಗೆ ನಡೆದ ಪ್ರಕಾರ

ವನ್ನು ನೋಡಿ ಆತನ ಹೃದಯವು ಇಬ್ಭಾಗವಾಯಿತು. ಪದ್ಮೆಯು ದುಃಖಾಕುಲಳಾಗಿ ಒಂದು ಮೂಲೆಯಲ್ಲಿ ನಿಂತಿದ್ದು, ಅವಳ ಮೇಲೆ ಒಬ್ಬ ನರಾಧಮನು ಅತ್ಯಾಚಾರವನ್ನು ನಡಿಸಲು ಯತ್ನಿಸುತ್ತಿದ್ದನು. ಆತನು ಬೇರೆ ಯಾರೂ ಆಗದೆ ನಮ್ಮ ವಾಚಕರ ಪೂರ್ವಪರಿಚಿತನಾದ ರಣಭೋಡನೆಂಬ ನರಪಶುವಾಗಿದ್ದನು. ಆತನು ಪದ್ಮೆಯ ತೃಷ್ಣೆಯಿಂದ ಕಿರುಮಂಜಿಯ ದುರ್ಗದಲ್ಲಿ ಇದ್ದುಕೊಂಡಿದ್ದನೆಂಬದು ವಾಚಕರ ಸ್ಮರಣೆಯಲ್ಲಿರಬಹುದು. ಕೀರ್ತಿಸಿಂಹನ ವಿವಾಹ ಮಂಟಪದಲ್ಲಿ ಶತ್ರುಗಳ ಪ್ರವೇಶದಿಂದ ಗದ್ದಲವುಂಟಾದಾಗ ಪದ್ಮೆಯನ್ನು ಅಪಹರಿಸಿಕೊಂಡೊಯ್ದು ನೀಚನು ಇವನೇ ಆಗಿದ್ದನು. ಹೀಗೆ ಆ ವಿಷಯಲಂಪಟಿಯು ಪದ್ಮೆಯನ್ನು ಎತ್ತಿಕೊಂಡೊಯ್ದು ಅಂತಃಪುರದ ಮೂಲೆಯಲ್ಲಿರುವದೊಂದು ಕೋಣೆಯಲ್ಲಿ ಪ್ರವೇಶಿಸಿ, ಅಲ್ಲಿ ಪದ್ಮೆಯನ್ನಿಳಿಸಿದನು; ಆದರೆ ದುಃಖಾತಿಶಯದಿಂದ ನಿರ್ವಿಣ್ಣಳಾದ ಪದ್ಮೆಯು ಕೀರ್ತಿಸಿಂಹನ ಬಳಿಯಲ್ಲಿದ್ದಾಗಲೇ ಮೂರ್ಛೆಯನ್ನು ಹೊಂದಿದ್ದಳು! ಅವಳಿಗೆ ಬಂದ ಬವಳಿಯು ತಿಳಿಯುವಷ್ಟರಲ್ಲಿ ಸಮ್ರಾಟನು ವಿವಾಹ ಮಂಟಪವನ್ನು ಮುತ್ತಲು, ಆ ಗಡಿಬಿಡಿಯಲ್ಲಿ ರಣಭೋಡನು ಪದ್ಮೆಯನ್ನು ಹೊತ್ತುಕೊಂಡು ಬಂದು, ಮೇಲೆ ಹೇಳಿದ ಕೋಣೆಯಲ್ಲಿ ಆಕೆಯ ಮೂರ್ಛೆ ತಿಳಿಯುವ ವರೆಗೆ ಅವಳನ್ನು ಉಪಚರಿಸಿದನು. ಬಳಿಕ ಅವಳು ಚೇತರಿಸಿಕೊಂಡೇಳಲು ಅವಳ ಮನವೊಲಿಸುವ ಪ್ರಯತ್ನ ನಡಿಸಿದನು; ಆದರೆ ಲಕ್ಷ್ಮಣದಾಸನ ಆ ಕುಲದೀಪಿಕೆಯು ಅವನನ್ನು ಧಿಃಕರಿಸಿದಳು. ಆ ನೀಚನು ಹೇಳಿಕೊಂಡು ಬೇಸತ್ತು ಕಡೆಗೆ ಇವಳು ಸವಿಮಾತಿಗೆ ವಶಳಾಗುವದಿಲ್ಲೆಂದು ತಿಳಿದು, ಒತ್ತಾಯದಿಂದಾದರೂ ತನ್ನ ಕಾಮೇಚ್ಛೆಯನ್ನು ಒಮ್ಮೆ ಪೂರ್ಣಪಡಿಸಿಕೊಂಡು ಬಿಡಬೇಕೆಂದು ಈ ರೀತಿ ಪಶುವಿನಂತೆ ವರ್ತಿಸತೊಡಗಿದ್ದನು. ಇನ್ನೊಂದು ಅರೆಗಳಿಗೆಯು ಗತಿಸಿದ್ದರೆ ಆ ಕಾಮುಕನು ತನ್ನ ಇಚ್ಛೆಯನ್ನು ನೆರವೇರಿಸಿಕೊಳ್ಳುತ್ತಿದ್ದನು; ಆದರೆ ಆ ಕನ್ಯಾಮಣಿಯ ಪುಣ್ಯಪ್ರಭಾವವು ವಿಶೇಷವಿದ್ದದರಿಂದ, ಆ ನರಾಧಮನ ಶಾಸನಕ್ಕಾಗಿ ಅಜಯನೂ ಸಮ್ರಾಟನೂ ಅಲ್ಲಿಗೆ ಬಂದರು. ಅಜಯನು ಕ್ರೋಧಸಂತಪ್ತನಾಗಿ ಕೈಯೊಳಗಿನ ಖಡ್ಗದ ಒಂದೇ ಪೆಟ್ಟಿನಿಂದ ಆತನ ಶಿರಸ್ಸನ್ನು ಧರೆಗಿಳಿಸಿದನು!! ರಣಭೋಡನು ಗತಪ್ರಾಣನಾದನು. ಪದ್ಮೆಯು ಹೌಹಾರಿ ನಿಂತುಕೊಂಡಿದ್ದಳು. ತನ್ನ ತಂದೆಯ ಪ್ರೀತಿಯ ಸರದಾರನಾದ ಅಜಯನು ಎದುರಿಗೆ ನಿಂತುಕೊಳ್ಳಲು ಆಕೆಯು ಪರಮಾನಂದಬಟ್ಟಳು; ಬಳಿಕ ಅಜಯನು ಆಕೆಗೆ ಸಮ್ರಾಟನ ಮಹದುಪಕಾರವನ್ನು ತಿಳಿಸಿದನು. ಮಾನವತಿಯಾದ ಪದ್ಮೆಯು ಮೋರೆಯ ಮೇಲೆ ಮುಸುಕು ಎಳೆದುಕೊಂಡಳು. ಪದ್ಮೆಯು ಈ ರೀತಿ ಹಲವು ಕುತ್ತಗಳಿಂದ ಪಾರಾಗಿ ಪರಿಶುದ್ಧ ಕನ್ಯಾವಸ್ಥೆಯಲ್ಲಿ ಉಳಿದದ್ದಕ್ಕೆ

ಸಮ್ರಾಟನಿಗೆ ತುಂಬಾ ಸಂತೋಷವಾಯಿತು. ಎರಡು ರಾತ್ರಿ ಒಂದು ಹಗಲು ಆಹಾರ-ನಿದ್ರೆಗಳಿಲ್ಲದಿದ್ದರೂ ಯುದ್ಧದಲ್ಲಿ ಅಸಂಖ್ಯ ಗಾಯಗಳಾಗಿದ್ದರೂ ಅವನ ಶೌರ್ಯೋತ್ಸಾಹವು ಯಥಾಸ್ಥಿತವಾಗಿಯೇ ಇತ್ತು. ಆತನಿಗೆ ಅವನಲ್ಲಿದ್ದ ಧರ್ಮ ಪ್ರಭಾವವೇ ಸಹಾಯಕಾರಿಯಾಗಿತ್ತು. ಈ ಧರ್ಮಪ್ರಭಾವಕ್ಕೇ **ಶೌರ್ಯ ಸಂಜೀವನ**ವೆಂದು ಕರೆಯಬಹುದು.

---

## ೨೨ ಕ್ರಿಯಾಕಾರಿ-ಕ್ರಿಯಾಮಾರಿ!

ಈ ಮೇರೆಗೆ ಸಮ್ರಾಟನು ಪದ್ಮಿಯ ಸಂಕಟಸಮಯದಲ್ಲಿ ಒದಗಿ ಆಕೆಯನ್ನು ನಿರ್ಭಯಳನ್ನಾಗ ಮಾಡಿದ ಬಳಿಕ ಅವನಿಗೆ ಕೋಟೆಯ ಹೊರಗಿನ ತನ್ನ ಸೇನಾಪತಿಯನ್ನೂ, ಉಳಿದ ದಂಡಾಳುಗಳನ್ನೂ, ಕಿಂಬಹುನಾ ತನ್ನ ಎಲ್ಲ ಪರಿವಾರವನ್ನೂ ಒಳಕ್ಕೆ ಕರೆಯಿಸಿಕೊಳ್ಳಬೇಕೆಂಬ ಅರಿವುಂಟಾಯಿತು. ಬಳಿಕ ಅವನು ಭಂಡಾರೀ ರಾಜನೊಡನೆ ಕೋಟೆಯ ಬಳಿಗೆ ಹೋಗಿ ಅದನ್ನು ತೆರೆಯಿಸಿದನು. ಇಷ್ಟೆಲ್ಲ ಆಗುವದರೊಳಗೆ ಬೆಳ್ಳಗೆ ಬೆಳಗಾಗಿತ್ತು. ಪೂರ್ವದಿಕ್ಕಿನಲ್ಲಿ ದಿನಮಣಿಯು ಉದಯಿಸುವ ಸಮಯವಾಗಿತ್ತು. ಅವನ ಆರಕ್ತಕಿರಣಗಳು ಆಕಾಶವನ್ನಡರಿ ಇನ್ನು ಅವನು ಈಗಲೇ ಬರುವನು; ಎಂಬ ಸುವಾರ್ತೆಯನ್ನು ಧರಿತ್ರಿಗೆ ಸಾರಿ ಸಾರಿಹೇಳುತ್ತಿವೆಯೋ ಎಂಬಂತೆ ತೋರುತ್ತಿದ್ದವು. ಸುತ್ತಲೂ ತಂಗಾಳಿಯು ಬೀಸಿ ಶಾಂತ ಪ್ರಾಣಿಗಳ ಮನಸ್ಸಿಗೆ ಸಮಾಧಾನವನ್ನುಂಟು ಮಾಡುತ್ತಿತ್ತು. ಇಂಥ ಹೊತ್ತಿನಲ್ಲಿ ಸಮ್ರಾಟನು ಮೇಲೆ ಹೇಳಿದಂತೆ ಹೆಬ್ಬಾಗಿಲವನ್ನು ತೆಗೆಯಿಸಲು, ಅವನಿಗೆ ಕೋಟೆಯ ಹೊರಭಾಗದಲ್ಲಿ ನಡೆದ ಪ್ರಕಾರವು ಒಮ್ಮೆಲೆ ಗೋಚರಿಸಿತು.

ದುರ್ಗದ ಹೊರಭಾಗದಲ್ಲಿ ಸಮ್ರಾಟನ ಸೇನೆಯು ಉಳಿದುಕೊಂಡಿದ್ದು, ಬಾಗಿಲ ಬಳಿಯಲ್ಲಿ ಕಂದಕದ ಆಚೆಗೆ ಸೇನಾಪತಿಯು ಆರಿಸಿದ ಸೈನ್ಯದೊಡನೆ ಒಳಸೇರುವ ದಾರಿಯನ್ನು ಕಾಯುತ್ತಿದ್ದನಷ್ಟೇ? ಆದರೆ ಮಧ್ಯರಾತ್ರಿಯು ಮೀರಿದ ಬಳಿಕ ಕೀರ್ತಿಸಿಂಹನಿಗೆ ಸಹಾಯ ಮಾಡುವದಕ್ಕೋಸ್ಕರ ಗುರ್ಜರ ಸಂಸ್ಥಾನಿಕರು ತಮ್ಮ ತಮ್ಮ ಸೈನ್ಯದೊಡನೆ ಕೋಟೆಯ ಬಳಿಗೆ ಬಂದರು. ಸಮ್ರಾಟನ ಸೈನ್ಯವು ದುರ್ಗವನ್ನು ಬಳಸಿಕೊಂಡಿರುವದೆಂಬ ವಾರ್ತೆಯನ್ನು ಅವರು ಕೀರ್ತಿಸಿಂಹನ ದೂತರಿಂದ ತಿಳಿದುಕೊಂಡಿದ್ದರು. ಆದ್ದರಿಂದ ಅವರು ಸಮ್ರಾಟನ ಮೇಲೆ ಬೀಳುವ ಸಿದ್ಧತೆಯಿಂದಲೇ ಬಂದಿದ್ದರು. ಅವರ ಇಚ್ಛೆಯಂತೆ ದುರ್ಗದ ಹೆಬ್ಬಾಗಿಲ ಬಳಿಯಲ್ಲಿಯೇ ಸಮ್ರಾಟನ ಸೈನ್ಯವು ಸಿಗಲು, ಅಲ್ಲಿಯೇ ಕಾಳಗವನ್ನು ಹೂಡಿದರು. ಸಮ್ರಾಟನ ದಂಡಾಳುಗಳಾದರೂ ಯುದ್ಧಕ್ಕೋಸ್ಕರ ಹಾತೊರೆ

ಯುತ್ತಿದ್ದರು. ಕೂಡಲೆ ಉಭಯ ಪಕ್ಷಗಳಲ್ಲಿ ಕಾಳಗಕ್ಕೆ ಪ್ರಾರಂಭವಾಯಿತು.

ಸಮ್ರಾಟನ ಸೇನಾಪತಿಯು ತನ್ನ ಸಂಗಡ ಸ್ವಲ್ಪ ದಂಡನ್ನು ತಂದಿದ್ದನು. ಕೋಟೆಯೊಳಕ್ಕೆ ಸೇರುವ ಬದಲು ಶತ್ರುಗಳೊಡನೆ ಹೋರಾಡುವ ಪ್ರಸಂಗ ಬಂದದ್ದರಿಂದ, ಒಂದು ಮೈಲಿನ ಅಂತರದಲ್ಲಿ ಬೀಡು ಬಿಟ್ಟಿರುವ ತಮ್ಮ ಪಾಳಯಕ್ಕೆ ವರದಿಯನ್ನು ಕಳುಹಿದನು. ಪಾಳಯಕ್ಕೆ ಸುದ್ದಿಯು ಮುಟ್ಟಲು ಸಮ್ರಾಟನ ಅಪಾರವಾದ ಸೈನ್ಯವು ಹಾ ಹಾ ಅನ್ನುವಷ್ಟರಲ್ಲಿ ಶತ್ರುಗಳನ್ನು ಮುತ್ತಿತು. ಸಮ್ರಾಟನು ದುರ್ಗದ ಬಾಗಿಲ ತೆಗೆದಾಗ ತಮ್ಮ ಸೈನಿಕರು ಶತ್ರುಗಳೊಡನೆ ಘನ ಘೋರ ಸಂಗ್ರಾಮವನ್ನು ನಡೆಸಿರುವರೆಂಬದನ್ನು ತಿಳಿದು ವಿಸ್ಮಿತನಾದನು. ಕೂಡಲೆ ಅವನ ಬಾಹುಗಳು ಸ್ಫುರಣವಾಗತೊಡಗಿದವು. ತಾನು ಯುದ್ಧದಲ್ಲಿ ಸೇರಬೇಕೆಂದು ಬೇಗನೆ ಕಂದಕದ ಮೇಲಿನ ಪೂಲನ್ನು ಕೆಡಹಲು ಕಾವಲುಗಾರರಿಗೆ ಆಜ್ಞಾಪಿಸಿದನು; ಆದರೆ ಭಂಡಾರೀ ರಾಜನು ಸಮ್ರಾಟನ ಆ ಆವೇಶವನ್ನು ತಡೆದು, ನುಡಿದನೇನಂದರೆ:—

ಭಂಡಾರೀರಾಜ:—ಸಮ್ರಾಟನೇ, ಶತ್ರುಪಕ್ಷವು ಎಷ್ಟಿರುವದು, ಯುದ್ಧರಂಗವು ಹೇಗಿರುವದು ಎಂಬದನ್ನು ತಿಳಿದ ಹೊರತು ನೀವು ಯುದ್ಧದಲ್ಲಿ ಪ್ರವೇಶ ಮಾಡುವದು ಉಚಿತವಾಗದು; ಯಾಕಂದರೆ ನಿಮಗೆ ಈಗಾದ ಶ್ರಮವು ವಿಶೇಷವಾಗಿರುವದು. ಈಗ ಯುದ್ಧದಲ್ಲಿ ಸೇರಿದರೆ ಪುನಃ ನೀವು ಯುದ್ಧ ಮಾಡಲಾರಿರಿ, ಎಂದು ನನ್ನ ಅಭಿಪ್ರಾಯವಲ್ಲ. ಶತ್ರುಬಲವು ಅಧಿಕವಾಗಿ ನಮ್ಮವರಿಗೆ ಅನಿಷ್ಟ ಸಂಭವಿಸುವ ಕಾಲದಲ್ಲಿ ಯುದ್ಧದಲ್ಲಿ ಭಾಗ ತಕ್ಕೊಳ್ಳಬೇಕಲ್ಲದೆ ಸುಮ್ಮಸುಮ್ಮನೆ ಕಠಿಣ ಪ್ರಸಂಗವನ್ನು ತಂದುಕೊಳ್ಳುವದು ಉಚಿತವಾಗದು. ರಾಜನು ಸುರಕ್ಷಿತನಾಗಿದ್ದರೆ ಸೈನಿಕರಿಗೆ ಕಾದಲಿಕ್ಕೆ ಹುರುಪೂ ಬರುವದು. ಸೈನ್ಯದ ಉತ್ಸಾಹಕ್ಕೆ ರಾಜನ ಸುರಕ್ಷಿತತೆಯೇ ಕಾರಣವಿರುವದು. ಆದ್ದರಿಂದ ಈಗ ನೀವು ಹೋಗಬೇಡಿರಿ. ನಾನು ಹೋಗಿ ವಸ್ತುಸ್ಥಿತಿಯನ್ನು ತಿಳಿದು ನಿಮಗೆ ತಿಳುಹಿಸುತ್ತೇನೆ.

ಭಂಡಾರೀ ರಾಜನ ಈ ಮಾತುಗಳನ್ನು ಕೇಳಿ ಸಮ್ರಾಟನು ನಕ್ಕು:— ಒಳ್ಳೇದು, ಮಿತ್ರನೇ, ನೀನಂದಂತೆಯೇ ಆಗಲಿ; ಆದರೆ ನನ್ನಂತೆ ನಿನಗೂ ಆಯಾಸವಾದದ್ದರಿಂದ, ನೀನೂ ಹೋಗುವ ಕಾರಣವಿಲ್ಲ. ಒಬ್ಬ ಸೇನಾಪತಿಯನ್ನು ನೂರಾರು ಜನರೊಡನೆ ಕಳುಹಿಸು; ಆತನು ನನ್ನ ಸೇನಾಪತಿಗೆ ಹುರುಪನ್ನು ಕೊಟ್ಟು, ನಮ್ಮ ಪಾಳಯದ ವ್ಯವಸ್ಥೆಯನ್ನು ನೋಡಿಕೊಂಡು ಬರಲಿ, ಎಂದು ಹೇಳಿದನು. ಈ ಪ್ರಕಾರ ಅವರಿಬ್ಬರ ಸಂಭಾಷಣವಾದ ಬಳಿಕ ಭಂಡಾರೀರಾಜನ ಸೇನಾಪತಿಯು ನೂರಾರು ಜನ ಸೈನಿಕರೊಡನೆ ಪೂಲಿನ ಸಹಾಯದಿಂದ ಕಂದಕವನ್ನು ದಾಟಿ, ಕಾಳಗದ ಕಣಕ್ಕೆ ನಡೆದನು.

ಸಮ್ರಾಟನ ಸೈನಿಕರಿಗೆ ದುರ್ಗವು ಕೈವಶವಾದದ್ದೊಂದು ಸಂತೋಷ; ಮೇಲೆ ಯುದ್ಧ ಮಾಡಬೇಕೆಂಬ ಬಲವತ್ತರವಾದ ಕುತೂಹಲ. ಹೀಗೆ ಇಬ್ಬಗೆಯ ಶಕ್ತಿವಿಶೇಷದಿಂದ ಅವರು ಶತ್ರುಬಲವನ್ನು ಎಗ್ಗಿಲ್ಲದೆ ತುಂಡರಿಸುತ್ತಿದ್ದರು. ಅವರ ಈ ರಭಸಕ್ಕೆ ಶತ್ರುಸೈನ್ಯವು ಹಿಂಜರಿಯಹತ್ತಿತು. ಆಗ ಶತ್ರುಸೈನ್ಯದಲ್ಲಿ ಮುಖ್ಯನಾದ ದುರ್ಗಾದಾಸನು ಹಿಂಜರಿಯುವ ಸೈನ್ಯವನ್ನು ಬಹು ಮಾರ್ಮಿಕವಾಗಿ ಪ್ರೋತ್ಸಾಹಿಸುತ್ತಿದ್ದನು. ಆತನ ಪ್ರೋತ್ಸಾಹನೆಯಿಂದ ಶತ್ರುಸೈನ್ಯವು ಏರಿ ಬರಲು ಸಮ್ರಾಟನ ಸೈನಿಕರು ಮತ್ತೆ ಒಳನುಗ್ಗಹತ್ತಿದ್ದರು. ಹೀಗೆ ಆಗುತ್ತಾಗುತ್ತ ಮಧ್ಯಾಹ್ನವಾಗಿ, ಸೂರ್ಯನು ನೆತ್ತಿಯ ಮೇಲೆ ಬಂದನು. ಶತ್ರುಸೈನ್ಯದಲ್ಲಿ ಅಸಂಖ್ಯ ಜನರು ಮಡಿದರು ಕೀರ್ತಿಸಿಂಹನಿಗೆ ಸಹಾಯ ಮಾಡಿ ಕೀರ್ತಿಯನ್ನು ಸಂಪಾದಿಸಬೇಕೆಂದು ಬಂದಿದ್ದ ಕೀರ್ತಿಸಿಂಹನ ಸ್ನೇಹಿತ ಸಂಸ್ಥಾನಿಕರು ಹತವೀರ್ಯರಾದರು. ಅವರು ಸಮ್ರಾಟನ ಸೈನಿಕರನ್ನು ಹಾ-ಹಾ ಅನ್ನುರಷ್ಟರಲ್ಲಿ ಗೆಲ್ಲುವೆವೆಂದು ತಿಳಿದಿದ್ದರು; ಸೇರಿಗೆ ಸವ್ವಾಸೇರಿನಂತೆ ತಮ್ಮ ದಂಡಿಗಿಂತಲೂ ಸಮ್ರಾಟನ ದಂಡು ಅಧಿಕವಿದ್ದದರಿಂದ, ತಮ್ಮ ಆಟವು ನಡೆಯುವದಿಲ್ಲೆಂಬದು ಅವರಿಗೆ ನಂಬಿಗೆಯಾಯಿತು. ಆದರೂ ಅವರು ತಮ್ಮ ಹಿಂದೆ ಬರುವ ಹೊಸ ಸೇನೆಯ ಆಶೆಯನ್ನು ಹಿಡಿದು, ಮತ್ತೆ ಹುರಿದುಂಬಿ ಕಾದಲಾರಂಭಿಸಿದರು. ಮಧ್ಯಾಹ್ನವಾದ್ದರಿಂದ ಸಮ್ರಾಟನ ಸೈನಿಕರೂ ಕಂಗೆಟ್ಟಿದ್ದರು; ಆದ್ದರಿಂದ ಅವರು ಬಳ್ಳೇ ಸಂತಾಪದಿಂದ ಅರಿಗಳ ಮೈಮೇಲೆ ಬೀಳಲು, ಪ್ರತಿಕ್ಷಣಕ್ಕೂ ದುರ್ಬಲವಾಗುತ್ತ ನಡೆದಿದ್ದ ಶತ್ರುಪಕ್ಷವು, ಕಾಳಗದ ಕಣದಿಂದ ಕಾಲ್ದೆಗೆಯಿತು. ಸಮ್ರಾಟನ ಸೈನಿಕರು ಮೂರು ಮೈಲುಗಳ ವರೆಗೆ ಅವರನ್ನು ಬೆನ್ನಟ್ಟಿ, ವಿಜಯಸಿಂಹ ಹಾಗು ವೀರಸಿಂಹ ಎಂಬ ಇಬ್ಬರು ಸಂಸ್ಥಾನಿಕರನ್ನು ಸೆರೆಹಿಡಿದರು. ಉಳಿದವರು ದಾರಿ ಸಿಕ್ಕತ್ತ ಓಡಿದರು.

ಈ ಪ್ರಕಾರ ಸಮ್ರಾಟನ ಸೈನ್ಯವು ಜಯವನ್ನು ಸಂಪಾದಿಸಿ, ಜಯಭೇರಿಯನ್ನು ಹೊಡೆಯುತ್ತ ದುರ್ಗದ ಬಾಗಿಲ ಬಳಿಗೆ ಬಂದಿತು. ತನ್ನ ಸೈನಿಕರ ಕರಾಮತಿಯನ್ನು ನೋಡುತ್ತ, ದುರ್ಗದ ಮುಖ್ಯ ಕೊತ್ತಳದ ಮೇಲೆ ಕುಳಿತುಕೊಂಡಿದ್ದ ಸಮ್ರಾಟನು ಭಂಡಾರೀರಾಜನೊಡನೆ ಕೆಳಗಿಳಿದು, ಸೇನಾಪತಿಯನ್ನು ಗೌರವಿಸಿ ಆತನನ್ನು ಒಳಗೆ ಕರೆದುಕೊಂಡನು. ಸಮ್ರಾಟನ ಸೈನ್ಯವು ಅಪಾರವಿತ್ತು; ಅಷ್ಟೆಲ್ಲ ಸೈನ್ಯವು ದುರ್ಗದಲ್ಲಿ ವ್ಯವಸ್ಥೆಯಿಂದ ಬೀಡುಬಿಡುವದು ಅಶಕ್ಯವಿದ್ದದರಿಂದ, ದುರ್ಗದ ಕೆಳಭಾಗದಲ್ಲಿಯೇ ಸೈನ್ಯದ ತಳವೂರಲಿಕ್ಕೆ ಅಪ್ಪಣೆ ಮಾಡಿದನು.

ಮರುದಿನ ಸಮ್ರಾಟನು ಸೈನಿಕರಿಗೆ ಪಾರಿತೋಷಕಗಳನ್ನು ಕೊಟ್ಟನು.

ಕೀರ್ತಿಸಿಂಹನ ಭಂಡಾರದಲ್ಲಿ ಯುದ್ಧಸೌರಣೆಯು ಮೂಲಕವಾಗಿ ಅಗಣಿತದ್ರವ್ಯ ವಿತ್ತು. ಯೋಗ್ಯ ಸಮಯಕ್ಕೆ ದೊರೆತ ಈ ನಿಧಿಯಿಂದ ಸಮ್ರಾಟನಿಗೆ ಹೇಳ ಕೂಡದಷ್ಟು ಸಂತೋಷವಾಯಿತು. ಬಳಿಕ ಸಮ್ರಾಟನು ಕೀರ್ತಿಸಿಂಹನ ಅಂತಃ ಪುರದ ಸ್ತ್ರೀಯರನ್ನು ಒಳ್ಳೇ ಗೌರವದಿಂದ ಕಂಡು, ಅವರ ಇಚ್ಛೆಯಂತೆ ಅವ ರನ್ನು ಅವರವರ ಅಪೇಕ್ಷಿತ ಸ್ಥಳಗಳಿಗೆ ಸುರಕ್ಷಿತವಾಗಿ ಮುಟ್ಟಿಸಿದನು. ಸಮ್ರಾ ಟನಿಂದಾಗಲಿ, ಆತನ ಸೈನಿಕರಿಂದಾಗಲಿ ಯಾವ ಬಗೆಯ ಅಪಮಾನವೂ ಅವರಿಗೆ ಸಂಭವಿಸಲಿಲ್ಲವಾದುದರಿಂದ, ಆ ಸ್ತ್ರೀಯರು ತಮಗೆ ಶತ್ರುವಾದರೂ, ಸಮ್ರಾಟನ ದೊಡ್ಡ ಗುಣವನ್ನು ಹೊಗಳಿದರು. ಯುದ್ಧದಲ್ಲಿ ಸೆರೆ ಸಿಕ್ಕ ಆ ಇಬ್ಬರು ಸಂಸ್ಥಾ ನಿಕರು ಸಮ್ರಾಟನಿಗೆ ಶರಣು ಬಂದರು. ಅವರು ಸಮ್ರಾಟನ ವಿಷಯಕ್ಕಿದ್ದ ಶತ್ರುಭಾವವನ್ನು ಪೂರ್ಣವಾಗಿ ಮರೆತು ಬಿಟ್ಟರು. ಸಮ್ರಾಟನಾದರೂ ಅವರನ್ನು ಸೆರೆಯಿಂದ ಮುಕ್ತರನ್ನಾಗ ಮಾಡಿ ಅವರನ್ನು ಸ್ನೇಹಿತರಂತೆ ಕಂಡನು.

ಈ ಪ್ರಕಾರ ಸಮ್ರಾಟನು ಕಿರುಮಂಜಿಯ ದುರ್ಗದಲ್ಲಿ ವಿಜಯವನ್ನು ಸಂಪಾದಿಸಿ, ಪದ್ಮೆಯ ಬಂಧಮುಕ್ತತೆಯನ್ನು ಮಾಡಿ, ವೃದ್ಧ ಲಕ್ಷ್ಮಣದಾಸನಿಗೆ ಹೇಳಿ ಕಳುಹಿದನು. ಅಪ್ಪಾಸರದಲ್ಲಿ ಸರ್ವದಾ ಮಗಳ ಚಿಂತೆಯಿಂದ ದಹಿಸು ತ್ತಿದ್ದ ವೃದ್ಧ ಲಕ್ಷ್ಮಣದಾಸನು ಈ ಅಮೃತತುಲ್ಯ ಸುದ್ದಿಯನ್ನು ಕೇಳಿ ಚೇತರಿಸಿ ಕೊಂಡು, ತನ್ನ ಪರಿವಾರದೊಡನೆ ಕಿರುಮಂಜಿಯ ದುರ್ಗಕ್ಕೆ ಹೊರಟನು. ತಾನು ನೀಚನಾದ ಕೀರ್ತಿಸಿಂಹನ ದವಡೆಯೊಳಗಿಂದ ಪಾರಾದದ್ದಕ್ಕೆ ಪದ್ಮೆಗಾದರೂ ಪರಮಾನಂದವಾಗಿತ್ತು. ತಾನಿದ್ದಲ್ಲಿಗೇ ತನ್ನ ತಂದೆಯು ಬರುವನೆಂಬದನ್ನು ಕೇಳಿಯಂತೂ ಅವಳ ಆನಂದವು ವರ್ಣನೆಯನ್ನು ಮೀರಿತು.

ಯುದ್ಧದಲ್ಲಿ ಕತ್ತರಿಸಲ್ಪಟ್ಟ ದಿಂಡ-ಮುಂಡಗಳನ್ನು ಹುಡು-ಹುಡುಕಿ ಸಂಸ್ಕರಿಸಿದ್ದರಿಂದ, ಎಲ್ಲ ಕಡೆಗೂ ಸ್ವಚ್ಛತೆಯು ದೃಗ್ಗೋಚರಸುತ್ತಿತ್ತು. ಆದರೂ ಅರಮನೆಯಲ್ಲಿ ದುರ್ಗಂಧವು ಸುಳಿದಾಡುತ್ತಲೇ ಇದ್ದದರಿಂದ, ಅದಕ್ಕೆ ಕಾರ ಣವೇನೆಂದು ಸಮ್ರಾಟನು ಯೋಚಿಸುತ್ತಿರುವಷ್ಟರಲ್ಲಿ ಒಬ್ಬ ಚಾರನು ಒಂದು ಅರಮನೆಯ ಚೋರಮಾರ್ಗದಲ್ಲಿ ಎಷ್ಟೋ ಜನ ದಂಡಾಳುಗಳು ಮಡಿದಿದ್ದು, ಅವರ ದುರ್ಗಂಧವು ಅರಣ್ಯದಲ್ಲೆಲ್ಲ ಪಸರಿಸಿರುತ್ತದೆಂದು ಹೇಳಿದನು; ಆದರೆ ಗುಹೆಯ ಕಾವಲುಗಾರರ ಭಯಂಕರ ಕೃತ್ಯದಿಂದ ತಮ್ಮವರೇ ಇಂಥ ವಿಪತ್ತಿಗೆ ಗುರಿಯಾಗಿ ಪ್ರಾಣ ಕೊಟ್ಟಿರುವರೆಂದು ಪಾಪ! ಸಮ್ರಾಟನಿಗೆ ಹೇಗೆ ತಿಳಿಯ ಬೇಕು? ಅವನು ಗುಹೆಯನ್ನು ಸ್ವಚ್ಛ ಮಾಡಿಸಲಿಕ್ಕೆ ಸೇನಾಪತಿಗೆ ಅಪ್ಪಣೆಮಾಡಿ ದನು. ಆಗ ಸೇನಾಪತಿಯು ಒಳಗೆ ಸತ್ತ ದಂಡಾಳುಗಳು ತಮ್ಮವರೇ ಎಂದು ನಿರ್ಧರಿಸಿ, ಅವರಿಗೆ ಯೋಗ್ಯ ಸಂಸ್ಕಾರಗಳನ್ನು ಮಾಡಿಸಿ, ಸಮಗ್ರ ಚೋರ

ಮಾರ್ಗವನ್ನು ಕಟ್ಟು ಮಾಡಿಬಿಟ್ಟನು.

ಯುದ್ಧದಲ್ಲಿ ಸಮ್ರಾಟನ ದಂಡು ಏನಿಲ್ಲೆಂದರೂ ಒಂದು ಕಾಲುಭಾಗದಷ್ಟು ನಾಶವಾಗಿತ್ತು. ಇನ್ನುಳಿದ ಮುಕ್ಕಾಲುಭಾಗವು ಅನಾರೋಗ್ಯದ ಬಾಧೆಯಿಂದ ಬಳಲಬಾರದೆಂದು ಸಮ್ರಾಟನು ಬಹು ದಕ್ಷತೆಯನ್ನು ವಹಿಸಿ, ಪ್ರತಿನಿತ್ಯ ಸೈನಿಕರ ಯೋಗಕ್ಷೇಮವನ್ನು ತಕೊಳ್ಳುತ್ತಿದ್ದನು. ಆತನ ವ್ಯವಸ್ಥೆಯಿಂದ ಸೈನ್ಯವು ವಿವಿಧ ರೋಗಗಳ ಎಳತಕ್ಕೆ ಸಿಗದೆ ಸುರಕ್ಷಿತವಾಗಿ ಉಳಿಯಿತು. ಕಿರುಮುಂಜೆಯ ದುರ್ಗದಲ್ಲಿ ತನ್ನೊಬ್ಬ ಸರದಾರನನ್ನು ನೇಮಿಸಿ, ತಾನು ಮತ್ತೆ ಮಲೆತು ನಿಂತ ಗುರ್ಜರ ಸಂಸ್ಥಾನಿಕರ ಸಮಾಚಾರಕ್ಕೆ ತೆರಳಬೇಕೆಂದು ಸಮ್ರಾಟನು ಯೋಚಿಸಿದನು; ಆದರೆ ಅಷ್ಟರಲ್ಲಿ ವೃದ್ಧ ಲಕ್ಷ್ಮಣದಾಸನು ಸಪರಿವಾರವಾಗಿ ದುರ್ಗದ ಬಳಿಗೆ ಬಂದದ್ದರಿಂದ, ಸಮ್ರಾಟನು ಅವನನ್ನು ಅತ್ಯಾದರದಿಂದ ಕೋಟೆಯೊಳಕ್ಕೆ ಬರಮಾಡಿಕೊಂಡನು. ಆ ಮುದಿ ಅರಸನು ತನ್ನ ಪ್ರೀತಿಯ ಮಗಳನ್ನು ಕಣ್ಣುತುಂಬಾ ನೋಡಿ ಆನಂದಾಶ್ರುಗಳನ್ನು ದುರಿಸಿದನು.

ಮಕ್ಕಳ ಮೋಹವು ಲೋಕದಲ್ಲಿ ಮೀರಲಶಕ್ಯವಾದ ಪಾಶವೆಂದು ಹೇಳಬಹುದು; ಅದರಲ್ಲಿಯೂ ಏಕಪುತ್ರ ವಿಷಯದಲ್ಲಿ ಅದರ ಮೋಹವು ಒಂದು ಹೆಜ್ಜೆಯನ್ನು ಮುಂದಿಡುವದು. ಇಂಥದರಲ್ಲಿ ವೃದ್ಧಾವಸ್ಥೆಯು ಬಂದಿದ್ದರಂತೂ ಆ ಮೋಹಕ್ಕೆ ಮೇರೆಯುಳಿಯುವದಿಲ್ಲ. ಇಂಥ ಬಲವಾದ ಆ ಮೋಹಪಾಶದಲ್ಲಿ ನಮ್ಮ ವೃದ್ಧ ಲಕ್ಷ್ಮಣದಾಸನು ಸಿಕ್ಕಿದ್ದನು. ಅವನಿಗೆ ಪದ್ಮೆಯೊಬ್ಬಳೇ ಮಗಳೆಂಬದು ವಾಚಕರ ಸ್ಮರಣೆಯಲ್ಲಿರಬಹುದು. ಆ ಮಗಳನ್ನು ಒಬ್ಬ ಧೀರೋದಾತ್ತ ಪುರುಷನಿಗೆ ಧಾರೆಯೆರೆದು ಕೊಡಬೇಕೆಂದು ಅವನ ಆಶೆ, ಆದರೆ ಗುರ್ಜರ ಭೂಪ್ರದೇಶದಲ್ಲಿ ಅವನಿಗೆ ಅಂಥ ಧೀರೋದಾತ್ತ ಪುರುಷನಾರೂ ಸಿಗದ್ದರಿಂದ, ಮಗಳ ವಿವಾಹವನ್ನು ಮುಂದಮುಂದಕ್ಕೆ ದೂಡಹತ್ತಿದ್ದನು. ಹೀಗಿರಲು, ದುರ್ಜನರ ದುರಾಗ್ರಹದಿಂದ ಮಗಳ ವಿಯೋಗವೇ ಅವನಿಗುಂಟಾದದ್ದರಿಂದ, ಅವನು ಹೃದ್ರೋಗವನ್ನು ಹಚ್ಚಿಕೊಂಡು ಕ್ಷೀಣನಾಗುತ್ತಿದ್ದನು. ಇಂಥ ಹೊತ್ತಿನಲ್ಲಿ ಸಮ್ರಾಟ ಭೂವಡನು ಆತನಿಗೆ ಅಭಿವಚನ ಕೊಟ್ಟು, ಇಲ್ಲಿಯವರೆಗೆ ಅವನ ಪ್ರಾಣ ಬದುಕಿಸಿದ್ದನು. ಈಗ ಸಮ್ರಾಟನು ತನ್ನ ಅಭಯವಚನವನ್ನು ಸತ್ಯವಾಗಮಾಡಿ ತೋರಿಸಿದ್ದರಿಂದ, ಆ ಸತ್ವಸ್ಥ ಲಕ್ಷ್ಮಣದಾಸನು ಸಮ್ರಾಟನ ವಿಷಯವಾಗಿ ಅತ್ಯಂತ ಕೃತಜ್ಞನಾಗಿದ್ದನು. ಅವನ ಮನಸ್ಸಿನಲ್ಲಿ ಪದ್ಮೆಯನ್ನು ಸಮ್ರಾಟನಿಗೇ ಅರ್ಪಿಸಿ ಬಿಡಬೇಕೆಂಬ ಕುತೂಹಲವುಂಟಾಯಿತು. ಹೀಗಿರಲು, ಅವನು ಸಮ್ರಾಟನ ಭೆಟ್ಟಿಗೆ ಬರುವ ಮೊದಲು ತನ್ನ ಗುರುಗಳಾದ ನಿರಂಜನ ಯೋಗಿಗಳ ದರುಶನಕ್ಕೆ ಹೋಗಿದ್ದನು. ಯೋಗಿಗಳು ವೃದ್ಧ ಲಕ್ಷ್ಮಣದಾಸನನ್ನು

ಸನ್ಮಾನಿಸಿ, ನುಡಿದರೇನಂದರೆ:—"ಈಗ ನೀನು ಸಮ್ರಾಟನ ಭೆಟ್ಟಿಗೆ ಹೊರಟಿರು ವಿಯಷ್ಟೇ; ಯಾವನ ಪುಣ್ಯಪ್ರತಾಪದಿಂದ ನಿನ್ನ ಮಗಳು ದುರ್ಜನರ ದವಡೆ ಯಲ್ಲಿ ಸಿಗದೆ ಪರಿಶುದ್ಧವಾಗಿ ಉಳಿದಿರುವಳೋ, ಆತನಿಗೇ ನಿನ್ನ ಮಗಳನ್ನು ಸಮರ್ಪಿಸು. ನಿನ್ನ ಮಗಳ ಭಾಗ್ಯೋದಯವಾಗಿರುವದರಿಂದ, ಅವಳು ಸಮ್ರಾ ಟನ ಪಾಣಿಗ್ರಹಣ ಮಾಡಿ ಅಪಾರ ಸೌಖ್ಯವನ್ನು ಹೊಂದುವಳು."

ಈ ರೀತಿಯಾಗಿ ಗುರುಗಳು ಹೇಳಿದ್ದಕ್ಕೂ, ತನ್ನ ಮನಸ್ಸಿನಲ್ಲಾದರೂ ಅದರಂತೆ ಇರುವದಕ್ಕೂ ಮೇಳು ಬಿದ್ದದರಿಂದ, ಆ ವೃದ್ಧನು ತುಂಬಾ ಆನಂದ ಪಟ್ಟು ಗುರುಗಳ ಅಪ್ಪಣೆ ಪಡೆದು, ಕಿರುಮಂಜಿಯ ದುರ್ಗಕ್ಕೆ ಬಂದಿದ್ದನು; ಆದರೆ ಸಮ್ರಾಟನ ಮುಂದೆ ಆ ಪ್ರಸ್ತಾಪವನ್ನು ತೆಗೆಯಲಿಕ್ಕೆ ಆತನು ಸಮಯ ವನ್ನು ನಿರೀಕ್ಷಿಸುತ್ತಿದ್ದನು. ಹೀಗಿರಲು ಒಂದು ದಿನ ಸಮ್ರಾಟನು ಓಲಗದಲ್ಲಿ ಕುಳಿತುಕೊಂಡಿದ್ದನು. ಭಂಡಾರೀ ರಾಜನು ಅವನ ಬಳಿಯಲ್ಲಿ ತನಗುಚಿತವಾದ ಆಸನದಲ್ಲಿ ಕುಳಿತುಕೊಂಡಿದ್ದನು. ಉಳಿದ ಸೇನಾಪತಿ ಮೊದಲಾದವರು ತಮ ತಮಗುಚಿತವಾದ ಆಸನದ ಮೇಲೆ ಕುಳಿತುಕೊಂಡಿದ್ದರು. ಸಭೆಯಲ್ಲಿ ಯಾವ ಮಹತ್ವದ ಮಾತು ಹೊರಡುವದೋ! ಎಂದು ಸಭಿಕರು ಎದುರು ನೋಡುತ್ತಿ ದ್ದರು. ಸಭೆಯು ನಿಶ್ಶಬ್ದವಾಗಿತ್ತು. ವೃದ್ಧ ಲಕ್ಷ್ಮಣದಾಸನು ಅಜಯನೊಡನೆ ಸಭೆಯನ್ನು ಪ್ರವೇಶಿಸಿದನು. ಸಮ್ರಾಟನು ಆತನನ್ನು ಗೌರವಿಸಿ ಕುಳ್ಳಿರಿಸಿಕೊಂ ಡನು. ಆ ಕೂಡಲೆ ಆ ಮುದುಕನು ಅತ್ಯಂತ ಪ್ರೇಮದಿಂದ ಸಮ್ರಾಟನನ್ನು ಕುರಿತು ನುಡಿದನೇನಂದರೆ:—"ಸಮ್ರಾಟನೇ, ನೀನು ಅತ್ಯಂತ ಭಾಗ್ಯಶಾಲಿಯಿ ರುವೆ! ಯಾಕಂದರೆ, ಆಡಿದಂತೆ ಕಾರ್ಯ ಮಾಡಿ ತೋರಿಸುವದು ಭಾಗ್ಯಶಾಲಿ ಗಳ ಹೊರತು ಅನ್ಯರಿಗೆ ಶಕ್ಯವಾಗದು. ಪದ್ಮೆಯನ್ನು ಕನ್ಯಾವಸ್ಥೆಯಿಂದ ಉಳಿಸಿ ನನಗೊಪ್ಪಿಸುವದಕ್ಕೆ ನೀನು ವಚನ ಕೊಟ್ಟಂತೆ ಕಾರ್ಯವ ಮಾಡಿದ್ದನ್ನು ನೋಡಿದರೆ, ನಿನ್ನ ಪುಣ್ಯಪ್ರಭಾವವು ಎಷ್ಟಿರುವದೆಂಬದು ಸಹಜವಾಗಿ ವ್ಯಕ್ತವಾ ಗುವದು. ಇರಲಿ. ಮಗಳ ವಿಯೋಗದಿಂದ ಮರಣೋನ್ಮುಖನಾದ ನನಗೆ ಜೀವದಾನ ಮಾಡಿ, ನೀನು ಅಖಂಡ ಕೀರ್ತಿಯನ್ನು ಪಡೆದಿರುವೆ. ಪುಣ್ಯಪ್ರತಾಪಿ ಯಾದ ನಿನಗೆ ನಾನು ಇನ್ನೊಂದು ಸಂಗತಿಯನ್ನು ವಿಜ್ಞಾಪಿಸಿಕೊಳ್ಳಬೇಕೆಂದು ಈ ಸಭೆಗೆ ಬಂದಿದ್ದೇನೆ. ಅದೇನಂದರೆ: ಯಾವ ನಿನ್ನ ಭುಜಬಲ ಪರಾಕ್ರಮ ದಿಂದ ನನ್ನ ಮಗಳು ಭಯಂಕರವಾದ ವಿಪತ್ತಿನಿಂದ ಇಂದಿನ ಸುದಿನಗಳನ್ನು ಕಂಡಳೋ, ಆ ನಿನ್ನ ವೈಭವಕ್ಕೆ ಅವಳು ಶೋಭಿಸುವಳು. ನಿನಗೆ ಪದ್ಮೆಯನ್ನ ಲ್ಲದೆ, ನನ್ನ ರಾಜ್ಯವನ್ನೂ ಅರ್ಪಿಸಿರುವೆನು. ಆದ್ದರಿಂದ ನೀನು ಪದ್ಮೆಯ ಪಾಣಿ ಗ್ರಹಣ ಮಾಡಿ ನನ್ನ ರಾಜ್ಯವನ್ನು ನಿನ್ನ ವಶಕ್ಕೆ ತೆಗೆದುಕೋ; ನಾನು ಹೇಗೂ

ವೃದ್ಧನಾಗಿರುವೆನು. ನನ್ನ ಗುರುಗಳಾದ ನಿರಂಜನ ಯೋಗಿಗಳ ಆಶ್ರಮದಲ್ಲಿದ್ದು, ಜನ್ಮಸಾರ್ಥಕ್ಯವನ್ನು ಮಾಡಿಕೊಳ್ಳುವೆನು.''

ಈ ಮೇರೆಗೆ ವೃದ್ಧಲಕ್ಷ್ಮಣದಾಸನು ಮಾತನಾಡಿ ಸುಮ್ಮನಾಗಲು, ಸಭಿಕರಿಗೆ ಅತ್ಯಂತಾನಂದವಾಯಿತು. ಎಲ್ಲರೂ ವೃದ್ಧ ಲಕ್ಷ್ಮಣದಾಸನ ಮಾತಿಗೆ ತಮ್ಮ ಆನಂದವನ್ನು ಪ್ರದರ್ಶಿಸಿದರು. ಬಳಿಯಲ್ಲಿ ಕುಳಿತ ಭಂಡಾರೀ ರಾಜನಿಗೂ ತುಂಬಾ ಸಂತೋಷವಾಯಿತು. ಸಮ್ರಾಟನು ಮಾತ್ರ ಮೌನವಾಗಿ ಕುಳಿತು ಮನಸ್ಸಿನಲ್ಲಿಯೇ ಆಲೋಚಿಸಿದನೇನಂದರೆ:—''ಲಕ್ಷ್ಮಣದಾಸನ ಮನಸ್ಸಿನಲ್ಲಿ ಬಂದ ಈ ವಿಚಾರವು ನನ್ನ ಕೆಲಸಕ್ಕೆ ತುಂಬಾ ಸಹಾಯಕಾರಿಯಾಗುವದು. ಯಾಕಂದರೆ, ಈತನು ಕೊಡುವ ಕನ್ನಿಕೆಯನ್ನು ಪರಿಗ್ರಹಿಸುವದರಿಂದ, ಗುರ್ಜರ ಭೂಮಿಯು ನನಗೆ ಪರಕೀಯವಾಗದೆ ಇಲ್ಲಿ ನನ್ನ ಸಾಮ್ರಾಜ್ಯವು ಸ್ಥಿರವಾಗುವದು. ಇಲ್ಲಿಯ ಜನರಿಗೂ ನನ್ನ ವಿಷಯವಾಗಿ ಅಭಿಮಾನವು ಬೆಳೆಯುವದು.''

ಹೀಗೆ ಸಮ್ರಾಟನು ಮನಸ್ಸಿನಲ್ಲಿಯೇ ಯೋಚಿಸುತ್ತಿರಲು, ಭಂಡಾರೀ ರಾಜನು ಸಮ್ರಾಟನನ್ನು ಕುರಿತು:—''ಸಮ್ರಾಟನೇ, ಯಾಕೆ? ವೃದ್ಧ ಲಕ್ಷ್ಮಣದಾಸರ ಮಾತಿಗೆ ನಿನ್ನ ಅಭಿಪ್ರಾಯವೇನೆಂಬದನ್ನು ತಿಳುಹಿಸಲಿಲ್ಲವಲ್ಲ? ಸಮ್ರಾಟನು ಏನು ಉತ್ತರ ಕೊಡುವನೋ? ಎಂದು ಸಭಿಕರು ಉತ್ಸುಕರಾಗಿರುವರು. ನಾನಂತೂ ವೃದ್ಧ ಲಕ್ಷ್ಮಣದಾಸರೊಡನೆ ನಿನ್ನ ಸಂಬಂಧವು ಬೆಳೆಯಬೇಕೆಂದು ಮನಃಪೂರ್ವಕವಾಗಿ ಇಚ್ಛಿಸುತ್ತೇನೆ. ಯುದ್ಧವು ಮುಗಿದ ಬಳಿಕ ನಾನೇ ಈ ಪ್ರಸ್ತಾಪವನ್ನು ವೃದ್ಧ ಲಕ್ಷ್ಮಣದಾಸರೆದುರಿಗೆ ತೆಗೆಯಬೇಕೆಂದು ಮಾಡಿದ್ದೆನು; ಆದರೆ ಅನಾಯಾಸವಾಗಿ ಅವರೇ ಈ ಸಂಗತಿಯನ್ನು ನಿಮ್ಮ ಮುಂದೆ ಇಟ್ಟದ್ದರಿಂದ ನನಗೆ ಪರಮಾನಂದವಾಗಿದೆ. ಅವಶ್ಯವಾಗಿ ಪಾಣಿಗ್ರಹಣ ಮಹೋತ್ಸವವನ್ನು ಈ ದುರ್ಗದಲ್ಲಿಯೇ ಜರುಗಿಸಿ ನಮಗೆ ಸಂತೋಷವನ್ನುಂಟು ಮಾಡಬೇಕು, ಎಂದು ನುಡಿದನು. ಭಂಡಾರೀ ರಾಜನ ಈ ಮಾತುಗಳಿಗೆ ಸಮ್ರಾಟನು ಒಪ್ಪಿಕೊಂಡನು. ಕಿರುಮಂಜಿಯ ದುರ್ಗದಲ್ಲಿಯೇ ಪಾಣಿಗ್ರಹಣ ಮಹೋತ್ಸವವು ನೆರವೇರಬೇಕೆಂದು ಗೊತ್ತಾಯಿತು. ಸಮ್ರಾಟನಲ್ಲಿಯ ಕ್ರಿಯೆಯು ಅತ್ಯಂತ ಪರಿಶುದ್ಧವಾಗಿರುವದರಿಂದಲೇ ಆತನನ್ನು ಜಯಲಕ್ಷ್ಮಿಯು ವರಿಸಿದಳಲ್ಲದೆ, ಗುರ್ಜರ ಭೂಪುತ್ರರಿಗೆ ಅಪ್ರಾಪ್ಯಳಾದ ಪದ್ಮೆಯು ಕೂಡಾ ಅವನಿಗೇ ಮಾಲೆಯನ್ನು ಹಾಕುವಳಾದ್ದರಿಂದ, ಲೋಕದಲ್ಲಿ 'ಕ್ರಿಯಾತಾರಿ-ಕ್ರಿಯಾಮಾರಿ' ಎಂಬ ನಾಣ್ಣುಡಿಯುಂಟಾಗಿದೆಯೆಂದು ಸಭಿಕರು ಮಾತನಾಡಿಕೊಂಡರು.

———

## ೨೩ ಉಪಸಂಹಾರ.

ರಾತ್ರಿಯು ಕಳೆದ ನಂತರ ಹಗಲು ಪ್ರಾಪ್ತವಾಗುವಂತೆ, ದುಃಖದ ದಿವಸಗಳು ಕಳೆದ ಬಳಿಕ ಸುಖದ ದಿವಸಗಳು ಬರುವವೆಂಬದು ನಿಶ್ಚಿತವಾದದ್ದು; ಎಷ್ಟೋ ಜನರು ದುಃಖದ ದಿವಸಗಳನ್ನು ಕಳೆಯುವಾಗ ಸಹನಶೀಲತೆಯಿಲ್ಲದೆ, ಇಲ್ಲದ ಅಪಾಯಗಳನ್ನು ತಂದುಕೊಂಡು ತಮ್ಮ ಭಾವೀ ಸೌಖ್ಯವನ್ನು ಮಣ್ಣುಪಾಲು ಮಾಡಿಕೊಳ್ಳುವರು; ಆದರೆ ಸಹನಶೀಲತೆಯುಳ್ಳ ಕೆಲ ಜನರು ಈಶ್ವರೀಸತ್ತೆಯಲ್ಲಿ ನಂಬಿಗೆಯನ್ನಿಟ್ಟು, ದುಃಖದ ದಿವಸಗಳನ್ನು ಕಳೆದು ತಮ್ಮ ಸತ್ವದ ಬಲದಿಂದ ಸುಖದ ದಿವಸಗಳನ್ನು ಕಾಣುವರು. ಅದರಂತೆ ಪ್ರಸ್ತುತದಲ್ಲಿ ರೂಪಸುಂದರಿಯು ಉರ್ಫ ಪದ್ಮೆಯು ಬಹು ದುಃಖಗಳನ್ನು ಅನುಭವಿಸಿ ತನ್ನ ಸತ್ವದಿಂದಲೇ ಸುದಿನಗಳನ್ನು ಕಂಡಳು.

ಇಂದು ರೂಪಸುಂದರಿಯ ವಿವಾಹ; ಕಿರುಮಂಜೆಯ ದುರ್ಗವು ಅಸಂಖ್ಯ ತಳಿರು- ತೋರಣಗಳಿಂದ ಸುಮನೋಹರವಾಗಿ ಒಪ್ಪುತ್ತಲಿದೆ. ಅಸಂಖ್ಯಜನ ರಾಜರೂ ಸಂಸ್ಥಾನಿಕರೂ ತಮ್ಮ ತಮ್ಮ ವೈಭವಗಳೊಡನೆ ದುರ್ಗದ ಕೆಳಗಡೆಯಲ್ಲಿ ತಳವನ್ನು ಊರಿದ್ದರಿಂದ, ಅದೊಂದು ಸುಂದರವಾದ ರಾಜಧಾನಿಯಂತೆ ಪರಿಶೋಭಿಸುತಲಿದೆ; ಹೀಗೆ ಕಿರುಮಂಜೆಯ ಸೌಂದರ್ಯವು ಹೆಚ್ಚುತ್ತಿರಲು, ಸಮ್ರಾಟನು ತನ್ನ ವೈಭವಾನುಸಾರವಾಗಿ ಗೊತ್ತಾದ ಮುಹೂರ್ತಕ್ಕೆ ಪದ್ಮೆಯ ಪಾಣಿಗ್ರಹಣವನ್ನು ಮಾಡಿದನು. ಗುರ್ಜರ ರಾಷ್ಟ್ರದೇವತೆಯೇ ಮೂರ್ತಿಮತ್ತಾಗಿ ಬಂದು ಸಮ್ರಾಟನಿಗೆ ಮಾಲೆ ಹಾಕುವಂತೆ ರೂಪಸುಂದರಿಯು(ಪದ್ಮೆಯು) ಸಮ್ರಾಟನಿಗೆ ಮಾಲೆ ಹಾಕುವಾಗ ಪರಿಶೋಭಿಸಿದಳು!! ವೃದ್ಧ ಲಕ್ಷ್ಮಣದಾಸನು ಆನಂದದಿಂದ ನಲಿದಾಡಿದನು. ಪದ್ಮೆಯು ಸಮ್ರಾಟನ ರಾಣಿಯಾಗಿ ನಿರಂಜನ ಯೋಗಿವರ್ಯರ ಭವಿಷ್ಯವನ್ನು ಸ್ಮರಿಸಿ, ಅವರನ್ನು ಮನದಲ್ಲಿಯೇ ಶತಶಃ ಅಭಿವಂದಿಸಿದಳು.

ಸಮ್ರಾಟನ ಈ ಮಂಗಲ ಮಹೋತ್ಸವವು ಅಪೂರ್ವವಾಯಿತು. ಆತನ ಭುಜಪರಾಕ್ರಮದ ಕೀರ್ತಿಯು ಗುರ್ಜರ ರಾಷ್ಟ್ರವನ್ನೆಲ್ಲ ವ್ಯಾಪಿಸಿದ್ದರಿಂದ, ಆತನಿಗೆ ಎದುರಾಗಿ ನಿಲ್ಲುವ ಧೈರ್ಯವು ಯಾರಲ್ಲಿಯೂ ಉಳಿದಿದ್ದಿಲ್ಲ. ಸಮ್ರಾಟನ ಈ ಮಂಗಲ ಮಹೋತ್ಸವದ ಆಮಂತ್ರಣ ಪತ್ರ ಬರುವದೊಂದೇ ತಡ; ಬಡಬಡ ಎಲ್ಲ ಸಂಸ್ಥಾನಿಕರು ಕಿರುಮಂಜೆಯ ದುರ್ಗಕ್ಕೆ ಸಮ್ರಾಟನನ್ನು ಕಾಣಲು ಬಂದಿದ್ದರು. ಪಾಣಿಗ್ರಹಣದ ಮರುದಿನ ಸಮ್ರಾಟನು ದೊಡ್ಡದೊಂದು ಸಭೆಯನ್ನು ನೆರೆಯಿಸಿದನು. ಕರ್ನಾಟಕದ ಸಮಸ್ತ ಸಾಮಂತ ರಾಜರೂ ಗುರ್ಜರ

ರಾಷ್ಟ್ರದ ಸಮಸ್ತ ಸಂಸ್ಥಾನಿಕರೂ ಸಭೆಯನ್ನಲಂಕರಿಸಿದರು. ಗುರ್ಜರ ಸಂಸ್ಥಾನಿಕರು ಸಮ್ರಾಟನ ಸಾರ್ವಭೌಮ ಪ್ರಭುತ್ವವನ್ನು ಅಂಗೀಕರಿಸಿ, ವಂದಿಗಳು ಪರಾಕನ್ನು ಹೇಳುತ್ತಿರಲು, ಒಬ್ಬೊಬ್ಬರೇ ಮುಂದರಿದು ಸಮ್ರಾಟನಿಗೆ ಕಾಣಿಕೆಗಳನ್ನು ಸಮರ್ಪಿಸಿದರು. ಗುರ್ಜರ ರಾಜರು ಕಾಣಿಕೆಗಳನ್ನು ಸಮರ್ಪಿಸುವಾಗ ಕರ್ನಾಟಕ ಸಾಮಂತರು ತಮ್ಮ ಪ್ರಭುವಿನ ವಿಷಯವಾಗಿ ವಿಲಕ್ಷಣ ಅಭಿಮಾನವನ್ನು ತಾಳಿದ್ದರು! ಕಿರುಮಂಜೆಯ ದುರ್ಗದ ವಿಷಯದಿಂದ ಸಮಸ್ತ ಗುರ್ಜರ ಸಂಸ್ಥಾನಿಕರೂ ಹಣ್ಣಿಗೆ ಬರುವರೆಂಬ ತನ್ನ ತರ್ಕವು ನಿಜವಾದ್ದರಿಂದ, ಸಮ್ರಾಟನಿಗೆ ಅಪರಿಮಿತ ಆನಂದವಾಗಿ, ಆತನು ತನ್ನ ಪೂರ್ವದ ಸಾಮಂತರನ್ನು ಬಹು ಗಾಂಭೀರ್ಯದಿಂದ ನೋಡುತ್ತಿದ್ದನು.

ಸಮಸ್ತ ಸಾಮಂತ ರಾಜರು ಕಾಣಿಕೆಗಳನ್ನು ಅರ್ಪಿಸುವಾಗ ಸಮ್ರಾಟನ ಜೊತೆಗೆ ಸಿಂಹಾಸನದಲ್ಲಿ ರೂಪಸುಂದರಿಯೂ ಕುಳಿತಿದ್ದಳು. ಈ ಮೊದಲು ಆಕೆಯ ಪಾಣಿಗ್ರಹಣಕ್ಕೆ ಹೊಂಚು ಹಾಕುತ್ತಿದ್ದ ಎಷ್ಟೋ ಜನ ರಾಜರು ಈಗ ಆಕೆಯ ಎದುರಿಗೆ ತಲೆಬಾಗಬೇಕಾದ್ದರಿಂದ, ತಮ್ಮ ಮನಸ್ಸಿನಲ್ಲಿ ಬಹಳವಾಗಿ ನಾಚಿಕೊಂಡರು. ರೂಪಸುಂದರಿಯು ಸಮ್ರಾಜ್ಞಿಯಾದದ್ದಕ್ಕೆ ಅವರು ಆಕೆಯ ಪುಣ್ಯ ಪ್ರಭಾವವನ್ನು ಕೊಂಡಾಡಿದರು.

ಈ ಮೇರೆಗೆ ಸಭೆಯಲ್ಲಿ ಅಖಿಲ ಸಾಮಂತ ರಾಜರುಗಳ ಕಿರೀಟಕಾಂತಿಯಿಂದ ಸಮ್ರಾಟನ ಸಿಂಹಾಸನವು ಬೆಳಗುತ್ತಿರಲು, ಸಭೆಯಲ್ಲಿ ಒಂದು ದಿವ್ಯ ಮೂರ್ತಿಯು ಒಡಮೂಡಿತು. ಸಭಿಕರು ಆಶ್ಚರ್ಯಭರಿತರಾಗಿ ಆ ಮೂರ್ತಿಯನ್ನು ನೋಡುತ್ತಿರಲು, ವೃದ್ಧ ಲಕ್ಷ್ಮಣದಾಸನು ಆಸನದಿಂದೆದ್ದು ಬಂದು, ಆ ದಿವ್ಯ ಮೂರ್ತಿಯ ಅಡಿದಾವರೆಗಳಿಗೆ ಅಭಿವಂದಿಸಿದನು. ಆ ಮೂರ್ತಿಯು ಈ ದೇದೀಪ್ಯಮಾನವಾದ ತೇಜಸ್ಸಿನಿಂದ ದೀಪ್ತನಾದ ಸಮ್ರಾಟನು, ವೃದ್ಧ ಲಕ್ಷ್ಮಣದಾಸನ ಅಭಿವಂದನದಿಂದೆಚ್ಚತ್ತು ತಾನೂ ಸಿಂಹಾಸನದಿಂದಿಳಿದು ಆ ಮೂರ್ತಿಗೆ ಅಭಿವಂದಿಸಿದನು. ಕೂಡಲೆ ಸಭೆಗೆ ಸಭೆಯೇ ಉತ್ಥಾನಪೂರ್ವಕವಾಗಿ ಆ ಮೂರ್ತಿಗೆ ಸನ್ಮಾನವನ್ನು ಕೊಟ್ಟಿತು. ಪದ್ಮೆಯೂ ಆ ಮೂರ್ತಿಯನ್ನು ಅತ್ಯಂತ ಪ್ರೇಮದಿಂದ ನಮಸ್ಕರಿಸಿದಳು.

ಪ್ರಿಯಪಾಠಕರೇ, ಆ ದಿವ್ಯಮೂರ್ತಿಯು ಯಾರೆಂಬುದು ನಿಮ್ಮ ಕಲ್ಪನೆಯಲ್ಲಿ ಬಂದಿರಬಹುದು. ವೃದ್ಧ ಲಕ್ಷ್ಮಣದಾಸನ ಗುರುಗಳಾದ ನಿರಂಜನ ಯೋಗಿಗಳು ಬುದ್ಧಿಪೂರ್ವಕವಾಗಿ ಸಮ್ರಾಟನ ಸಭೆಯನ್ನು ಪ್ರವೇಶಿಸಿದ್ದರು. ಸಮ್ರಾಟನು ಅವರನ್ನು ಅತ್ಯಂತ ಶ್ರದ್ಧೆಯಿಂದ ಸಿಂಹಾಸನದಲ್ಲಿ ಕುಳ್ಳಿರಿಸಿ ತಾನು ಅವರ ಬಳಿಯಲ್ಲಿ ನಿಂತುಕೊಂಡನು. ಬಳಿಕ ಸಭೆಯಲ್ಲಿ ಸ್ತಬ್ಧತೆಯುಂಟಾಗಲು,

ನಿರಂಜನ ಯೋಗಿಗಳು ಸಮಸ್ತರನ್ನು ಕುರಿತು ನುಡಿದರೇನೆಂದರೆ:—"ಪ್ರಿಯ ಜನರುಗಳಿರಾ, ನಾನು ವನವಾಸಿಯು; ಸಿಂಹಾಸನದ ಮೇಲೆ ಕೂಡ್ರಬೇಕೆಂಬ ಹಂಬಲದಿಂದ ಇಲ್ಲಿಗೆ ಬಂದಿರುವದಿಲ್ಲ. ನಿಮ್ಮೆಲ್ಲರಿಗೆ ನಾಲ್ಕು ಧರ್ಮದ ಮಾತು ಗಳನ್ನು ಹೇಳುವದಕ್ಕೋಸ್ಕರವಾಗಿ ಬಂದಿರುತ್ತೇನೆ. ಇದುವರೆಗೆ ಗುರ್ಜರ ರಾಜರುಗಳು ನಡಿಸಿದ ಅನನ್ವಿತ ಕೃತ್ಯಗಳನ್ನು ನೆನೆಸಿದರೆ, ಮೈಕೂದಲುಗಳು ನೆಟ್ಟ ಗಾಗುವವು. ಅವರ ದುಷ್ಕೃತ್ಯಗಳಿಂದ ಸಂತಪ್ತಳಾದ ಧರ್ಮದೇವತೆಯು ಈ ಸಮ್ರಾಟ ಭೂವಣನನ್ನು ಇಲ್ಲಿಗೆ ಬರಮಾಡಿದಳೆಂದು ಹೇಳಬಹುದು. ಯಾವ ಮನುಷ್ಯನಿಗಾದರೂ ಶಾಸನದ ಅಂಜಿಕೆಯಿಲ್ಲದಿದ್ದರೆ, ಅವನಿಂದ ಧರ್ಮವನ್ನು ಪಾಲಿಸಲಿಕ್ಕಾಗುವದಿಲ್ಲ. ನಿಮ್ಮನ್ನು ಧರ್ಮನಿರತರನ್ನಾಗ ಮಾಡುವದಕ್ಕೋಸ್ಕರ ವಾಗಿಯೇ ಈ ಯೋಗವು ಪ್ರಾಪ್ತವಾಗಿರುತ್ತದೆ. ಧರ್ಮನಿರತರಲ್ಲಿ ಎಷ್ಟು ಸಾಮರ್ಥ್ಯವಿರುವದೆಂಬದನ್ನು ಈ ಸಮ್ರಾಟನನ್ನು ನೋಡಿಯಾದರೂ ತಿಳಿದು ಕೊಳ್ಳಿರಿ. ಮಂತ್ರಜ್ಞರಿಗೆ ಮಂತ್ರಸಿದ್ಧಿಯಾಗುವದಕ್ಕೆ ಧರ್ಮವು ಬೇಕು; ರಾಜರಿಗೆ ಶೌರ್ಯ-ಸಾಹಸಗಳು ಜಾಗ್ರತ ಉಳಿಯಲಿಕ್ಕೆ ಧರ್ಮವು ಬೇಕು; ಧರ್ಮಭ್ರಷ್ಟರ ಶೌರ್ಯ-ಸಾಹಸಗಳು ಅಲ್ಪಾವಕಾಶದಲ್ಲಿಯೇ ಮುಕ್ಕು ಬಿದ್ದು ಹೋಗುವವು. ಜಾಗ್ರತರಾಗಿರಿ, ಧರ್ಮದಿಂದ ಪ್ರಜೆಗಳನ್ನು ಪಾಲಿಸಿ ಕೀರ್ತಿ ಶಾಲಿಗಳಾಗಿರಿ; ಗುರ್ಜರ ಭೂದೇವತೆಯನ್ನು ಸಂತೋಷಗೊಳಿಸಿರಿ!!"

ಈ ಮೇರೆಗೆ ಮಾತನಾಡಿ ನಿರಂಜನ ಯೋಗಿಗಳು ಅಲ್ಲಿಯೇ ಅದೃಶ್ಯ ರಾದರು. ಸಮ್ರಾಟನಿಗೂ ಎಲ್ಲ ಸಭಿಕರಿಗೂ ತುಂಬಾ ಆಶ್ಚರ್ಯವಾಯಿತು. ಅವರೆಲ್ಲರು ಯೋಗಿವರ್ಯರನ್ನು ಮಹಾತ್ಮರೆಂದು ತಿಳಿದರು; ಹಾಗು ಅವ ರನ್ನು ಶತಶಃ ಅಭಿವಂದಿಸಿದರು. ಗುರ್ಜರ ಭೂಪತಿಗಳು ತಮ್ಮ ದುಷ್ಕೃತ್ಯ ಗಳಿಗೆ ನಾಚಿಕೊಂಡು ಇತಃಪರ ಅನನ್ವಿತ ಕೃತ್ಯಗಳನ್ನು ಮಾಡಲಿಕ್ಕಿಲ್ಲೆಂದು ದೃಢಸಂಕಲ್ಪವ ಮಾಡಿದರು. ಬಳಿಕ ಸಮ್ರಾಟನ ಜಯಜಯಕಾರವಾಗಿ ಸಭೆಯು ವಿಸರ್ಜಿಸಲ್ಪಟ್ಟಿತು.

ಸಮ್ರಾಟನ ಪ್ರಸಾದದಿಂದ ಮಾಲೋಜಿಯು ಕಿರುಮಂಜಿಯ ದುರ್ಗ ಕ್ಕೆ ಅಂದರೆ ಪಂಚಾಸರದ ರಾಜ್ಯಕ್ಕೆ ಅಧಿಪತಿಯಾದನು. ಕೇಸರಿಸಿಂಹ ಉರ್ಫ ಕೀರ್ತಿಸಿಂಹನು ಅಪಹರಿಸಿದ ಅವನ ರಾಜ್ಯವು ಆ ದುರ್ಗದೊಂದಿಗೆ ಅವನ ವಶ ವಾಯಿತೆಂಬದನ್ನು ಬೇರೆ ಹೇಳುವ ಕಾರಣವಿಲ್ಲ ಭಂಡಾರೀ ರಾಜನು ಸಮ್ರಾ ಟನ ಸ್ನೇಹಿತನಾಗಿ ಗುರ್ಜರ ಸಾಮಂತರಾಜರ ಮೇಲ್ವಿಚಾರಕನಾದನು. ಸಮ್ರಾ ಟನ ಪಾಣಿಗ್ರಹಣ ಮಹೋತ್ಸವಕ್ಕೆ ಭಂಡಾರೀರಾಜನ ತಂಗಿಯಾದ ಚಂಪೆಯೂ ಬಂದಿದ್ದಳು. ಸಮ್ರಾಟನು ಆಕೆಯ ಪತಿಗೆ ಅಪ್ಪಾಸರದ ಆಧಿಪತ್ಯವನ್ನು ಕೊಟ್ಟು,

ಚಂಪೆಯನ್ನು ಬಹು ವಿಧವಾದ ವಸ್ತ್ರಾಭರಣಗಳಿಂದ ತೃಪ್ತಿಗೊಳಿಸಿ, ಆ ಉಭಯತರಲ್ಲಿ ಕೃತಜ್ಞತೆಯನ್ನು ವ್ಯಕ್ತಗೊಳಿಸಿದನು. ಚಂಪೆಯ ದಾಸಿಯರಿಂದ ರಕ್ಷಿತಳಾಗಿರುವ ವಿಮಲೆಯ ಹುಚ್ಚು ಹಾಗೇ ಇದ್ದದರಿಂದ, ಆಕೆಯ ಜನ್ಮಾಂತ್ಯದವರೆಗಿನ ಸಂರಕ್ಷಣೆಯ ಭಾರವನ್ನು ಚಂಪೆಯೇ ವಹಿಸಿದಳು. ಆಕೆಯ ಈ ಪರೋಪಕಾರ ಬುದ್ಧಿಗಾಗಿ ಸಮ್ರಾಟನು ತುಂಬಾ ಆನಂದಪಟ್ಟನು. ಬಳಿಕ ವೃದ್ಧ ಲಕ್ಷ್ಮಣದಾಸನು ಸಮ್ರಾಟನನ್ನೂ ರೂಪಸುಂದರಿಯನ್ನೂ ಆಶೀರ್ವದಿಸಿ, ನಿರಂಜನ ಯೋಗಿಗಳ ಆಶ್ರಮವನ್ನು ಕುರಿತು ತೆರಳಿದನು. ಪಾಣಿಗ್ರಹಣ ಮಹೋತ್ಸವಕ್ಕೆ ಬಂದ ಎಲ್ಲ ಸಾಮಂತ ರಾಜರು ಸಮ್ರಾಟನ ಔದಾರ್ಯವನ್ನೂ, ಧರ್ಮಬುದ್ಧಿಯನ್ನೂ ಕೊಂಡಾಡುತ್ತ ತಮ್ಮ ತಮ್ಮ ದುರ್ಗಗಳಿಗೆ ಹೊರಟು ಹೋದರು.

ಗುರ್ಜರಪ್ರಜೆಗಳು ಹಳ್ಳಿಗಳಲ್ಲಿ-ಪಟ್ಟಣಗಳಲ್ಲಿ ಸಮ್ರಾಟನ ಜಯಜಯಕಾರಗಳನ್ನು ನಡಿಸಿದರು. ಆತನ ಮೇಲುಸಂಗ್ತಿಯಿಂದ ಗುರ್ಜರ ಸಂಸ್ಥಾನಾಧಿಪತಿಗಳು ಸುಮಾರ್ಗ ಪ್ರವರ್ತಕರಾದರು. ಗುರ್ಜರ ರಾಷ್ಟ್ರವು ಸರ್ವಪ್ರಕಾರಗಳಿಂದ ಸುಖಸಂತೋಷಗಳನ್ನು ಹೊಂದಿತು!

ಸಂಪೂರ್ಣ.



ಈ ಪುಸ್ತಕವು ಭಿ. ಪ. ಕಾಳೆ, ಇವರಿಂದ ತಮ್ಮ ಮಾಲಕಿಯ
"ಶ್ರೀ ಶೇಷಾಚಲ ಪ್ರಿಂಟಿಂಗ ಪ್ರೆಸ್ಸಿ"ನಲ್ಲಿ
ಮುದ್ರಿಸಲ್ಪಟ್ಟಿತು.